# ಸೂತ್ರದೀಪಿಕಾ

(ಮೂಲ : ಜಗನ್ನಾಥಯತಿ ಸಂಸ್ಕೃತವ್ಯಾಖ್ಯಾನಗಳ)
(ಮಾನಸ ಪೂಜಾ ಶ್ರೀ ಭೀಮಸೇನ ಕೃತ)

ಕನ್ನಡ ಅನುವಾದಕರು :
**ಡಾ|| ಬ್ರಹ್ಮರ್ಷಿ ವಿದ್ವಾನ್ ಪ್ರಹಲ್ಲಾದಾಚಾರ್ಯ ಉಮ್ಮರ್ಜಿ, ಎಂ.ಎ. ಎಂ.ಇ.ಡಿ.**



ಚಿತ್ರ : ವಿಷ್ಣು ಜಿವಾಜಿ

ನಮಸ್ತೆ ಪ್ರಾಣೇಶ ಪ್ರಣತ ವಿಭವಾಯವನಿಮಗಾ
ನಮಃ ಸ್ವಾಮಿನ್‌ರಾಮಪ್ರಿಯತಮ ಹನೂಮಾನ್ ಗುರುಗುಣ ನಮಸ್ತುಭ್ಯಂಭೀಮ
ಪ್ರಬಲತಮ ಕೃಷ್ಣೇಷ್ಠಭಗವನ್ ನಮಃ ಶ್ರೀಮನ್ ಮಧ್ವಪ್ರದಿಶ ಸದ್ಮಶಂ ಜಯಜಯ

ಪ್ರಕಾಶಕರು :

ಚಿ.ಕ್ರಿ. ವೇದವ್ಯಾಸಾಚಾರ್ಯ

**ಶ್ರೀ ಸಮೀರ ಸಮಯ ಸಂಜೀವಿನೀ ಸಂಸತ್ (ಟ್ರಸ್ಟ್) ಪ್ರತಿಷ್ಠಾನ**

"ಅನಂತ ಪದ್ಮನಾಭ", ನಂ. 16, 1ನೇ ಅಡ್ಡ ರಸ್ತೆ, ಮಲ್ಲೇಶ್ವರ, ಬೆಂಗಳೂರು-560 003
ದೂರವಾಣಿ : 23560427 / ಮೊಬೈಲ್ : 9880908949



ಶ್ರೀಮದಾನಂದತೀರ್ಥಭಗವತ್ಪಾದರು

ಶ್ರೀಮನ್ಮದ್ವಮತೇ ಹರಿಪರಿತರಃ ಸತ್ಯಂಃಜಗತ್ ತತ್ವತೊ ಭಿನ್ನಾಃ ಜೀವಗಣಾಃ ಹರೇರನುಚರಾಃ,
ನಿಚೋಃಚ್ಛಭಾವಂ ಗತಾಃ। ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಶ್ಚ
ತತ್ಸಾಧನಂ ಹ್ಸಕ್ಷಾದಿ ತ್ರಿತಯಂ ಪ್ರಮಾಣಃ ಮಖಿಮ್ನಾಖಿಲಾ ಮನಾಯೈಕೆ ವೇದ್ಯೋಃಹರಿಃ।

# ಸೂತ್ರದೀಪಿಕಾ

(ಮೂಲ : ಜಗನ್ನಾಥಯತಿ ಸಂಸ್ಕೃತವ್ಯಾಖ್ಯಾನಗಳ)
(ಮಾನಸ ಪೂಜಾ ಶ್ರೀ ಭೀಮಸೇನ ಕೃತ)

ಕನ್ನಡ ಅನುವಾದಕರು :
ಡಾ|| ಬ್ರಹ್ಮರ್ಷಿ ವಿದ್ವಾನ್ ಪ್ರಹಲ್ಲಾದಾಚಾರ್ಯ ಉಮ್ಮರ್ಜಿ, ಎಂ.ಎ. ಎಂ.ಇ.ಡಿ.



ಚಿತ್ರ : ವಿಷ್ಣು ಜಿವಾಜಿ

ನಮಸ್ತೆ ಪ್ರಾಣೇಶ ಪ್ರಣತ ವಿಭವಾಯವನಿಮಗಾ
ನಮಃ ಸ್ವಾಮಿನ್‌ರಾಮಪ್ರಿಯತಮ ಹನೂಮಾನ್ ಗುರುಗುಣ ನಮಸ್ತುಭ್ಯಂಭೀಮ
ಪ್ರಬಲತಮ ಕೃಷ್ಣೇಷ್ಟಭಗವನ್ ನಮಃ ಶ್ರೀಮನ್ ಮಧ್ವಪ್ರದಿಶ ಸದ್ದೃಶಂ ಜಯಜಯ

ಪ್ರಕಾಶಕರು :
ಚಿ.ಕ್ರಿ. ವೇದವ್ಯಾಸಾಚಾರ್ಯ
**ಶ್ರೀ ಸಮೀರ ಸಮಯ ಸಂಜೀವಿನೀ ಸಂಸತ್ (ಟ್ರಸ್ಟ್) ಪ್ರತಿಷ್ಠಾನ**
"ಅನಂತ ಪದ್ಮನಾಭ", ನಂ. 16, 1ನೇ ಅಡ್ಡ ರಸ್ತೆ, ಮಲ್ಲೇಶ್ವರ, ಬೆಂಗಳೂರು-560 003
ದೂರವಾಣಿ : 23560427 / ಮೊಬೈಲ್ : 9880908949

**ಸೂತ್ರದೀಪಿಕಾ** : (ಮೂಲ : ಜಗನ್ನಾಥಯತಿ ಸಂಸ್ಕೃತವ್ಯಾಖ್ಯಾನಗಳ), (ಮಾನಸ ಪೂಜಾ ಶ್ರೀ ಭೀಮಸೇನ ಕೃತ): ಕನ್ನಡ ಅನುವಾದಕರು : ಡಾ|| ಬ್ರಹ್ಮರ್ಷಿ ವಿದ್ವಾನ್ ಪ್ರಹಲ್ಲಾದಾಚಾರ್ಯ ಉಮ್ಮರ್ಜಿ, ಎಂ.ಎ. ಎಂ.ಇ.ಡಿ. ಪ್ರಕಾಶಕರು : ಚಿ.ಕ್ರಿ. ವೇದವ್ಯಾಸಾಚಾರ್ಯ **ಶ್ರೀ ಸಮೀರ ಸಮಯ ಸಂಜೀವಿನೀ ಸಂಸತ್ (ಟ್ರಸ್ಟ್) ಪ್ರತಿಷ್ಠಾನ** "ಅನಂತ ಪದ್ಮನಾಭ", ನಂ. 16, 1ನೇ ಅಡ್ಡ ರಸ್ತೆ, ಮಲ್ಲೇಶ್ವರ, ಬೆಂಗಳೂರು-560 003. ದೂರವಾಣಿ: 23560427 / ಮೊಬೈಲ್ : 9880908949

ಪುಟಗಳು 200

ಪ್ರಥಮ ಮುದ್ರಣ : 2012

ಅಳತೆ : 1/8 ಡೆಮ್ಮಿ

ಕಾಗದದ ಬಳಕೆ : 70 ಜಿ.ಎಸ್.ಎಂ. ಮ್ಯಾಪ್ಲಿಥೋ

ಪ್ರತಿಗಳು : 500

ಬೆಲೆ : ರೂ. **100–00**

ಮುದ್ರಣ :



ವಿಶ್ವಾಸ್ ಪ್ರಿಂಟ್ಸ್
VISHWAS PRINTS

29/1, 3ನೇ ಅಡ್ಡರಸ್ತೆ, ನಂಜಾಂಬ ಅಗ್ರಹಾರ
ಚಾಮರಾಜಪೇಟೆ, ಬೆಂಗಳೂರು - 18
ದೂರವಾಣಿ : 26604835

## ।। अथ श्रीमानसपूजा पाः ।।

।। श्रीवेदव्यासायनमः ।। श्रीगुरुभ्योनमः ।।
ब्रह्मेशाद्यैःसेव्यमानं गुणाब्धिं दोषैर्हीनं देवकीनंदनं तं ।।
सालंकारं सायुधं भक्तसेव्यं सर्वाधारं विष्णुमावाहयामि ।।
१ ।। कल्पद्रुमूले मणिशोभिमूम्यांसिंहासनं स्वर्णमय
सरत्नं ।। विचित्रवस्त्रावृतमच्युत प्रभो गृहाणा
लक्ष्मीधरणीसमान्वित ।। २ ।। पादोदकार्ध्याचमनानि
कृष्ण त्रिविक्रमानंत गुणाधिदेव ।। दध्यादियुक्तं मधु
पर्कमग्रयं गृहाण लोकेश यथा क्रमेण ।। ३ ।। तीर्थोदकैः
कांचनकुंभसंभृतैः सुवासितैर्देवदयारसार्द्र ।। मयार्पितं
स्नानमिदं गृहाणपादाब्जनिश्चूतनदीप्रवाह ।। ४ ।।
स्वर्णांचलं चित्रविचित्रशोभितं कौशेययुग्मं परिक ल्पितं
मया ।। दामोदर प्रावरणं गृहाण माया बलप्रावृ-
तदिव्यरूप ।। ५ ।। सुवर्णतंतूद्भवयज्ञसूत्रं मुक्ताफल
स्यूतमनेकवर्ण ।। गृहाण भो सत्कृतमुत्तरीयं स्वकर्मसू त्रांतक
ते नमोस्तु ।। ६ ।। कस्तूरीका-कर्दमचंद्रसंज्ञ
कास्मीरसंयोजितगंधसारं ।। विलेपनं स्वीकुरु देव देव
थ्योजभागेचमया विधेयं ।।७ ।। सेवंतिकाबकुलकेतकि
पाटलाब्जैः पुन्नागजातिकर-वीररसालपुष्पैः ।। बिल्वप्र
वालतुलसीदलमल्लिकाभिस्त्वां पूजयामि यदुपुंगव
वासुदेव ।। ८ ।। आरामपुष्पाणि वनोद्भवानि जलाशयस्था
नि सुपल्लवानि ।। सुवर्णपुष्पाणि मयार्पितानि संगृह्य तां
देववरप्रसीद ।।९ ।। श्रीखंडलाक्षासितकुष्टदिव्य

कस्तूरिकालागरुचंदनाद्यैः ।। कर्पूरवालागरु देवदारु मांसीनखैः शैलजपूतिकाभिः ।। १० ।। सारागरु-प्रचुरगुग्गुलगंधधूपैर्नानाविधैश्चरभसाखिलदिग्प्रसारैः ।। आराधयामि यदुपुंगव वासुदेव लक्ष्मीपते मयि दयां कुरु लोकनाथ ।। ११ ।। सूर्येंदुकोटिप्रतिभासमानां दीपावलिं गोघृतवर्तियुक्तां ।। गृहाणलोकत्रयापूजितांघ्रे दीपप्रजालेषु विराजमान ।।१२ ।। सौवर्णे स्थालिसंघे मणिगणखचिते गोघृताक्तान्सुप-क्वान्भक्षान्भोज्यांश्च लेह्यानपरमपि च यच्चोष्यमन्नं निधाय ।। नानाशाकै रुपेतं दधिमधुसुघृतं क्षीरपानीययुक्तं तांबूलं चापि विष्णो प्रतिदिवसमहंमानसे चिंतयामि ।। १३ ।। अपूवान्विविधान्स्वादून्शालिपिष्टोप-पादितान् ।। प्रोत्फुल्लैर्ल ङ्कैर्युक्तान्सजीरकमरीचकान् ।। १४ ।। कदलीपनसाम्राणां सुपक्वानि फलानिच ।। कंदमूलव्यंजनानि सूपमिफलानि च ।। १५ ।। शुष्कुल्यस्तिलमोदकाधृ तमहा नानाविधामोदकापानार्थं पृथुकाश्चशर्कश्चरयुताः पुड्राश्चमुद्गादयः ।। खर्जुरीकदलीर-सालपनसद्राक्षा क पित्थादिकंरुच्यं स्वाह्वमृतोपमं फलयुतं संगृह्यतामच्युत ।। १६ ।। याप्रीतिर्विदुरार्पिते मुररिपो कुंत्यार्पिते यादव या गोवर्धनमूर्ध्नि या चपृथुके स्तन्ये यशोदार्पिते ।। भारद्वाजसमर्पिते शबरीकादत्तेधरे योषितां या प्रीतिर्मुनिप-त्निभक्तिरचिते ह्यत्रार्पिते तां कुरु ।। १७ ।। अन्नं चतुर्विधं कृष्ण क्षीरान्नं सगुडं घृतं ।। सितोदकं शीतलं च कर्पुरैलादिवासितं ।। १८ ।। वटकादधिनिक्षिप्ताः

श्रृंगबेरफलादिकं ।। हिंगुसामुद्रमा रीचसंस्कृतं परिगृह्यतां ।। १९ ।। सुपूगखंडं ससुपक्कपर्णं सशंखचूर्णं घनसारमिश्रं ।। सुवासितं देवदयार सार्द्र तांबू-लमेतत्करुणापयोधे ।। २० ।। नीराजनं स्वीकुरु देवदेव नीलोत्पलश्यामल नीरजाक्ष ।। स्वमायया लालितपादपद्म ज्ञानप्रदीपं कुरु ते नमोस्तु ।। २१ ।। पुष्पांजलिं स्वीकरु पुष्कराक्ष प्रसन्नकल्पद्रुम कल्पवल्याः ।। इंद्रादिवृंदारकवंद्यपाद सर्वांतरात्मन्जगदीश विष्णो ।। २२।। छत्रंचामरयोर्युगं व्यजनकं चादर्शकं मर्दलं शंखं भेरिमृदंगकाहलकलागीतं च नृत्यं तथा ।। सांष्टागः प्रणतीः स्तुतीर्बहुविधाह्येतत्समस्तं मया संकल्पेन समर्पितं त्वयि विभो संतुष्टये स्वीकरु ।। २३ ।। शांतं शाश्वतमद्वितीयमनघं सेव्यं सितं सुंदरं सत्यज्ञानमनंतमच्युतमजं सर्वात्मकं सर्वगं ।। योगिध्येयमनंतरूपमसकृन्मायावृतं माधवं वंदे संततमप्रत र्क्यविभवं श्रीकृष्णरूपं हरिं ।। २४ ।। अंतर्बहिः संस्थितमप्रत-र्क्यमानंदकं दं कमलासनस्थं ।। क्षीराब्धिम ध्ये कृतशेषतल्पमुद्वासयामीश्वरमात्मलोलं ।। २५ ।। नमोस्तु ते भक्तसंघपालिने लोकपालिने ।। राधापयो धरोत्संग-शायिने शेषशा-यिने ।। २६ ।। इतिश्रीमद्भीमसेनविरचि-तमानस-पूजासमाप्ता ।। श्रीकृष्णार्पणमस्तु ।।

# ಪೀಠಿಕೆ



ನಮ್ಮ ಮಾಧ್ವ ಭಾಗವತ ಪರಂಪರೆಯಲ್ಲಿ ಪುರುಷರೂ ಮಂಗಳಕರವಾದ ಸೂತ್ರಗಳೆಂಬ ಮಂಗಲ ಸೂತ್ರವನ್ನು ಕಂಠದಲ್ಲಿಧಾರಣೆ ಮಾಡಬೇಕೆಂಬುದನ್ನು ಸೂಕ್ತವಾಗಿ ವರ್ಣನೆ ಮಾಡಿದ್ದು ಭಾಗವತ ದಮಂಗಲಾಚರಣೆ ರೂಪ ಕೊನೆಯ "ಯಂಬ್ರಹ್ಮಾ" ಎಂಬ ಪದ್ಯದ ವಿರೋಧೋದ್ಧಾರಕಾರ ಟಿಪ್ಪಣಿಯಿಂದ ಪರಮಾತ್ಮನೆಂಬ ಪತಿಯ ನಾಮವನ್ನು ಒಗಟರ ರೂಪದಿಂದ ಉಚ್ಚರಿಸಬೇಕೆಂಬುದಾಗಿತೋರಿಸಿದ್ದಾರೆ ಅಂತಹ ಪತಿಯು ಕಡೆಯಿಂದ ಪರಮಂಗಲಕರವಾದ-ಕುತ್ತಿಗೆ ಯಾವಕಾಲದಲ್ಲಾಗುತ್ತದೆ ಎಂದರೆ ಸೂತ್ರ-(ಧಾರಾ)-ಎಂತಹಧಾರಯಂದರೆ ಅಛಿಚಿನ್ನವಾಗಿ (ಯಾವಾಗಲೂ) ಧಾರಾಕಾರವಾಗಿ ದೇವರ ಮಹಾತ್ವಜ್ಞಾನ ನಾಮ ವಿಶಿಷ್ಠವಾದ ಭಕ್ತಯೆಂಬ ಧಾರೆಳೆ ಪ್ರೇಮ ಪ್ರವಾಹ ರೂಪಾ ಎಂದು ಸೂತ್ರಾರ್ಥ ವಿವರಣೆಯ ರೂಪವಾದ ಶ್ರೀಮನ್ನ್ಯಾಯಸುಧೆಯಲ್ಲಿ ವರ್ಣನೆ ಮಾಡಿರುವಂತೆ ಅಂತಹ ಬ್ರಹ್ಮಸೂತ್ರಗಳ ಸಾಮಾನ್ಯ ಅರ್ಥವನ್ನಾದರೂ ತಿಳಿದು ನಿತ್ಯ ಶ್ರವಣಮನನ ನಿದಿಧ್ಯಾನ ದಿಠಣಪಾರಾಯಣ ಮಾಡುವುದೇ ಕುತ್ತಿಗೆಗೆ ಮಂಗಲವೇ ವಿನಃ ಕಂಡಾಭರಣಗಳನ್ನು ಧಾರಣೆ ಮಾಡುವುದರಿಂದ ಆಗುವುದಿಲ್ಲವೆಂಬ ಅಭಿಪ್ರಾಯವನ್ನುಹೃದಯದಲ್ಲಿಟ್ಟುಕೊಂಡ ಪರಮಪೂಜ್ಯರಾದ ವ್ಯಾಸರಾಜ ಮಠದ ಪರಂಪರೆಯಲ್ಲಿ ವಿರಾಜಮಾನರಾದ ಜಗನ್ನಾಥಯತಿವಕೇತರು ಬ್ರಹ್ಮಸೂತ್ರ ಷ್ಯಾದಭಾಷಾರ್ಥವನ್ನು ಆತ್ಯಂತಗಹನಕ ತಕ್ಕವಾದ ಶೈಲಿಯಲ್ಲಿ ನಿರ್ಮಾಣ ಮಾಡಿ ಬ್ರಹ್ಮ ಸೂತ್ರಗಳ ಅರ್ಥ ಹೇಗೆ ಅತ್ಯಂತಕಠಿಣವೋ ಹಾಗೆಯೇ ಅತ್ಯಂತ ಸುಲಭವೂ ಆಗಿದೆ. "ಬಾಲಸಂಗಮ-ಪಿಬೋಧಮ-ದ್ಭುಶಂ ದುರ್ನಿರೂವಚನಂಚಪಂಡಿತ್ವೈ" ಎಂಬ ಪಂಡಿತಾ ಚಾರ್ಯರ ವಚನದಂತೆ ಕೇವಲ ಕಬ್ಬಿಣ ಕಡಲೆಯಂತಾದರೆ ಯಾವ ಸಾಧಕ ಪಿಪಾಸುಗಳೂ ಸುತ್ರಾರ್ಥಗಳ ಪರಿಜ್ಞಾನದ ಕಡೆಗೆ ಹೋಗದೇ ಇರಬಹುದೆಂದು ವಿಚಾರಮಾಡಿ ಶ್ರೀ ಪೂಜ್ಯ ಜಗನ್ನಾಥ ಯತಿಗಘೆಳು

ಸಂಪ್ರದಾಯಸ್ಥ ಅನುಯಾಮಗಳೆಲ್ಲರಿಗೂ ಅನುಕೂಲಕರವಾದ ಅತ್ಯಂತ ಸುಚಲಿತವಾಗಿ ಕಂಠ (ಕುತ್ತಿಗ) ಸೂತ್ರ ಉಚ್ಚರಿಸಲು ಅನುಕೂಲವಾಗಿ ಶೋಭಾಮಾನವಾಗುವಂತೆ ಗ್ರಾಂಥ ರಚನೆಯನ್ನು ಮಾಡಿ ಮಹದು ಪ್ರಕಾರವನ್ನು ಮಾಡಿದ್ದಾರೆ.

ಆದರೆ ಸಂಸ್ಕೃತ ಭಾಷೆಯ ಪರಿಚಯವಿಲ್ಲದಿದ್ದರೂ ಆಚಾರ್ಯ ಮಧ್ವರ ಶಾಸ್ತ್ರದಲ್ಲಿ ಪರಮಾದರಪೂರ್ಣರಾದ ಆಪ್ತಿಕಸಜ್ಜನರೆಲ್ಲರೂ ಅರ್ಥಪೂರ್ವಕ ಪಾರಾಯಣ ಮಾಡುವ ಅಪೇಕ್ಷಉಳ್ಳರಾಗಿರುತ್ತಾರೆ. ಆದರೆ ಜ್ಞಾನಿಗಳ ಸಮಾಗಮ ಮಾಡಿಕೊಂಡು ಅವರಿಂದ ಶ್ರವಣ ಮಾಡಿ ಅರ್ಥ ತಿಳಿದುಕೊಳ್ಳುವುದಕ್ಕೆ ಕಾಲಾವಕಾಶವೂ ಇರುವುದಿಲ್ಲ. ಅಂತಹ ಭಗವಚ್ಛಕ್ತರಿಗೆ ಸುಲಭವಾಗಿ ಕನ್ನಡ ಭಾಷೆಯಲ್ಲಿ ಸೂತ್ರದೀಪಿಕೆಯ (ಕನ್ನಡ) ವ್ಯಾಖ್ಯಾನವನ್ನು ಶ್ರೀ ಉತ್ತರಾದಿಮಠದ 1008 ಶ್ರೀ ಸತ್ಯ ಪ್ರಮೋದತೀರ್ಥ ಶ್ರೀ ಪಾದಂಗಳವರ ಪ್ರಿಯ ಶಿಷ್ಯರಾದ ಬ್ರಹ್ಮರ್ಷಿ ಡಾ॥ ಉಮರ್ಜಿ ಭಂಡಾಚಾರ್ಯಸುತ ಸುತಪ್ರಲ್ಹಾದಾಚಾರ್ಯರು ಮಾಡಿದ್ದು ಇದರ ಪಠಣ ಪಾರಾಯಣಾಧಿಗಳನ್ನು ಮಾಡಿ ಶ್ರೀ ವೇದವ್ಯಾಸಾಭಿನ್ನ ಶ್ರೀ ರುಕ್ಮಿಣೀಪಾಂಡು ರಂಗನು ಪಾಠಕರಲ್ಲದ ಮೇಲೆ ಅನುಗ್ರಹಿಸುವನು ಅದಕ್ಕೆ ಸಮಸ್ತ ಆಸ್ತಿಕದಿಂದಲೂ ಆವಶ್ಯಸುಸೇವ್ಯವಾಗಲಿ.

ಈ ಗ್ರಂಥ ಪ್ರಕಾಶನಕಾರ್ಯವನ್ನು ಮಾಡಲು ಮುಂದಾದ ಶ್ರೀ 108 ಪ್ರಜ್ಞಾನಿಧಿತೀರ್ಥ ಶ್ರೀ ಪಾದಂಗಳವರ (ಮುಳಬಾಗಿಲು) ಪ್ರಿಯ ಶಿಷ್ಯರಾದ ಶ್ರೀ ವೇದವ್ಯಾಸಾಚಾರ್ಯರಿಗೂ ಹಾಗೂ ಈ ಕಾರ್ಯದಲ್ಲಿ ಸಕ್ರಿಯ ಸಹಭಾಗಿಗಳಾದ ಎಲ್ಲ ಸಜ್ಜನರಿಗೂ ಸುತ್ರ ಪ್ರತಿಪಾದ್ಯರಾದ ಮಧ್ವಾಂತರ್ಗತ ಬಾದರಾಯಣ ದೇವರು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ತಮ್ಮ ಸುಜನ ಸೇವಕ,

**ಡಾ॥ ಬ್ರಹ್ಮರ್ಷಿ ಉಮರ್ಜಿ ಪ್ರಲ್ಹಾದಾಚಾರ್ಯ.**
**ಮೊ.: 9972943528**
**ಕೆಂಗೇರಿ ಉಪನಗರ, ಬೆಂಗಳೂರು- 560 0060.**

# ಅನುಗ್ರಹ ಸಂದೇಶ



ನಮ್ಮ ಮಠದ ಮೇಲೆ ವಿಶೇಷ ಅಭಿಮಾನವುಳ್ಳ, ನಮ್ಮ ಗುರುಗಳಲ್ಲಿ ಗೌರವಾದರಗಳನ್ನು ಹೊಂದಿದ್ದ ಹಾಗೂ ನಮಗೆ ಬಹಳ ಆಪ್ತರಾದ ಬ್ರಹ್ಮರ್ಷಿ ಡಾ॥ ಉಮರ್ಜಿ ಪ್ರಹ್ಲಾದಾಚಾರ್ಯರು ರಚಿಸಿರುವ ಶ್ರೀವ್ಯಾಸರಾಜರ ದಿವ್ಯ ವೇದಾಂತ ಸಿಂಹಾಸನದಲ್ಲಿ ವಿರಾಜಮಾನರಾದ ಶ್ರೀ ಜಗನ್ನಾಥಯತಿಗಳಿಂದ ರಚಿಸಲ್ಪಟ್ಟ **ಸೂತ್ರ ದೀಪಿಕಾ** (ಬ್ರಹ್ಮಸೂತ್ರ ದೀಪಿಕಾ) ಎಂಬ ಗ್ರಂಥವು ಉತ್ತಮವಾಗಿದ್ದಲ್ಲದೇ ಹಾಗೂ ಶ್ಲಾಘನೀಯವೂ ಆಗಿದೆ. ಈ ಗ್ರಂಥಕ್ಕೆ ಶ್ರೀ ಉಮರ್ಜಿ ಆಚಾರ್ಯರು ಕನ್ನಡ ಅನುವಾದಮಾಡಿ ಪ್ರತಿಯೊಂದು ಸೂತ್ರಗಳ ಅರ್ಥವನ್ನು ನೀಡಿದ್ದಾರೆ.

ಈ ಗ್ರಂಥದ ಮುಖ್ಯ ಅಂಶವೆನೆಂದರೆ ಬ್ರಹ್ಮಸೂತ್ರಗಳಿಗೆ ಶ್ರೀ ಜಗನ್ನಾಥಯತಿಗಳು ಸಂಸ್ಕೃತದ ಅರ್ಥವನ್ನು ನೀಡಿದ್ದಾರೆ. ಶ್ರೀ ಉಮರ್ಜಿ ಆಚಾರ್ಯರು ಕನ್ನಡದಲ್ಲಿ ಸುಲಲಿತವಾಗಿ ಪಂಡಿತ, ಪಾಮರರಿಗೂ ಅರ್ಥವಾಗುವ ರೀತಿಯಲ್ಲಿ ಅರ್ಥ ನೀಡಿರುವುದು ಉತ್ತಮವಾದ ಕೆಲಸವೇ ಸರಿ. ಈ ಪುಸ್ತಕದ ಉಪಯೋಗವನ್ನು ಆಸ್ತಿಕರೆಲ್ಲರೂ ಪಡೆದರೆ ಅಚಾರ್ಯರ ಶ್ರಮಕ್ಕೆ ಫಲದೊರೆತಂತಾಗುತ್ತದೆ.

ಇಂತಹ ಕೆಲಸಗಳನ್ನು ಬ್ರಹ್ಮಋಷಿಗಳೆಂದು ಕರೆಸಿಕೊಳ್ಳುವ ಶ್ರೀ ಉಮರ್ಜಿ ಪ್ರಹ್ಲಾದಾಚಾರ್ಯರಿಗೆ ನಾವು ನಮ್ಮ ಆರಾಧ್ಯಮೂರ್ತಿ ಶ್ರೀ ಹಯವದನ ರಂಗವಿಠಲ ಗೋಪೀನಾಥದೇವರ ಅನುಗ್ರಹ ಸದಾ ಇರಲೆಂದು ಆಶಿಸುತ್ತೇವೆ.

ಇಂತಿ

**ನಾರಾಯಣ ಸ್ಮರಣೆಗಳು**
**ಶ್ರೀ ಶ್ರೀಕೇಶವನಿಧಿತೀರ್ಥ ಶ್ರೀಪಾದಂಗಳವರು.**



# ಅನುಗ್ರಹ ಸಂದೇಶ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯರಾದ ಪದವಾಕ್ಯ ಪ್ರಮಾಣ ಪಾರಾವಾರೀಣಸರ್ವ ತಂತ್ರಸ್ವ-ತಂತ್ರರಾದ ಶ್ರೀ ಮಧ್ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾ-ಚಾರ್ಯರಾದ ಶ್ರೀಮನ್ಮೂಲಗೋಪಾಲ ಕೃಷ್ಣ ಶ್ರೀ ಮೂಲ ಪಟ್ಟಾಭಿರಾಮ ವೇದವ್ಯಾಸ ದೇವರ ದಿವ್ಯಪಾದಪದ್ಮಾರಾಧಕರಾದ ಶ್ರೀ ಮಧ್ವಾಚಾರ್ಯರ ಮೂಲ ಮಹಾಸಂಸ್ಥಾನ ಶ್ರೀ ರಾಜೇಂದ್ರತೀರ್ಥರ ಪೂರ್ವಾದಿಮಠೀಯ ಶ್ರೀಮದ್ ವ್ಯಾಸರಾಜ ಗುರು ಸಾರ್ವಭೌಮ ವಿದ್ಯಾ ಕರ್ನಾಟಕ ಸಿಂಹಾಸನಾಧೀಶ್ವರರಾದ ಶ್ರೀ ಶ್ರೀ 1008 ಶ್ರೀ ಮದ್ವಾಚಸ್ಪತೀರ್ತಿರ್ಥರಕರಕಮಲ ಸಂಜಾತರಾದ ಶ್ರೀ 1008 ಶ್ರೀ ವಿದ್ಯಾಮನೋಹರತೀರ್ಥ. ಶ್ರೀ ಪಾದಂಗಳವರಿಂದ ಕೊಟ್ಟ ಪರಮಾನುಗ್ರಹ ಸಂದೇಶ. ನಮ್ಮ ಮಠದ ಪರಂಪರೆಯಲ್ಲಿ ವಿರಾಜಮಾನರಾದ ವ್ಯಾಸರಾಜ ಪರಮಾನುಗ್ರದೊಂದಿಗೆ ಶೇಷಚಂದ್ರಿಕಾಚಾರ್ಯರೆಂದೇ ಖ್ಯಾತರಾದ ರಘುನಾಥ ತೀರ್ಥರ ವಿಶೇಷಾನುಗ್ರಹಕ್ಕೆ ಪಾತ್ರರಾದ ಶ್ರೀ ಕುಂಭಕೋಣದಲ್ಲಿ ಬೃಂದಾವನಸ್ಥರಾಗಿರುವ ಶ್ರೀ ಪ. ಪೂಜ್ಯ 1008 ಶ್ರೀ ಜಗನ್ನಾಥ ಯತಿಗಳಿಂದ ಸಮಸ್ತ ಆಸ್ತಿಕಮಾಧ್ವರಿಗೆ ಅವಶ್ಯಪಾರಾಯಣ ಪಠಣಕ್ಕೆ ಅನುಕೂಲವಾಗುವಂತೆ **"ಸೂತ್ರದೀಪಿಕ"** ಎಂಬ ಹೆಸರಿನಿಂದ ಬ್ರಹ್ಮ ಸೂತ್ರಗಳ ಪ್ರಕಾಶನ ಸಾಧನ ರೂಪವಾದ ಈ ಬ್ರಹ್ಮಗುರು ಸೂತ್ರ ದೀಪಿಕೆ ಗ್ರಂಥ ರಚನೆಯನ್ನು ಮಾಡಿದ್ದಾರೆ.

ಅದೇ ಗ್ರಂಥದ ಕನ್ನಡ ಅನುವಾದವನ್ನು ಎಲ್ಲ ಸಾಮಾನ್ಯ ಭಾವುಕರಿಗೆ ತಿಳಿಯುವಂತೆ ನಮ್ಮ ಮಠಾಭಿಮಾನಿಗಳಾದ ಡಾ॥ ಬ್ರಹ್ಮರ್ಷಿ ಉಮರ್ಜಿ ಪ್ರಲ್ಹಾದಾಚಾರ್ಯರು ರಚನೆ ಮಾಡಿದ್ದಾರೆ. ಎಲ್ಲ ಆಸ್ತಿಕರೂ ಈ ಗ್ರಂಥವ ಪಾರಾಯಣಾದಿರೂಪ ಉಪಯೋಗ ಮಾಡಿಕೊಂಡು ನಮ್ಮ ಉಪಾಸ್ಯ ಮೂರ್ತಿಯಾದ ಶ್ರೀ ಮೂಲಗೋಪಾಲಕೃಷ್ಣದೇವರ ಕೃಪಾಪಾತ್ರರಾಗಬೇಕು.

ಇಂತಿ

**ನಾರಾಯಣ ಸ್ಮರಣೆಗಳು**
**ಶ್ರೀ 1008 ಶ್ರೀ ವಿದ್ಯಾಮನೋಹರತೀರ್ಥ ಶ್ರೀಪಾದಾಃ**
**ವ್ಯಾಸರಾಜ ಮಠ, ಸೋಸಲೆ.**

# ಪ್ರಕಾಶಕರ ಬಿನ್ನಹ

ಶ್ರೀ ಸಮೀರ ಸಮಯ ಸಂಜೀವಿನೀ ಪ್ರತಿಷ್ಠಾನ, ಶ್ರೀಹರಿ ಗುರುಗಳ ಅನುಗ್ರಹದಿಂದ ಹದಿನೇಳನೇಯ (17) ಪುಷ್ಪವನ್ನು ಶ್ರೀ ಶ್ರೀ 108 ಜಗನ್ನಾಥಯತಿಯರಿಂದ ಸಂಸ್ಕೃತ ಮೂಲದಲ್ಲಿರುವ ಸೂತ್ರ ದೀಪಿಕಾ ಗ್ರಂಥದ ಕನ್ನಡ ಅನುವಾದದೊಂದಿಗೆ ಬಗವದ್ ಭಕ್ತಿರಿಗೆ ಅರ್ಪಿಸುತ್ತಿದ್ದೇವೆ.

ನಮ್ಮ ಪ್ರಕಾಶನಕ್ಕೆ ಅಭೂತಪೂರ್ವ ಸಹಕಾರವನ್ನು ನೀಡುತ್ತಿರುವ ವಿದ್ವಾಂಸರಿಗೂ ಹಾಗೆಯೂ ಉತ್ತೇಜನ ಕೊಡುತ್ತಿರು ಸರ್ವರಿಗೂ ಈ ಪ್ರಕಾಶನವನ್ನು ಮುಂದುವರಿಸುತ್ತೀರೆಂದು ನಂಬಿದ್ದೇವೆ.

ಈ ಗ್ರಂಥವನ್ನು ಕನ್ನಡಕ್ಕೆ ಅನುವಾದ ಮಾಡಿಕೊಟ್ಟಿರುವ **ಬ್ರಹ್ಮರ್ಷಿ ಡಾ|| ಉಯರ್ಜಿಪ್ರಲ್ಹಾದಾಚಾರ್ಯ**ಗೂ, ಹರಿಗುರುಗಳ ಅನುಗ್ರಹವಾಗಲೆಂದು ಪ್ರಾರ್ತಿಸುತ್ತೇವೆ.

ಈ ಗ್ರಂಥಕ್ಕೆ ಆಶೀರ್ವಚನ ನೀಡಿರುವ ಶ್ರೀ ಶ್ರೀ 108 ಪಾದರಾಜ ಮಠಾದೀಶರಿಗೂ ಹಾಗೂ ಶ್ರೀ 108 ವ್ಯಾಸರಾಜ ಮಠಾದೀಶರಿಗೂ ನಮ್ಮ ಶಿರಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಈ ಪ್ರಕಾಶನದ ಭಾಗಿಯಾಗಿರುವ ನಮ್ಮ ಮಿತ್ರರಾದ ಶ್ರೀ ಹೆಚ್.ಆರ್. ನಾಗೇಶರವರಿಗೂ ಹಾಗೂ ಅವರ ಕುಟುಂಬದವರಿಗೂ ಹರಿಗುರುಗಳು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಈ ಗ್ರಂಥದ ಅಕ್ಷರ ಜೋಡಣೆಯನ್ನು ವಹಿಸಿದ ಎನ್.ವಿ.ವಿ. ಗ್ರಾಫಿಕ್ಸ್‌ನ ಶ್ರೀಮತಿ ವಸಂತರವರಿಗೂ ಹಾಗೂ ಅಲ್ಪಸಮಯದಲ್ಲಿ ಮುದ್ರಣದ ಕಾರ್ಯವನ್ನು ನಿರ್ವಹಿಸಿದ ಸಹನಾ ಗ್ರಾಫಿಕ್ಸ್‌ನ ಶ್ರೀ ಆನಂದರವರಿಗೂ ನಮ್ಮ ಸಂಸ್ಥೆಯ ಪರವಾಗಿ ವಂದನೆಗಳನ್ನು ಅರ್ಪಿಸುತ್ತೇವೆ.

ಈ ಗ್ರಂಥದ ಬಿಡುಗಡೆಯನ್ನು ನಮ್ಮ ಗುರುಗಳಾದ ಶ್ರೀ 108 ಪ್ರಜ್ಞಾನ ನಿಧಿತೀರ್ಥ ಶ್ರೀಪಾದಂಗಳ ಆರಾಧನೆ (ತಾ|| 06-11-2012) ರಂದು-ನಂದನನಾಮ ಸಂವತ್ಸರ ಆಶ್ವಿಜ ಬಹುಳ ಸಪ್ತಮಿಯಂದು ಬಿಡುಗಡೆ ಮಾಡಲು ಇಚ್ಛಿಸುತ್ತೇವೆ.

ಚಿ|| ಕ್ರಿ. ವೇದಾವ್ಯಾಸಾಚಾರ್ಯ
ಪ್ರಧಾನ ಟ್ರಸ್ಟೀ
ಮಲ್ಲೇಶ್ವರಂ, ಬೆಂಗಳೂರು-3



ಶ್ರೀಮದ್ ಅನಂತಪದ್ಮನಾಭ

ಶ್ರೀ ಪಾಂತುನಃ ಪದ್ಮನಾಭಸ್ಯ ಶ್ರೀಪದಾಂ ಭೋಜರೇಣವಃ
ಕಮಲಾಕಭರೀಭಾರ ಸುರಭೀಕರಣೋದ್ಯತಾ ।



**ಶ್ರೀ ಶ್ರೀ 108 ಶ್ರೀಪ್ರಜ್ಞಾನನಿಧಿತೀರ್ಥರು**



ಪಂಡಿತ ಚಿಟ್ಲಪ್ಪಲ್ಲಿ ಕೃಷ್ಣಾಚಾರ್ಯರು ಕೋಲಾರ ಚಿನ್ನದ ಗಣಿ



ಶ್ರೀ ಹೆಚ್. ಆರ್. ರಾಘವೇಂದ್ರ ರಾವ್ ಮತ್ತು ಶ್ರೀಮತಿ ತಾರಾಭಾಯಿ ರಾಘವೇಂದ್ರ ರಾವ್

ಭದ್ರಾವತಿ - 577301

|| ಶ್ರೀ ||

# || ಸೂತ್ರದೀಪಿಕಾ ||

ಶ್ರೀಹನುಮಭೀಮಮಧ್ವಾಂತರ್ಗತ ಶ್ರೀವೇದವ್ಯಾಸಾಭಿನ್ನಶ್ರೀಹಯಗ್ರೀವಾಯ ನಮಃ||

ಶ್ರೀ ಕೃಷ್ಣಂ ರಾಮಂ ನಾರಸಿಂಹಂ ವ್ಯಾಸಂ ನತ್ವಾ ಗುರೂನಪಿ ।
ಜಗನ್ನಾಥಾಖ್ಯಯತಿನಾ ಕ್ರಿಯತೇ ಸೂತ್ರದೀಪಿಕಾ ||

ಪ್ರಥಮಾಧ್ಯಾಯ ಪ್ರಥಮ ಪಾದ (ಜಿಜ್ಞಾಸಾಧಿಕರಣ)

## ೧) ಓಂ ಓಂ 'ಅಥಾತೋ' ಬ್ರಹ್ಮಜಿಜ್ಞಾಸಾ ಓಂ

ಅಥ - ಅಧ್ಯಯನ ಭಗವನ್ನಿಷ್ಠಬುದ್ಧಿ ಇಂದ್ರಿಯನಿಗ್ರಹರೂಪ ಅಧಿಕಾರ ಬಂದ ನಂತರದಲ್ಲಿ. ಅತಃ - ಮೋಕ್ಷರೂಪವಾದ ಪ್ರಯೋಜನದ ನಿಮಿತ್ತ ಅಥವಾ ವಿಷ್ಣುವಿನ ಅನುಗ್ರಹದಗೋಸ್ಕರವಾಗಿ. ಓಂ- ಗುಣಪೂರ್ಣನಾದ (ವಿಷ್ಣೋಃ) ಬ್ರಹ್ಮಣಃ- ಪರಬ್ರಹ್ಮನಾದ ಹರಿಯ. ಜಿಜ್ಞಾಸಾಃ - ಶ್ರವಣಮನನಾದಿರೂಪವಾಗಿ ತಿಳಿಯುವ ಪ್ರಯತ್ನವನ್ನು ಮಾಡಬೇಕು (ಕರ್ತವ್ಯಾ ಎಂಬ ಶಬ್ದ ಇಡಬೇಕು).

## ೨) ಓಂ ಓಂ ಜನ್ಮಾದ್ಯಸ್ಯಯತಃ ಓಂ (ಜನ್ಮಾಧಿಕರಣ)

ಅಸ್ಯ- ಪ್ರಮಾಣಸಿದ್ಧವಾದ ಜೀವಜಡಾತ್ಮಕ ಪ್ರಪಂಚವು. ಯತಃ-ಯಾವನ ನಿಮಿತ್ತ. ಜನ್ಮಾದಿ-ಸೃಷ್ಟಿ-ಸ್ಥಿತಿ-ಲಯ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷರೂಪ ಎಂಟೂ ಯಾವನಿಂದ ಆಗುವುದೋ ಆಗುವುದೋ ಅವನೇ ಬ್ರಹ್ಮನು ಬೇರೆಯವನಲ್ಲ ಎಂಬುವುದು.

## ೩) ಓಂ ಓಂ ಶಾಸ್ತ್ರಯೋನಿತ್ವಾತ್ ಓಂ (ಶಾಸ್ತ್ರಯೋನಿತ್ವಾಧಿಕರಣ)

ಅನುಮಾನಾದಿಗಳಿಂದ ರುದ್ರಾದಿದೇವತೆಗಳಲ್ಲಿ ಜಗತ್ಕಾರಣತ್ವವನ್ನು ಕಲ್ಪಿಸಬಾರದು. ಯಾಕೆಂದರೆ ಶಾಸ್ತ್ರಯೋನಿತ್ವಾತ್-ಋಗ್ವೇದಾದಿಗಳೇ

ಯೋನಿ-ತಿಳಿಸಲು (ಜ್ಞಾನ ವಿಷಯದಲ್ಲಿ) ಕಾರಣವಾಗಿವೆಯೋ ಆದರಿಂದ ಯುಕ್ತವಾಗಿರುವುದೇ ಶಾಸ್ತ್ರಯೋನಿತ್ವವು. ಅಂತಹ ಜಗತ್ತಿಗೆ ಮುಖ್ಯ ಕಾರಣನೇ ಬ್ರಹ್ಮನು. ಅಂದರೆ ಕೇವಲ ಶಾಸ್ತ್ರದಿಂದ ಮಾತ್ರ ಪರಬ್ರಹ್ಮನನ್ನು ಪಡೆಯಲು ಸಾಧ್ಯವೆಂಬುವುದೇ ಮುಖ್ಯಾರ್ಥವು.

## ೪) ಓಂ ಓಂ ತತ್ತುಸಮನ್ವಯಾತ್ ಓಂ (ಸಮನ್ವಯಾಧಿಕರಣ)

ಅದೇ ಅವನೇ ವಿಷ್ಣ್ವಾಖ್ಯನಾದ ಪರಬ್ರಹ್ಮನನ್ನೇ. ಸಂ-ಮುಖ್ಯವಾಗಿ ಶಾಸ್ತ್ರದಿಂದ ಮಾತ್ರ ತಿಳಿಯಲು ಯೋಗ್ಯ ಸರ್ವಾತ್ಮನಾ ರುದ್ರಾದಿಗಳಲ್ಲ. ಯಾಕೆಂದರೆ ಉಪಕ್ರಮಾದಿ ತಾತ್ಪರ್ಯ ಲಿಂಗಗಳಿಂದ ವೇದ್ಯನಾಗುತ್ತಾನೆ. ಆದ್ದರಿಂದಲೇ ಎಂಬರ್ಥ. (ಉಪಕ್ರಮೋಪಸಂಹಾರೋ ಅಭ್ಯಾಸೋ-ಪೂರ್ವತಾ ಫಲಂ। ಅರ್ಥವಾದೋಪಪತ್ತಿಶ್ಚ ಲಿಂಗಂ ತಾತ್ಪರ್ಯನಿರ್ಣಯಂ).

## ೫) ಓಂ ಓಂ ಈಕ್ಷತೇರ್ನಾಶಬ್ದಂ ಓಂ (ಈಕ್ಷತ್ಯಧಿಕರಣ)

ತತ್- ಆ ಬ್ರಹ್ಮನು ಅಶಬ್ದಂ ನ-ಅನೇಕ ವೇದಗಳಿಂದ ವರ್ಣಿತನಾದವನಲ್ಲವೆಂದಲ್ಲ(ವೇದಪ್ರತಿಪಾದ್ಯನೇ) ಯಾಕೆಂದರೆ ಈಕ್ಷತೆ- ಜ್ಞಾನ ಅಂತಹ ಜ್ಞಾನಕ್ಕೆ ವಿಷಯನೇ (ಗಮ್ಯ) ಆಗಿರುವವನು ಕಾರಣ ಜ್ಞಾನ ಮಾತ್ರ ವಿಷಯನಾಗಿಯೇ ಇರುತ್ತಾನೆ. (ಜ್ಞಾನ ಮಾತ್ರ ವೇದ್ಯನೆಂದರ್ಥ)

## ೬) ಓಂ ಓಂ ಗೌಣಶ್ಚೇನ್ನಾತ್ಮಶಬ್ದಾತ್ ಓಂ

ಗೌಣ- ಸತ್ವಾದಿಗಣಗಳಿದ ಬದ್ಧನಾದವನು ಜೀವನೇ, ಅವನೇ ಈಕ್ಷತಿ ಮೊದಲಾದ ಶೃತಿಗಳಿಂದ ಪ್ರತಿಪಾದ್ಯನೆಂದು ಹೇಳಲು ಹೊರಡುವುದು ಸರಿಯಲ್ಲ. ಯಾರೆಂದರೆ ಆತ್ಮಶಬ್ದಾತ್, ನೋಡುವ ವಸ್ತುಗಳಲ್ಲಿ 'ಆತ್ಮಾನಂ ಪಶ್ಯೇ' ಎಂಬುದಾಗಿ ಶಬ್ದಶ್ರವಣದಿಂದ ಆತ್ಮಶಬ್ದವಾಚ್ಯನು ಪರಬ್ರಹ್ಮನೇ.

## ೭) ಓಂ ಓಂ ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ಓಂ

ತನ್ನಿಷ್ಠಸ್ಯ- ಭಗವನಿಷ್ಠರಾದ ಜ್ಞಾನಿಗಳಿಗೈ, ಮೋಕ್ಷೋಪದೇಶಾತ್- 'ಯಸ್ಯಾನುವಿತ್ತ... ಪ್ರವಿಷ್ಟಃ' ಮೊದಲಾದ ಶೃತಿಗಳಲ್ಲಿ ಮೋಕ್ಷದ ವರ್ಣನೆ ಮಾಡಿದ ಪ್ರಯುಕ್ತವಾಗಿ ಆತ್ಮಶಬ್ದದಿಂದ ಮುಖ್ಯವಾಗಿ ವರ್ಣಿತನಾಗುವವನು ಜೀವನಲ್ಲವೇ ಅಲ್ಲ ಆದರೇ ಪರಬ್ರಹ್ಮನೇ ವಾಚ್ಯನು.

## ೮) ಓಂ ಓಂ ಹೇಯತ್ವಾವಚನಾಚ್ಚ ಓಂ

ಹೇಯತ್ವಾವಚನಾತ್- ಪರಬ್ರಹ್ಮನಿಗೆ, ಮೋಕ್ಷನಿಮಿತ್ತ ಮುಖ್ಯವಾಗಿ ಅಜ್ಞೇಯತ್ವ ರೂಪವಾದ ಹೇಯತ್ವ(ತ್ಯಾಜ್ಯ) ಎಂಬುದಾಗಿ ಪ್ರತಿಪಾದನೆ ಮಾಡಿದವೇ ವಿನಹ, 'ಜಾನಥ ಇತ್ಯಾದಿ ಶೃತಿಗಳಿಂದ ಅತ್ಯಾಜ್ಯ ಬಿಡದಿರುವ (ಅಹೇಯತ್ವ) ವಾಕ್ಯಗಳಿಂದ ಗೌಣ ಆತ್ಮನು (ತತ್) ಆ ಶಬ್ದ ಪ್ರತಿಪಾದ್ಯ' ಎಂದರೆ ನಿರ್ಗುಣ ಎಂದು ಹೇಳಿದರೆ ಅಂತಹ ಸತ್ವಾದಿ ಗುಣವಿಲ್ಲದವನೇ ವಿಷ್ಣು ಎಂದು ತಿಳಿಯಬೇಕು.

## ೯) ಓಂ ಓಂ ಸ್ವಾಪ್ಯಯಾತ್ ಓಂ

ಸ್ವಸ್ಯ- ತನ್ನಲ್ಲಿ, ಅಪ್ಯಯಾತ್- ಅಪ್ಯಯ ಪದದಿಂದ ಲಯ (ವಿಲೀನ) ಎಂದು ಹೇಳುವ ವಚನದಿಂದ 'ಆತ್ಮಾನಂ ವಿಲಾಪತಿ' ಎಂಬ ಶೃತ್ಯುಕ್ತನಾದವನೇ ನಿರ್ಗುಣ ಆತ್ಮನೇ ವಿನಃ ಗೌಣಾತ್ಮನಲ್ಲ. ಅದಕ್ಕೆ ಅವನೇ (ಬ್ರಹ್ಮನೇ) ಆಯಾ ಶಬ್ದಗಳಿಂದ ವಾಚ್ಯನೆಂದು ತಿಳಿಯಬೇಕು.

## ೧೦) ಓಂ ಓಂ ಗತಿಸಾಮಾನ್ಯಾತ್ ಓಂ

ಗತಿಃ- ಅನೇಕ ಶಾಸ್ತ್ರಗಳ ಅಧ್ಯಯನದಿಂದ ಉತ್ಪನ್ನವಾದ ಜ್ಞಾನದಿಂದ ಸಾಮಾನ್ಯಾತ್- ಒಂದೇ ರೂಪವಾದ ನಿರ್ಗುಣ ಮುಖ್ಯ ಇತ್ಯಾದಿ, ಶ್ರವಣದಿಂದ

ವಿಷ್ಣುವಿನಕಿಂತ ಅಭಿನ್ನನಾದವನು ಮುಖ್ಯ ಕಾರಣ ಎಂಬುದಾಗಿ ಅನ್ಯ ಶಾಖಾಗಳಿಂದ ಪ್ರತಿಪಾದ್ಯನೆಂದರ್ಥವೇ ಸರಿ.

## ೧೧) ಓಂ ಓಂ ಶೃತತ್ವಾಚ್ಚ ಓಂ

'ಏಕೋ ದೇವಃ ಸರ್ವಭೂತೇಷು ಈ ರೀತಿ ಶೃತಿಪ್ರತಿಪಾದ್ಯನೇ ಆಗಿರುವುದರಿಂದ ವೇದಪ್ರತಿಪಾದ್ಯನಲ್ಲವೆನ್ನುವುದು' ಸರಿಯಲ್ಲ.

## ೧೨) ಓಂ ಓಂ ಆನಂದಮಯೋಽಭ್ಯಾಸಾತ್ ಓಂ (ಆನಂದಮಯಾಧಿಕರಣಂ)

ಆನಂದಮಯ ಮೊದಲಾದ ಶಬ್ಧಪ್ರತಿಪಾದ್ಯ (ವಾಚ್ಯ)ನಾದವನು ವಿಷ್ಣುವೇ ವಿನಃ ಪ್ರಕೃತ್ಯಾದಿಗಳಲ್ಲ. ಪ್ರಕೃತ್ಯಾದಿಗಳು ಏಕೆ ಅಲ್ಲವೆಂದರೆ ಅಭ್ಯಾಸಾತ್ ಪ್ರತಿಯೊಂದು ಪ್ರಕರಣಗಳಲ್ಲಿಯೂ (ಅನ್ನಮಯಾದಿಗಳಲ್ಲಿ) ಬ್ರಹ್ಮ ಶಬ್ದದಿಂದಲೇ ಕೇಳಿಸಿಕೊಳ್ಳುತ್ತಿರುವುದರಿಂದ ವಿಷ್ಣು(ಬ್ರಹ್ಮನೇ)ವೇ ಆನಂದಮಯ.

## ೧೩) ಓಂ ಓಂ ವಿಕಾರಶಬ್ದಾನ್ನೇತಿಚೇನ್ನಪ್ರಾಚುರ್ಯಾತ್ ಓಂ

ವಿಕಾರ ಶಬ್ದಾತ್- ವಿಕಾರಾರ್ಥಕಗಳಾದ ಮಯಟ್ ಎಂಬ ಶಬ್ದದಿಂದ ಆನಂದಮಯಾದಿಗಳು ವಿಷ್ಣುವಿನಲ್ಲಿ ಕೂಡುವುದಿಲ್ಲವೆಂದಲ್ಲ. ಯಾಕೆಂದರೆ ಪ್ರಾಚುರ್ಯಾತ್- ಮಯಟ್ ಶಬ್ದದಿಂದ ಪ್ರಾಚುರ್ಯ ಎಂದರೆ ಪೂರ್ಣವೆಂಬುದಾಗಿ ಅರ್ಥ ತೋರುತ್ತಿದ್ದು ಅಂತಹ ಪೂರ್ಣತ್ವೇನ ಹೇಳಿಸಿಕೊಳ್ಳುವನು (ವರ್ಣಿತ) ನಾಗುವನು ಪರಬ್ರಹ್ಮನೇ ವಿನಃ ಬೇರೆ ಪ್ರಕೃತ್ಯಾದಿಗಳಲ್ಲ.

## ೧೪) ಓಂ ಓಂ ತದ್ಧೇತುವ್ಯಪದೇಶಾಚ್ಚ ಓಂ

ತಸ್ಯ- ಆ ಆನಂದಮಯ ಎಂಬ ಶಬ್ದಕ್ಕೆ ವಿಷ್ಣುವಿನಲ್ಲಿಯೇ ಲೋಕಚೇಷ್ಟಕತ್ವರೂಪ ಮುಖ್ಯ ( ಹೇತು) ಕಾರಣತ್ವೇನ ನಿದರ್ಶನವಾಗಿರುವುದರಿಂದ ಅದ

ರಲ್ಲಿ ಚ ಎಂದರೆ (ಸಮುಚ್ಚಯ) ಒಟ್ಟು ಎಲ್ಲ ಶಬ್ದಗಳಿಂದಲೂ ಕೋಹ್ಯೇವಾನ್ಯಾತ್ ಇವೆಲ್ಲ ವೇದದಲ್ಲಿ ವರ್ಣಿತನಾಗಿರುವುದರಿಂದ ಆನಂದಮಯನೆಂದರೇ ವಿಷ್ಣುವೇ ಆಗಿರುವವನು.

**೧೫) ಓಂ ಓಂ ಮಾಂತ್ರವರ್ಣಿಕ ಮೇ ವಚಗೀಯತೇ ಓಂ**

ಯಾಕೆಂದರೆ ಮಾಂತ್ರವರ್ಣಿಕಂ- 'ಸತ್ಯಜ್ಞಾನಮನಂತಂ ಬ್ರಹ್ಮ' ಇವೇ ಮೊದಲಾದ ಮಂತ್ರವರ್ಣಗಳಲ್ಲಿ ವರ್ಣಿತನಾದವನು ಬ್ರಹ್ಮನೇ ಆನಂದಮ ಯಾದಿ ಶಬ್ದಗಳಿಂದಲೂ ಪ್ರತಿಪಾದಿತನಾಗಿರುತ್ತಾನೆ. ಅದಕ್ಕೆ ಆನಂದಮಯಾದಿ ಶಬ್ದವಾಚ್ಯನಾದವನು ಬ್ರಹ್ಮನೇ (ವಿಷ್ಣು) ಆಗಿರುವನು.

**೧೬) ಓಂ ಓಂ ನೇ ತರೋಽನುಪಪತ್ತಿಃ ಓಂ**

ವಿಷ್ಣುವಿನಿಂದ ಇತರ- ಭಿನ್ನರಾದ ಚತುರ್ಮುಖಾದಿಗಳು ಆನಂದಮಯ ಶಬ್ದವಾಚ್ಯರಲ್ಲ ಏಕೆಂದರೆ ? ಅನುಪಪತ್ತಿ-ಬ್ರಹ್ಮವಿನಾಪ್ನೋತಿ ಪರಂ, ಈ ರೀತಿ ಮೋಕ್ಷಪ್ರಾಪ್ತಿಯ ರೂಪ ಜ್ಞಾನ ವಿಷಯ ಅವರಲ್ಲಿ ಸಮಂಜಸ (ಕೂಡ ದಿರವದರಿಂದ)ವಾಗದಿರುವುದರಿಂದ ಅವರಲ್ಲ.

**೧೭) ಓಂ ಓಂ ಭೇದವ್ಯಪದೇಶಾಚ್ಚ ಓಂ**

ಚತುರ್ಮುಖ ಬ್ರಹ್ಮಾದಿಗಳಲ್ಲಿ ಭೇದಕವಾದ ಧರ್ಮ (ವಿರುದ್ಧ ಧರ್ಮ) ಗಳು ತೋರುತ್ತಿರುವುದರಿಂದ ಆನಂದಮಯರು ಇತರರು ಆಗದೇ ಪರಬ್ರಹ್ಮನೇ ಆಗಿರುತ್ತಾನೆಂದರ್ಥವೇ ಸರಿ.

**೧೮) ಓಂ ಓಂ ಕಾಮಾಚ್ಚ ನಾನುಮಾನಾಪೇಕ್ಷಾ ಓಂ**

ಅದ್ವೈತಶೃತಿಗಳಿಗನುಕೂಲವಾಗುವಂತೆ ಅನುಮಾನ ಪ್ರಯೋಗ ಮಾಡಲು ಬರುತ್ತದೆಂದರೆ, ಕೇವಲಾನುಮಾನವನ್ನು (ಅನುಸರಿಸುವದು) ಮಾಡಿ ಅರ್ಥ

ಸಾಧನೆ ಮಾಡಲು ಬರುವುದಿಲ್ಲ. ಏಕೆಂದರೆ ಕಾಮಾತ್ ಇಚ್ಛಾನುಸಾರ ಪ್ರವೃತ್ತರಾಗಲು ಅತೀಂದ್ರಿಯ ವಸ್ತುಗಳಲ್ಲಿ ಅನುಮಾನಾಪೇಕ್ಷಾ (ಶುಷ್ಕ) ವ್ಯರ್ಥವಾಗುವುದರಿಂದ ಕಾರ್ಯಕರಣ ಸಾಮರ್ಥ್ಯ ಅವುಗಳಲ್ಲಿಲ್ಲದ ಪ್ರಯುಕ್ತ ಅನುಮಾನ ಪ್ರಮಾಣವಾಗಲಾರದು.

## ೧೯) ಓಂ ಓಂ ಅಸ್ಮಿನ್ನಸ್ಯಚ ತದ್ಯೋಗಂ ಶಾಸ್ತಿ ಓಂ

ಅಸ್ಯಚ ಈ ಎಲ್ಲ ಜೀವಿಗಳಿಗೂ (ಸಮುಚ್ಚಯ) (ಗುಂಪು) ಆನಂದಮಯಾದಿ ಪ್ರಕರಣಗಳಲ್ಲಿ ತದ್ಯೋಗಂ- ಆನಂದಮಯಾದಿಗಳಿಂದ ಸಂಬಂಧವನ್ನು ಶಾಸ್ತಿ- ವೇದವು ಪ್ರತಿಪಾದಿಸುತ್ತದೆ ಎಂದು ಹೇಳುವುದರಿಂದಲೂ ಆನಂದಮಯಾದಿ ಶಬ್ದಗಳಿಂದ ವಾಚ್ಯನಾದವನು ಬ್ರಹ್ಮನೇ ವಿನಃ ದೇಹಾದಿ ಸಂಬಂಧ ಇರುವ ಜೀವರಲ್ಲ.

## ೨೦) ಓಂ ಓಂ ಅಂತಸ್ತದ್ಧರ್ಮೋಪದೇಶಾತ್ ಓಂ (ಅಂತಸ್ತ್ವಾಧಿಕರಣಂ)

ಅಂತಃ- ಹೃದಯದ ಒಳಭಾಗದಲ್ಲಿ ಪ್ರವಿಷ್ಟಂ- ಪ್ರವೇಶಿಸಿದ (ಪ್ರಸಿದ್ಧನಾದ)ವನು ಬ್ರಹ್ಮಾಖ್ಯ ವಿಷ್ಣುವೇ ವಿನಃ ಇಂದ್ರಾದಿ ದೇವತೆಗಳಲ್ಲ. ಯಾಕೆಂದರೆ ? ತದ್ಧರ್ಮೋಪದೇಶಾತ್- ಅವನ (ಬ್ರಹ್ಮನ) ಧರ್ಮಗಳಾದ ಕ್ಷೀರಾಬ್ಧಿಮಧ್ಯದಲ್ಲಿರುವ, ಪ್ರಲಯವೆಂಬ ಸಮುದ್ರವಾಸಿತ್ವ ಬ್ರಹ್ಮಾಂಡವೀರ್ಯತ್ವ ಮೊದಲಾದ ವಿಷ್ಣು ಧರ್ಮ ಉಪದೇಶದಿಂದ ಹಾಗೂ 'ಅಂತಃಸಮುದ್ರ' ಇತ್ಯಾದಿ ವೇದವೇದ್ಯನಾಗಿರುವುದರಿಂದಲೂ ಅಂತಃಸ್ಥನಾದವನು ನಾರಾಯಣನೇ ಆಗಿರುವನು.

## ೨೧) ಓಂ ಓಂ ಭೇದವ್ಯಪದೇಶಾಚ್ಚಾನ್ಯಃ ಓಂ

ಕೇವಲ ಎಲ್ಲರ ಅಂತಸ್ಥನಾಗಿರುವುದು ಮಾತ್ರವಲ್ಲದೇ ಇಂದ್ರಾದಿಗಳಿಂದಲೂ ಅತ್ಯಂತಭಿನ್ನ(ಅನ್ಯ)ನೂ ಆಗಿರುವನು. ಏಕೆಂದರೆ ? ಭೇದವ್ಯಪದೇ

ಶಾತ್- ಅವನು ಅಂತರ್ಯಾಮಿತ್ವಾದಿಭೇದದರ್ಶಕ ಧರ್ಮಗಳಿಂದ ಪ್ರತಿಪಾದ್ಯನಾಗಿರುವುದರಿಂದ ಅನ್ಯತ್ವೇನ ತೋರುತ್ತಾನೆ.

## ೨೨) ಓಂ ಓಂ ಆಕಾಶಸ್ತಲ್ಲಿಂಗಾತ್ ಓಂ (ಆಕಾಶಾಧಿಕರಣ)

ಆಕಾಶ ಶಬ್ಧ ವಾಚ್ಯನೂ ಭಗವಂತನೇ ವಿನಃ ಪ್ರಸಿದ್ಧವಾದ ಭೂತಾಕಾಶ ವಲ್ಲ ಏಕೆಂದರೆ ವಿಷ್ಣುವಿನ ಲಿಂಗಗಳಾದ ಛಂದೋಗಶೃತ್ಯುಕ್ತವಾದ ಪರೋವರೀ ಯತ್ವಾದಿ ರೂಪವಾದ ವಿಷ್ಣುವಿನ ಲಿಂಗವಿರುವುದರಿಂದ ಆಕಾಶ ಶಬ್ದ ಪ್ರತಿಪಾದ್ಯನು ಶ್ರೀರಾಮನ್ನಾರಾಯಣನೇ.

## ೨೩) ಓಂ ಓಂ ಅತ ಏವ ಪ್ರಾಣಃ ಓಂ (ಪ್ರಾಣಾಧಿಕರಣಂ)

'ತದ್ವೈತ್ವಂ ಪ್ರಾಣೋ ಅಭವಃ.... ಪ್ರಾಣವ್ರೋನವ ಎಂಬ ತೈತ್ತರೀಯೋ ಪನಿಷತ್ಪ್ರತಿಪಾದ್ಯನು ವಿಷ್ಣುವೇ ವಿನಃ' ಅನ್ಯರಲ್ಲ ಯಾಕೆಂದರೆ? ಅತ ಏವ- ಅದಕ್ಕೇ 'ಶ್ರೀಶ್ಚತೇ ಲಕ್ಷ್ಮೀಶ್ಚಪತ್ನೌ' ಇತ್ಯಾದಿ ಶ್ರೀಪತಿತ್ವರೂಪಹೇತುವಿನಿಂದಲೇ ಪ್ರಾಣಶ ಬ್ದವಾಚ್ಯನೂ ಶ್ರೀಹರಿಯೇ ಆಗಿರುವನು.

## ೨೪) ಓಂ ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ (ಜ್ಯೋತಿರಧಿಕರಣಂ)

ಜ್ಯೋತಿಃ- ಜ್ಯೋತಿಶಬ್ದದಿಂದಲೂ ಹರಿಯೇ ವಾಚ್ಯನು, ಬೇರೆ ಯಾರೂ ಅಲ್ಲ. ಏಕೆಂದರೆ ಚರಣಾಭಿಧಾನಾತ್-ಅವಯವಾದಿ (ಕರಣಾದಿ) ವಿಚರಣ ತ್ವೇನ ಕರೆಯಿಸಿಕೊಳ್ಳುವುದರಿಂದ 'ವಿಮೇಕರ್ಣಾ' ಆದಿ (ಜ್ಯೋತಿಷದ) (ಓಷ ಧಿಗಳಿಂದ) ಶಬ್ದದಿಂದ ಹೇಳಿಸಿಕೊಳ್ಳುತ್ತಿದ್ದು ಕರ್ಣಾದಿಗಳಿಂದ ಅತ್ಯಂತದೂರ ನೆಂಬ ಅರ್ಥ.

## ೨೫) ಓಂ ಓಂ ಛಂದೋಽಭಿಧಾನಾನ್ನೇತಿಚೇನ್ನತಥಾಚೇತೋರ್ಪಣ ನಿಗದಾತ್ತಥಾಹಿ ದರ್ಶನಮ್ ಓಂ (ಛಂದೋಽಭಿಧಾನಾಧಿಕರಣಂ)

ಛಂದೋಽಭಿಧಾನಾತ್- ಛಂದೋಗ ಶೃತಿಪ್ರತಿಪಾದಿತನಾದ ಇಪ್ಪತ್ತನಾಲ್ಕು ಅಕ್ಷರಗಳಿಂದ ಪ್ರತಿಪಾದಿತನಾದವನು ವಿಷ್ಣು ಅಲ್ಲವೆಂದರೇ ತಥಾ ಹಿ ದರ್ಶನಂ-ಗಾಯತ್ರಿ ಮಂತ್ರಗಳಿಂದ ವರ್ಣಿತನಾದವನು ನಾರಾಯಣನೇ, ಯಾಕೆಂದರೆ- ಗನ, ತ್ರಾಣ, ಕರ್ತೃತ್ವರೂಪಗುಣಗಳಿದ್ದದ್ದರಿಂದ ಹಾಗೂ ಗಾಯತಿ, ತ್ರಾಯತಿ ಚ ಇತ್ಯಾದಿ ಶೃತಿ ಇರುವುದರಿಂದಲೂ ತತ್ವದ ವಾಚ್ಯ ವಿಷ್ಣು ಅಲ್ಲವೆಂದರೆ ತಥಾಚೇತೋರ್ಪಣಾರ್ಥಂ ನಿಗದಾತ್- ಗಾಯತ್ರ್ಯಾದಿ ಶಬ್ದಗಳಿಂದ ಮುಖ್ಯ ಪ್ರವೃತ್ತಿನಿಮಿತ್ತಕತ್ವ ಇದೆ ಎಂದು ಉಪಾಸನೆ ಮಾಡುವುದಕ್ಕಾಗಿಯೇ ಶಾಂತಿಯಲ್ಲ. ನಿಗದಾತ್-ಪ್ರತಿಪಾದಿತವಾಗಿರುವುದರಿಂದ ಈ ಶಬ್ದಗಳಿಂದ ವೈಯರ್ಥ್ಯತೆರೂಪ ದೋಷ ಬಾರದು ಮುಖ್ಯವರ್ಣಿತನಾದವನು ಶ್ರೀಮನ್ನಾರಾಯಣನೇ.

**೨೬) ಓಂ ಓಂ ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಂ ಓಂ**

ಹೀಗೆ ಒಟ್ಟು ಗಾಯತ್ರಿ ಶಬ್ದವಾಚ್ಯನಾದವನು ಬ್ರಹ್ಮನೇ ಎಂದು ಹೇಳಲು ಕಾರಣವೇನೆಂದರೆ 'ಭೂತಾದಿ ಪಾದವ್ಯಪದೇಶೋಪಪತ್ತೇಃ' ಅಂದರೆ ಪಾದೋಸ್ಯ ವಿಶ್ವಾಭೂತಾನಿ........ ದಿವಿ ಇವೇ ಮೊದಲಾದವುಗಳಲ್ಲಿ ಪ್ರಾಣಿಗಳಿಗೆ (ಭೂತ) ಅಮೃತಾಂಶತ್ವವು ಕೂಡುವುದರಿಂದ ಅಂತಹ ಗುಣ (ಲಕ್ಷಣ) ವಿಷ್ಣುವಿನಲ್ಲಿಯೇ ಕೂಡುತ್ತಿರುವುದರಿಂದಲೂ ಬೇರೆ ಪ್ರಾಣಿಗಳಲ್ಲಿ ಕೂಡದಿರುವುದರಿಂದಲೂ ಛಂದೋವಾಚ್ಯನು ಬ್ರಹ್ಮನೇ.

**೨೭) ಓಂ ಓಂ ಉಪದೇಶಭೇದಾನ್ನೇತಿಚೇನ್ನೋಭಯಸ್ಮಿನ್ನಪ್ಯವಿರೋಧಾತ್ ಓಂ**

ಗಾಯತ್ರೀಜ್ಯೋತಿಷ್ಯೇ ಎರಡು, ತ್ರಿಪಾದಸ್ಯಾ.... ಭಿನ್ನನೆಂದೂ, ಪರೋದಿವಃ ಇವೇ ಮೊದಲಾದ ವಾಕ್ಯಗಳಲ್ಲಿ ವಿರುದ್ಧ ಧರ್ಮಬೋಧಕವಾದ ವೇದದಲ್ಲಿ ಭೇದವಿದೆ ಎಂದರೆ ಆ ಎರಡೂ ವಿಧವಾದ ಶೃತಿಗಳಿಂದಲೂ ಬ್ರಹ್ಮ

ರೂಪ ಒಬ್ಬನೇ ವರ್ಣಿತನಾಗುತ್ತಿರುವುದರಿಂದ ಭೇದಶ್ರುತಿಗಳು ಅನ್ಯತ್ರ ವರ್ಣಿತನಾಗುತ್ತಿರುವುದಿಲ್ಲ. ಅದಕ್ಕೇ ಹೇಳಿದರು 'ಉಭಯಸ್ಮಿನ್' ವಾಕ್ಯ ವಿರುದ್ಧವಾದ ಎರಡು ಕಂಡರೂ ಮುಖ್ಯ ಪ್ರತಿಪಾದ್ಯತ್ವ ಒಂದಕ್ಕೆ ಇದೆ ಎಂದರೆ ಯಾವ ವಿಧವಾದ ವಿರೋಧಬಾರದು. ಹೇಗೆ ?- 'ತ್ರಿಸಪ್ತಲೋಕಾಪೇಕ್ಷಯಾ' ಅಲ್ಲಿ ವಿರೋಧ ಬರುವುದಿಲ್ಲವೋ ಹಾಗೆಯೇ ಇಲ್ಲಿಯೂ ವಿರೋಧ ಇಲ್ಲ.

## ೨೮) ಓಂ ಓಂ ಪ್ರಾಣಸ್ತಥಾನುಗಮಾತ್ ಓಂ (ಪಾದಾಂತ್ಯಪ್ರಾಣಾಧಿಕರಣಂ)

ಹೇಗೆ ವಿರೋಧವಿಲ್ಲವೋ ಹಾಗೆಯೇ ತವ್ವೆ ತೈತ್ತಿರೀಯೋಪನಿಷತ್ ಪ್ರತಿಪಾದ್ಯ 'ತಾ ವಾ ಏತಾಃ' ಎಂಬ ಐತರೇಯ ಪ್ರತಿಪಾದ್ಯನೂ ವಿಷ್ಣುವೇ ಆಗುತ್ತಾನೆ. ಪ್ರಾಣಃ ತಥಾ ಅನುಗಮತ್, ದೇವತಾ ಉಪಾಸನೆ ಮೊದಲಾದ ವಿಷ್ಣುವಿನ ಕಾರಣ (ಹೇತು)ಗಳು ಅಲ್ಲಿ ವರ್ಣಿತವಾಗುತ್ತಿರುವುದರಿಂದ ಮತ್ತು ಮೇಲಿಂದ ಮೇಲೆ ಶ್ರವಣಯೋಗ್ಯವಾಗಿರುವುದರಿಂದಲೂ ಪ್ರಾಣಶಬ್ದವೂ ವಿಷ್ಣುವಾಚಿ.

## ೨೯) ಓಂ ಓಂ ನವಕ್ತುರಾತ್ಮೋಪದೇಶಾದಿತಿಚೇದಧ್ಯಾತ್ಮಸಂಬಂಧ ಭೂಮಾಹ್ಯಸ್ಮಿನ್ ಓಂ

ಬೃಹತೀ ಸಹಸ್ರ ಹೇಳುವ ವಿಶ್ವಾಮಿತ್ರರನ್ನು ಕುರಿತು ಇಂದ್ರರೂಪೋಪದೇಶವಿದು ನಾನು ನನ್ನಲ್ಲಿರುವ ಪ್ರಾಣನೇ ಎಂದು ರೂಪ ಹೇಳಿದ್ದು ಪ್ರಾಣ ಎಂದರೆ ವಿಷ್ಣು ಅಲ್ಲ ಎಂದರೆ ಅದರ ಮುಖ್ಯಾರ್ಥ ನನ್ನಲ್ಲಿರುವ ಎಂದು ಹೇಳಿದ್ದಕ್ಕೆ ಮತ್ತು ಮೊದಲು ವರ್ಣನೆ ಮಾಡಿರುವ ಲಕ್ಷಣಗಳು ಇಂದ್ರನಲ್ಲಿರದಿರುವುದರಿಂದಲೂ ಇಂದ್ರ-ವಿಶ್ವಾಮಿತ್ರರಲ್ಲಿ ಆಧ್ಯಾತ್ಮಿಕ ಸಂಬಂಧವಿದ್ದುದರಿಂದಲೂ 'ಅಧ್ಯಾತ್ಮ ಸಂಬಂಧ ಭೂಮಾ ಆಧಿ (ಅಧಿಕ) ಶ್ರೇಷ್ಠವಾದ ಆತ್ಮ - ಭಗವಂತನ ಸಂಬಂಧ

ಯುಕ್ತ (ಆವೇಶವಿರುವುದರಿಂದಲೂ ಆ ಇಂದ್ರನಲ್ಲಿ (ಬಾಹುಲ್ಯ) ಶ್ರೇಷ್ಠತ್ವ ವರ್ಣಿತವಾಗಿದೆಯೇ ವಿನಃ ಕೇವಲ ಇಂದ್ರನ ವರ್ಣನೆಯಾಗಿಲ್ಲ. ಅದಕ್ಕೆ ವಿಷ್ಣುವೇ (ಭೂಮಾ) ಶ್ರೇಷ್ಠನೆಂದು ತಿಳಿಯಬೇಕು.

## ೩೦) ಓಂ ಓಂ ಶಾಸ್ತ್ರದೃಷ್ಟ್ಯಾತೂಪದೇಶೋ ವಾಮದೇವವತ್ ಓಂ

ವಾಮದೇವರೆಂಬ ಋಷಿಗಳು ಶಾಸ್ತ್ರದೃಷ್ಟಿಯಿಂದ (ಅಂತರ್ಯಾಮಿಯಾದವನು ಪರಬ್ರಹ್ಮನೆಂಬ ದೃಷ್ಟಿಯಿಂದ) 'ಅಹಂ ಮನುರಭವಂ' ಇತ್ಯಾದಿಗಳಿಂದ ತನಗೂ ಸೂರ್ಯಾದಿ ದೇವತೆಗಳಿಗೂ ಅಭೇದ ವರ್ಣನೆ ಮಾಡಿರುವುದಾಗಿ ತೋರಿದರೂ ಮುಖ್ಯವಾಗಿ ಒಳಗಿನಿಂದಲೇಪ್ರೇರಕನು ಭಗವಂತನಿರುವನೆಂದು ತೋರಿಸಿದಂತೆ ಅಂತರ್ಯಾಮಿ ವಿಷ್ಣುವೇ ಎಂದು ತಿಳಿಯಬೇಕು. ಉಪದೇಶ ಕಾಲಕ್ಕೆ ಹಾಗೆಯೇ ಸಂಧಾನ (ವಿಚಾರ) ಮಾಡಬೇಕು.

## ೩೧) ಓಂ ಓಂ ಜೀವಮುಖ್ಯಪ್ರಾಣಲಿಂಗಾನ್ನೇತಿಚೇನ್ನೋಪಾಸಾತ್ರೈವಿದ್ಯಾದಾಶ್ರಿತತ್ವಾದಿಹ ತದ್ಯೋಗಾತ್ ಓಂ

ಜೀವಮುಖ್ಯಪ್ರಾಣಲಿಂಗಾತ್ ಶತಾಯುಷಾ ಮೊದಲಾದ ಜೀವನಲ್ಲಿಯ ಲಿಂಗಗಳಿಂದ ಹಾಗು ಇಂದ್ರಿಯಾಭಿಮಾನಿ ದೇವತೆಗಳಿಂದ ಸಂವಾದ ರೂಪ ಮುಖ್ಯಪ್ರಾಣಲಿಂಗಗಳ ವರ್ಣನೆಯಿಂದ ಹೇಗೆಂದರೆ- 'ತಾವಂತಿ ಶತ ಸಂವತ್ಸರಸ್ಯ ತಾಆಹಿಂಸಂತಾ' ಇತ್ಯಾದಿಗಳಿಂದ ಪ್ರಾಣ (ಮುಖ್ಯಪ್ರಾಣ) ಬೇರೆ ವಿಷ್ಣು ಬೇರೆ ಎಂದು ತೋರುತ್ತದೆ. ಆದರೆ- 'ಅನುಗಮಾತ್' ಅಂದರೆ ಲಿಂಗ ವಿರೋಧವೂ ಇದೆ ಎಂದರೆ ಆ ಎಲ್ಲ ಹೇತುಗಳಿಂದಲೂ ಅಂತರ್ಯಾಮಿಯ ವರ್ಣನ ವಿಷಯಗಳಾಗಿದ್ದದ್ದರಿಂದ 'ಉಪಾಸಾತ್ರೈವಿದ್ಯಾತ್' ಅಂತ. ಹೊರಗೆ ಸರ್ವತ್ರ ಹೀಗೆ ಭಗವದುಪಾಸನೆಯಲ್ಲಿ ತ್ರೈವಿಧ್ಯತೆ ಇರುವುದರಿಂದಲೂ ಅಂತಹ ತ್ರೈವಿಧ್ಯತೆಯನ್ನೇ ವರ್ಣನೆ ಮಾಡುತ್ತಿರುವುದರಿಂದಲೂ ಆಯಾ ಅಧಿಕಾರಿಗಳಿಗೆ

ಮೂರು ವಿಧ ಉಪಾಸನೆಯ ಯೋಗ್ಯತೆ ಇಲ್ಲದ್ದರಿಂದಲೂ ಅವರವರ ಯೋಗ್ಯ ತಾನುಸಾರ ಅವರವರ (ಅಧಿಕಾರಿ)ಗೆ ಉಪಾಸನೆಗೆ ಯೋಗ್ಯವಾಗಿರುವುದಕ್ಕೆಂದೇ ಅಂತರ್ಯಾಮಿ ವಿವಕ್ಷೆ ಮಾಡಿಕೊಂಡು ಈ ಅಧಿಕರಣ ಹೊರಟಿರುವುದರಿಂದ ಮುಖ್ಯವಾಗಿ ಅಂತರ್ಯಾಮಿಯಾದವನ್ನು ಎಲ್ಲಾ ಜೀವಬಣ ಲಕ್ಷ್ಮೀದೇವಿಯರ ನಿಯಾಮಕನಾದ ಪರಬ್ರಹ್ಮ ವಾಚ್ಯನಾದ ನಾರಾಯಣನೇ ಜಿಜ್ಞಾಸೆಯೇ ಮುಖ್ಯ ಸೂತ್ರಾರ್ಥವೆಂಬುದಾಗಿ ತಿಳಿಯಬೇಕು.

**ಜಗನ್ನಾಥ ಯತಿಗಳಿಂದ ರಚಿತವಾದ ಸೂತ್ರದೀಪಿಕಾ ಉಮರ್ಜಿ ಪ್ರಹ್ಲಾದನಿಂದ ರಚಿತವಾದ ಕನ್ನಡ ವ್ಯಾಖ್ಯಾನದ ಪ್ರಥಮಾಧ್ಯಾಯದ ಪ್ರಥಮಪಾದ ಸಮಾಪ್ತಿ.**

## ಪ್ರಥಮಾಧ್ಯಾಯಸ್ಯ ದ್ವಿತೀಯಃ ಪಾದಃ (ಪ್ರಾರಂಭಃ)

### ೧) ಓಂ ಓಂ ಸರ್ವತ್ರಪ್ರಸಿದ್ಧೋಪದೇಶಾತ್ ಓಂ (ಸರ್ವಗತತ್ವಾಧಿಕರಣಂ)

ಎಲ್ಲ ಪೃಥಿವ್ಯಾದಿಗಳಿಂದ ವರ್ಣಿತವಾಗುವ ವಸ್ತು ಬೇರೆ ಯಾರೂ ಆಗಿರದಂತೆ ಅಂತಹ ವಸ್ತು ಬ್ರಹ್ಮ ಶಬ್ದವಾಚ್ಯನಾದ ನಾರಾಯಣನೇ ಆಗಿರುವನು ಪ್ರಸಿದ್ಧೋಪದೇಶಾತ್ 'ಏತದೇವ ಬ್ರಹ್ಮ' ಇತ್ಯಾದಿ ವಾಕ್ಯಗಳಿಂದ ಸರ್ವತ್ರ ವ್ಯಾಪ್ತನಾಗಿರುವನು ನಾರಾಯಣಾಖ್ಯನಾದ ವಿಷ್ಣುವೇ ಎಂದು ಅನೇಕ ಶೃತ್ಯಾದಿಗಳಿಂದ ಪ್ರಸಿದ್ಧನಾಗಿರುವನು ಅದರಿಂದಲೇ ಸರ್ವಗತ ಬ್ರಹ್ಮನೇ.

### ೨) ಓಂ ಓಂ ವಿವಕ್ಷಿತಗುಣೋಪಪತ್ತೇಶ್ಚ ಓಂ

ಮೊದಲು ವರ್ಣನೆ (ವಿವಕ್ಷಾ) ಮಾಡಿರುವ ಅಂತರ್ಯಾಮಿ ಅಂತ ಬ್ರಹಿ ಸರ್ವಗತ ಇವೇ ಮೊದಲಾದ ಹಿಂದೆ ಹೇಳಿದ ಮತ್ತು ಮುಂದೆ ಹೇಳುವ ಗುಣಗಳು ಅನ್ಯತ್ರ ಸರ್ವಾತ್ಮನಾ ಕೂಡದಿರುವುದರಿಂದಲೂ ಪರಬ್ರಹ್ಮನೇ ಸರ್ವಗತನೆಂದು (ಸರ್ವತ್ರ ವ್ಯಾಪಿ) ಎಂದೂ ತಿಳಿಯಬೇಕು.

### ೩) ಓಂ ಓಂ ಅನುಪಪತ್ತೇಸ್ತು ನ ಶಾರೀರಃ ಓಂ

ಶಾರೀರಃ ಶರೀರ ಸಂಬಂಧಿಯಾಗಿರುವ ಜೀವನದಲ್ಲಿ ವ್ಯಾಪ್ತತ್ವ ಸರ್ವಗತತ್ವ ಈ ಗುಣಗಳು ಆದಿತ್ಯನಲ್ಲಾಗಲೀ ಬೇರೆ ಯಾವ ಜೀವರಲ್ಲಾಗಲೀ ಕೂಡುವುದಿಲ್ಲ. ಒಬ್ಬನೇ ಜೀವನಲ್ಲಿ ಎಲ್ಲ ಶರೀರವಾಸಿತ್ವ ಸರ್ವಾತ್ಮನಾ ಕೂಡದಿರುವುದರಿಂದ ಜೀವನಲ್ಲದೇ ಪರಮಾತ್ಮನೇ ಆಗಿರುವುದು ಸಾಧ್ಯ.

### ೪) ಓಂ ಓಂ ಕರ್ಮಕರ್ತೃವ್ಯಪದೇಶಾತ್ ಓಂ

ಸರ್ವಗತನಾದ ಅವನಲ್ಲಿ ಕರ್ತೃತ್ವ ಹಾಗೂ ವಿರುದ್ಧವಾದ ಕರ್ಮತ್ವವನ್ನೂ

ವರ್ಣನೆ ಮಾಡುತ್ತಿದ್ದು ಜೀವನಲ್ಲಿ ಅಂತಹ ವಿರುದ್ಧ ಧರ್ಮಗಳು ಇಲ್ಲದಿದ್ದ ಕಾರಣ ಸರ್ವಗತನಾದವನು ಸಾಕ್ಷಾತ್ ಪರಮಾತ್ಮನೇ ವಿನಃ ಅನ್ಯ ಜೀವರಾಗುವುದಿಲ್ಲ.

**೫) ಓಂ ಓಂ ಶಬ್ದವಿಶೇಷಾತ್ ಓಂ**

ಏತದೇವ ಬ್ರಹ್ಮ ಎಂಬ ಈ ವಾಕ್ಯದಲ್ಲಿ ಮುಖ್ಯವಾಗಿ ಬ್ರಹ್ಮಶಬ್ಧದ (ಅವಧಾರಣ) ದಿಂದ ನಿಶ್ಚಿತತೆಯಿಂದ ಯುಕ್ತ ಶಬ್ಧವಿಶೇಷ ಯುಕ್ತನಾಗಿರುವುದ ರಿಂದ ಬ್ರಹ್ಮಶಬ್ಧವು ಸರ್ವಥಾ ಜೀವ ಪರವಾಗಲು ಸಾಧ್ಯವಿಲ್ಲ ಎಂಬರ್ಥ.

**೬) ಓಂ ಓಂ ಸ್ಮೃತೇಶ್ಚ ಓಂ**

ಕೇವಲ ವೇದದಿಂದ ಮಾತ್ರ ಬ್ರಹ್ಮಶಬ್ದದಿಂದ ವಿಷ್ಣುವನ್ನು ವರ್ಣನೆ ಮಾಡದೇ 'ಅಹಮಾತ್ಮಾ ಗುಡಾಕೇಶ' ಇತ್ಯಾದಿ ಸ್ಮೃತಿಗಳಲ್ಲಿಯೂ ವರ್ಣಿತವಾಗಿದ್ದ ಪ್ರಯುಕ್ತ ಸರ್ವಥಾ ಜೀವ ಪರವಾಗಿ ವರ್ಣಿಸಲು ಬರುವುದಿಲ್ಲ.

**೭) ಓಂ ಓಂ ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚನೇತಿಚೇನ್ನನಿಚಾಯ್ಯ ತ್ವಾದೇವಂ ಯೋಮವಚ್ಚ ಓಂ**

ಅರ್ಭಕೌಕಸ್ತ್ವಾತ್-ಎಲ್ಲ ಪ್ರಾಣಿಗಳಲ್ಲಿ ಎಲ್ಲ ವಸ್ತುಗಳ ಹೃದಯರೂಪ ಅಲ್ಪಸ್ಥಾನವಾಸದಿಂದ ಮತ್ತು ಆ ಜೀವನನ್ನು ಶೃತಿಲಿಂಗಾದಿಗಳಿಂದ ವರ್ಣಿಸಿದ್ದ ರಿಂದ (ತದ್ವ್ಯಪದೇಶಾತ್) ಬ್ರಹ್ಮನಿಗೆ ಸರ್ವಗತತ್ವವನ್ನು ಹೇಳಿರುವುದರಿಂದ ಇಂತಹ ಗುಣ ಜೀವನದಲ್ಲಿರದೇ ಕೇವಲ ವಿಷ್ಣುವಿನಲ್ಲಿ ಮಾತ್ರ ಇರಲು ಸಾಧ್ಯವಿರುವುದ ರಿಂದ ಈ ಸರ್ವಗತತ್ವಾದಿ ಲಕ್ಷಣಗಳು ವಿಷ್ಣುವಿನಲ್ಲಿ ಸಂಗತವಾಗಿರುತ್ತಿರುವುದ ರಿಂದ ಮತ್ತು ಅದೇ ರೀತಿ ವಿಷ್ಣು ಉಪಾಸ್ಯನಾಗಿರುವುದರಿಂದ ಆ ಹೇತುಗಳಿಗೆ ವೈಯರ್ಥ್ಯಬಾರದು ಹಾಗೂ ಶೃತಿ. ಸ್ಮೃತಿ ಲಿಂಗಾದಿಗಳಿಗೆ ಬ್ರಹ್ಮಪರವೇ ವರ್ಣನೇ ಮಾಡುತ್ತಿರುವುದರಿಂದ ವಿರೋಧವೂ ಬಾರದು. ಆದರೆ ವ್ಯಾಪ್ತನಾದ ವಿಷ್ಣುವಿಗೆ (ಅಲೌಕಸ್ತ್ವ) ಕೆಲವು ಪ್ರದೇಶದಲ್ಲಿ ಮಾತ್ರವೆಂದು ಹೇಳಿದರೂ ದೋಷ

ಎಲ್ಲ. ಹೇಗೆ ಆಕಾಶ ವ್ಯಾಪ್ತವಾಗಿದ್ದರೂ ಘಟ, ಗ್ರಹ ಆದಿ ರೀತಿಯಿಂದ ಅವ್ಯಾಪ್ತತ್ವವೂ ಕಂಡು ಬರುತ್ತದೆಯೋ ಹಾಗೆ ವಿರೋಧ ಬರಲಾರದು.

**೮) ಓಂ ಓಂ ಸಂಭೋಗಪ್ರಾಪ್ತಿರಿತಿಚೇನ್ನವೈಶೇಷ್ಯಾತ್ ಓಂ**

ಹೇಗೆ ಅಕಾಶ ವ್ಯಾಪ್ತಅವ್ಯಾಪ್ತವೋ ಹಾಗೆಯೇ ಬ್ರಹ್ಮನೂ ಸರ್ವ ಜೀವ ಶರೀರದಲ್ಲಿದ್ದರೂ ಸಮಾನಭೋಗಪ್ರಾಪ್ತ್ಯತ್ವದಿಂದ ಬಾಧಕವಿಲ್ಲವೆಂದರೆ ಇದೆ. ಅದು ಯಾವುದೆಂದರೆ 'ವೈಶೇಷ್ಯಾತ್- ಬ್ರಹ್ಮನಲ್ಲಿ ಸಾಮರ್ಥ್ಯ ಅಧಿಕವಾಗಿರು ವುದರಿಂದ ಅದು ಕೂಡದು. ಜೀವನ ಸಮಾನ ಭೋಗ ಈಶ್ವರನಲ್ಲಿ ಸರ್ವಥಾ ಕೂಡುವುದಿಲ್ಲ.

**೯) ಓಂ ಓಂ ಅತ್ತಾಚರಾಚರಗ್ರಹಣಾತ್ ಓಂ (ಅತ್ರೃತ್ವಾಧಿಕರಣಂ)**

'ಸರ್ವಂ ವಾ ಅತ್ತಿ' ಅನ್ನುವುದರಿಂದ ಎಲ್ಲ ತಿನ್ನುವವನು ಬ್ರಹ್ಮನೇ ವಿನಃ ಅದಿತಿ ಅಲ್ಲ ಯಾಕೆಂದರೆ 'ಚರಾಚರ ಗ್ರಹಣಾತ್', ಚೇತನಾಚೇತನಾತ್ಮಕ ಎಲ್ಲ ಜಗತ್ತನ್ನು ಗ್ರಾಸ ಮಾಡುವ ಯೋಗ್ಯತೆ ವಿಷ್ಣುವಿನಲ್ಲಿಯೇ ಇರುವುದರಿಂದ ವಿಷ್ಣುವೇ ಅತ್ತಾ ಆಗಿರುವನು.

**೧೦) ಓಂ ಓಂ ಪ್ರಕರಣಾಚ್ಚ ಓಂ**

'ನೈವೇಹ ಕಿಂಚನ' ಎಂದು ವಿಷ್ಣು (ಪ್ರಕರಣ) ವಿಭಾಗ ಬಲದಿಂದ ವಿಷ್ಣು ಮಾತ್ರ ಜಗತ್ತಿನ ಅತ್ತಾ ( ತಿನ್ನುವ) ಆಗಿರುತ್ತಾನೆ.

**೧೧) ಓಂ ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿತದ್ದರ್ಶನಾತ್ ಓಂ (ಗುಹಾಧಿಕರಣಂ)**

'ಋತಂ ಪಿಬಂತೌ' ಈ ಶೃತಿಯಲ್ಲಿ ಹೇಳಿದಂತೆ ಶುಭ ಕರ್ಮಫಲಭೋಗ ಮಾಡುವವರು ಇಬ್ಬರಿದ್ದು ಅವರು ಆತ್ಮಾನೌ ಎಂಬುದರಿಂದ ಜೀವಪರಮಾತ್ಮರ

ಲ್ಲದಂತೆ ಆತ್ಮಾ ಅಂತರಾತ್ಮರೆಂದು 'ಆತ್ಮಾನೌ- ಆದೇಯಂ ಮಾತೀತಿ' 'ಋತಂ ಪಿಬಂತೌ' ಈ ಶೃತಿಯಲ್ಲಿ ಹೇಳಿದಂತೆ ಶುಭ ಕರ್ಮಫಲಭೋಗ ಮಾಡುವರು ಇಬ್ಬರಿದ್ದು ಅವರು ಆತ್ಮಾನೌ ಎಂಬುದರಿಂದ ಜೀವಪರಮಾತ್ಮರಲ್ಲದಂತೆ ಆತ್ಮಾ ಅಂತರಾತ್ಮರೆಂದು 'ಆತ್ಮಾನೌ-ಆದೇಯಂ ಮಾತೀತಿ' ವ್ಯುತ್ಪತ್ತಿಯಿಂದ ಸ್ಪಷ್ಟವಾಗಿ ತೋರುತ್ತದೆ. ಅವರೇ ಯಾಕೆಂದರೆ ಗುಹಾಂ ಪ್ರವಿಷ್ಟೌಹೃದಯಗುಹಾಪ್ರವೇಶ ಮಾಡಿದವರು. ಅಂತಹ ಲಕ್ಷಣವು 'ಯೋ ವೇದ' ಈ ಶೃತಿಯಿಂದ ಈಶ್ವರನಲ್ಲಿಯೇ ಇದೆ ಎಂದು ಸೂಚಿತವಾಗುತ್ತದೆ. ದ್ವಿರೂಪತ್ವವು ಶ್ರೀಹರಿಯಲ್ಲಿಯೇ ಇರುವುದಕ್ಕೆ ಪ್ರಮಾಣೋದಾರಣೆ ಯೋಪುರ್ಮಾಂಸಮಂತಾತ್ ಇತ್ಯಾದಿ ಶೃತಿಗಳೇ ಮುಖ್ಯಪ್ರಮಾಣವೆಂದು ತಿಳಿಯಬೇಕು. ಇದರಿಂದ ಗುಹಾಪ್ರವೇಶ, ದ್ವಿತ್ವ, ಭೋಕ್ತೃತ್ವಾದಿ ಗುಣಗಳು ವಿಷ್ಣುವಿನಲ್ಲಿಯೇ ಇದೆಯೇ ವಿನಃ ಜೀವನಲ್ಲಿ ಸರ್ವಥಾ ಇಲ್ಲ.

## ೧೨) ಓಂ ಓಂ ವಿಶೇಷಣಾಚ್ಚ ಓಂ

'ಯಃ ಸೇತುರೀ ಜಾನಾನಾ' ಈ ರೀತಿ ಏಕವಚನ ಪ್ರಯೋಗದಿಂದ ಒಬ್ಬನೇ (ಪಾತಾ) ಪಾಲಕನೆಂಬ ವಿಶೇಷಣದಿಂದಲೂ ಈ ರೀತಿ ವಿಶೇಷಣ ವಿಶಿಷ್ಟನಾಗಿರುವನು ಪರಬ್ರಹ್ಮನೇ ವಿನಃ ಜೀವನು ಸರ್ವಥಾ ಆಗಲಾರನು.

## ೧೩) ಓಂ ಓಂ ಅಂತರ ಉಪಪತ್ತೇಃ ಓಂ (ಅಂತರಾಧಿಕರಣಂ)

'ಯ ಏಷೋಽಂತರಕ್ಷಿಣಿ' ಈ ಶೃತಿಯಿಂದ ಕಣ್ಣಿನೊಳಗೆ ಪ್ರಕಾಶರೂಪದಿಂದ ಇರುವನು ಭಗವಂತನೇ ಎಂದು ಉಪಪತ್ತೇಃ- (ಕೂಡುತ್ತದೆ) ಹೊಂದಾಣಿಕೆ ಆಗುತ್ತಿರುವನು. 'ಏತದಮೃತತ್ವಬ್ರಹ್ಮಶಬ್ದಾನಾಂ' ಎಂಬುದರಿಂದ ಅಂತರೇ (ಒಳಗೆ) ಎಂದು 'ಶ್ರವಣಾತ್' ಪ್ರತಿಪಾದಿತನಾಗಿರುವವನು ವಿಷ್ಣುವೇ ಸರಿ.

## ೧೪) ಓಂ ಓಂ ಸ್ಥಾನಾಧಿ ವ್ಯಪದೇಶಾಚ್ಚ ಓಂ

ಬ್ರಹ್ಮಸ್ಥಾನಭೂತವಾದ (ಅಕ್ಷಿ) ಕಣ್ಣಿನಲ್ಲಿಯ ದರ್ಶನ ಶಕ್ತಿಗೂ ಅದಕ್ಕೆ ಮುಖ್ಯ ನಿಯಾಮಕ (ಅಧಿಷ್ಠಾತೃ) ಬ್ರಹ್ಮಶಕ್ತಿಗೂ ವ್ಯಪದೇಶಾತ್-ಕಣ್ಣಿನ ಒಳಗಿರುವವನು ಯಾವನೋ ಅವನೇ ಬ್ರಹ್ಮನು ಜೀವನಲ್ಲ. ಶೃತಿ ಉದಾ: 'ಸರ್ಪಿರ್ವೋದಕಂ ವಾಸಿಂಚತಿ' ಇತ್ಯಾದಿಗಳು.

## ೧೫) ಓಂ ಸುಖವಿಶಿಷ್ಟಾಭಿಧಾನಾದೇವಚ ಓಂ

ಕಂ ಬ್ರಹ್ಮ ಖಂ ಬ್ರಹ್ಮ ಇತ್ಯಾದಿ ಪ್ರಕರಣಗಳಿಂದ 'ಸುಖವಿಶಿಷ್ಟಾಭಿಧಾನಾತ್ ಸುಖರೂಪ ಸುಖ ಪೂರ್ಣಸುಖಿ ಇತ್ಯಾದಿ ಹೆಸರಿನಿಂದ ಕರೆಯಿಸಿಕೊಳ್ಳುವುದರಿಂದ ಕಣ್ಣಿನೊಳಗೆ ಇರುವವನೂ ಪೂರ್ಣಜ್ಞಾನಾತ್ಮಕನೂ ಆದವನು ವಿಷ್ಣುವೇ ವಿನಃ ಜೀವನಲ್ಲ.

## ೧೬) ಓಂ ಶೃತೋಪನಿಷತ್ಕಗತ್ಯಭಿಧಾನಾಚ್ಚ ಓಂ

ಶೃತಿ ಉಪನಿಷತ್‌ಗಳಲ್ಲಿ ಕೇನ ವಾಯುವಿನಿಂದ ಸದ್ಯ ಕಾರ್ಯನಿರತ ಬ್ರಹ್ಮನಿಂದ ಪ್ರಾಪ್ತಿರೂಪ ಲಕ್ಷಣ, ಗಣ, ವರ್ಣನೆಯಿಂದ 'ಸ ಏನಾನ್ ಬ್ರಹ್ಮಗಮಯತಿ' ಎಂದು ವೇದದಲ್ಲಿ ಹೇಳುವುದರಿಂದಲೂ ಅಂತಹ ಚಕ್ಷುರಂತಸ್ಥನಾದ ಪುರುಷನು ಪರಮಾತ್ಮನೇ ವಿನಃ ಜೀವನಲ್ಲ.

## ೧೭) ಓಂ ಓಂ ಅನವಸ್ಥಿತೇರಸಂಭವಾಚ್ಚನೇತರಃ ಓಂ

ಇತರಃ-ಅಗ್ನಿ ಆದಿ ದೇವತೆಗಳಲ್ಲಿ ಅಂತಸ್ಥತ್ವವನ್ನು ಹೇಳಿದರೆ ಆ ಜೀವನಿಗೆ ಮತ್ತೊಬ್ಬ ಜೀವ ನಿಯಾಮಕ. ಅವನಿಗೆ ಮಗದೊಬ್ಬ ಹೀಗೆ ಅನವಸ್ಥಾ ದೋಷ ಬರುತ್ತಿರುವುದರಿಂದ ಜೀವನ ನಿಮಾಮಕ ಮತ್ತೊಬ್ಬ ಜೀವನೆಂದು ಕಲ್ಪಿಸುವುದಕ್ಕಿಂತ ಪರಮಾತ್ಮನಲ್ಲಿಯೇ ಅಂತಸ್ಥತ್ವ ಸರಿಯಾಗಿ ಕೂಡುವುದರಿಂದ ದೋಷವೂ ಯಾವುದೂ ಬರಲಾರದು.

**೧೮) ಓಂ ಓಂ ಅಂತರ್ಯಾಮ್ಯಧಿದೇವಾದಿಷ್ಯತದ್ಧರ್ಮವ್ಯಪದೇಶಾತ್ ಓಂ (ಅಂತರ್ಯಾಮ್ಯಧಿಕರಣಂ)**

'ಏಷತ ಆತ್ಮಾಂತರ್ಯಾಮ್ಯಮೃತಃ'- ಎಂಬ ಶೃತಿಯಲ್ಲಿ ಹೇಳಿದಂತೆ ಅಂತರ್ಯಾಮಿಯಾದವನು ವಿಷ್ಣುವೇ ವಿನಃ ಅನ್ಯ ದೇವತೆಗಳಲ್ಲ. ಅಧಿದೈವಾದಿಷು- ಅಧಿವೈಧ್ಯಾತ್ಮಆಧಿಭೂತ ಆದಿ ಪ್ರಕರಣಗಳಲ್ಲಿ ತದ್ಧರ್ಮೋಽಪದೇಶಾತ್-ಅಂತರ್ಯಾಮಿ ಮೊದಲಾದ ಧರ್ಮಗಳಿಂದ ನಿದರ್ಶನವಾಗಿರುವುದರಿಂದ ಮುಖ್ಯ ಪ್ರತಿಪಾದ್ಯನು ಶ್ರೀಹರಿಯೇ ವಿನಃ ಜೀವರಲ್ಲ.

**೧೯) ಓಂ ಓಂ ನ ಚ ಸ್ಮಾರ್ತಮತದ್ಧರ್ಮಾಲಾಪಾತ್ ಓಂ**

ಸ್ಮಾರ್ತಂ - ಕಪಿಲಸೂತ್ರಾದಿಗಳಿಂದ (ಸ್ಮೃತಿ) ಹೇಳಿಸಿಕೊಂಡ ಪ್ರಧಾನ ಜೀವನಾಗಲೀ ಅಂತರ್ಯಾಮಿ ಆಗಲಾರರು. ತದ್ಧರ್ಮಾಭಿಲಾಪಾತ್ ಜೀವ ಧರ್ಮಿಕವಾದ ತ್ರಿಗುಣತ್ವ ಸಂಸಾರಿತ್ವ ಆದಿ ಗುಣಗಳನ್ನು ಹೇಳದಿರುವುದರಿಂದ ಅದರಲ್ಲಿಯ ಮುಖ್ಯ ಅಂತರ್ಯಾಮ್ಯಾದಿ ಗುಣಗಳು ಬ್ರಹ್ಮನಲ್ಲಿಯೇ ಇದೆ ವಿನಃ ಜೀವರಲ್ಲಿಲ್ಲ.

**೨೦) ಓಂ ಓಂ ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ಓಂ**

ಚ-ನಿಷೇಧಾರ್ಥವನ್ನು (ಜೀವ) ಅಧ್ಯಾಹಾರ ಮಾಡಿದರೆ ಉಭಯೇ- ಮಾಧ್ಯಂದಿನರಾಗಲೀ, ಕಾಣ್ವರಾಗಲೀ, 'ಆತ್ಮನೋಽಂತರಃ', 'ವಿಜ್ಞಾನಾದಂತರಃ'- ಈ ಎಲ್ಲಾ ಶೃತಿ ಪ್ರತಿಪಾದ್ಯನಾದವನೆಂದು ವರ್ಣಿಸುತ್ತಿದ್ದು ಶಾರೀರನೂ, ಜೀವನೂ ಅಂತರ್ಯಾಮಿ ಸರ್ವಥಾ ಆಗುವುದಿಲ್ಲ.

## ೨೧) ಓಂ ಓಂ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ಓಂ (ಅದೃಶ್ಯತ್ವಾಧಿಕರಣಂ)

ಅದೃಶ್ಯತ್ವಾದಿಗುಣಕಃ- ಯತ್ತದದ್ರೇಶ್ಯಂ- ಇವೇ ಮೊದಲಾದ ವೇದವಾಕ್ಯದಿಂದ ವರ್ಣಿತರಾಗುವರೋ ಅಕ್ಷರ ಶಬ್ದವಾಚ್ಯನೂ ನಾರಾಣನೇ ವಿನಃ ಸರ್ವಥಾ ಪ್ರಕೃತ್ಯಾದಿಗಳಲ್ಲ ಯಾಕೆಂದರೆ ಧರ್ಮೋಕ್ತೇಃ- ಋಗಾದಿಪರವಿದ್ಯಾವಿಷಯತ್ವರೂಪವಾದ ಧರ್ಮಗಳು ಬ್ರಹ್ಮನಲ್ಲಿಯೇ ಇರುವುದರಿಂದ ಜೀವ ಪ್ರಕೃತ್ಯಾದಿಗಳಲ್ಲಿ ಈ ಧರ್ಮ ಸರ್ವಥಾ ಇರಲಾರದು. ಕೇವಲ ಅದೃಶ್ಯತ್ವಾದಿ ಗುಣಗಳು ಬ್ರಹ್ಮನಲ್ಲಿಯೇ ಇರುತ್ತವೆ.

## ೨೨) ಓಂ ಓಂ ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ ಓಂ

ಇತರೌ- ಎರಡು ಪ್ರಕೃತಿಗಳು (ಬ್ರಹ್ಮರುದ್ರರು) ಅದೃಶ್ಯತ್ವಾದಿ ಗುಣಯುಕ್ತರಲ್ಲ. ಯಾಕೆಂದರೆ ? 'ವಿಶೇಷಣ ಭೇದವ್ಯಪದೇಶಾಭ್ಯಾಂ' - ಅದೃಶ್ಯತ್ವವೇ ಮೊದಲಾದ ವಿಶೇಷಣಗಳಿಂದ ಅತ್ಯಂತ ಭಿನ್ನರಾಗಿರುವರು. ಬ್ರಹ್ಮರುದ್ರರಾಗದೇ ಅವರಿಂದ ಭಿನ್ನನಾದ 'ತಸ್ಮಾದೇತತ್ ಬ್ರಹ್ಮನಾಮ ಸಾರ್ವಜ್ಞತ್ವಾದಿ ಗುಣವಿಶಿಷ್ಠನಾದವನು ನಾರಾಯಣನೇ ವಿನಃ ಬೇರೆಯವರಲ್ಲ.

## ೨೩) ಓಂ ಓಂ ರೂಪೋಪನ್ಯಾಸಾಚ್ಚ ಓಂ

'ಯದಾಪಶ್ಯಃ ಪಶ್ಯತ ರುಕ್ಮವರ್ಣಂ' ಇತ್ಯಾದಿ ಶೃತಿಪ್ರತಿಪಾದ್ಯನು ಸ್ವರ್ಣವರ್ಣರೂಪ ಪ್ರತಿಪಾದನೆಯಿಂದಲೂ ಅದೃಶ್ಯತ್ವಾದಿ ಗುಣ ವಿಶಿಷ್ಠನಾದವನು ಶ್ರೀಮನ್ನಾರಾಯಣಾಖ್ಯ ಪರಬ್ರಹ್ಮನೇ ಆಗಿರುವನು.

**೨೪) ಓಂ ಓಂ ವೈಶ್ವಾನರಃ ಸಾಧಾರಣ ಶಬ್ದ ವಿಶೇಷಾತ್ ಓಂ (ವೈಶ್ವಾನರಾಧಿಕರಣಂ)**

ವೈಶ್ವಾನರಃ- 'ಯಸ್ತ್ವೇತಮೇವಂ' ಈ ಶೃತಿಯಿಂದ ವರ್ಣಿತನಾದ ವೈಶ್ವಾನರಾದಿ ಶಬ್ದವಾಚ್ಯನಾದವನು ವಿಷ್ಣುವೇ ವಿನಃ ಅಗ್ನಿಯಲ್ಲ. 'ಅಗ್ನಾವಿಷ್ಣೋ', 'ಆತ್ಮಾನಂ ವೈಶ್ವಾನರಂ'- ಇತ್ಯಾದಿ (ವೇದ) ಸಾಧಾರಣವಾದ ವೈಶ್ವಾನರಾದಿ ಶಬ್ದಗಳಿಂದ ಆತ್ಮಶಬ್ದವಾಚ್ಯವಾದ ವಿಶೇಷಣ ವಿಶಿಷ್ಟನಾದ ಪುರುಷ ಅಗ್ನಿಯಾಗದಂತೆ ಶ್ರೀವಿಷ್ಣುವೇ ಆಗಿರುತ್ತಾನೆ.

**೨೫) ಓಂ ಓಂ ಸ್ಮರ್ಯಮಾಣಮನುಮಾನಂಸ್ಯಾದಿತಿ ಓಂ**

ಇತಿ ಸ್ಮರ್ಯಮಾಣಂ ಅಹಂ ವೈಶ್ವಾನರೋಭೂತ್ವಾ- ಈ ಸ್ಮೃತಿಯಿಂದ ಪ್ರತಿಪಾದ್ಯನಾದವನು ಹಾಗೂ ಅನುಮಾನ-ವೈಶ್ವಾನರವಿದ್ಯೆಯು ಭಗವತ್ಪರವಾಗಿರುವುದಾಗಿ ಅನುಮಾನ ಯೋಗ್ಯವಾಗಿದೆ. ಆದರಿಂದ ಅಂತರ್ಯಾಮಿ ವಿಷ್ಣುವೇ.

**೨೬) ಓಂ ಓಂ ಶಬ್ದಾದಿಭ್ಯೋಽಂತಪ್ರತಿಷ್ಠಾನಾನೇತಿಚೇನ್ನತಥಾದೃಷ್ಟ್ಯುಪದೇಶಾದಸಂಭವಾತ್ ಪುರುಷವಿಧಮಪಿ ಚೈನಮಧೀಯತೇ ಓಂ**

ಯುಕ್ತಿಗಳ ದ್ಯೋತಕ ಚ ಶಬ್ದವು ಶಬ್ದಾದಿಭ್ಯಃ-ಅಗ್ನಿಶಬ್ದವು ಹೋಮಾಧಿಕರಣ ರೂಪಲಿಂಗದಿಂದ (ಹೇತು) ಅಂತಃಪ್ರತಿಷ್ಠಾನಾತ್- ಪಾಚಕತ್ವಾದಿ ಶರೀರದ ಒಳಗಿನ (ಅಂತರ) ಗುಣವರ್ಣನೆಯಿಂದ ವೈಶ್ವಾನರನೆಂದರೆ ವಿಷ್ಣುವಲ್ಲ ಅಗ್ನಿಯೇ. ಅಂದರೆ ತಥಾದೃಷ್ಟ್ಯುಪದೇಶಾತ್- ಹಾಗೆ ಅಗ್ನ್ಯಾದಿ ಹೆಸರು ಕಾರಣ ಕಾರ್ಯಗಳಿಂದ ಉಪಾಸನೆ ಮಾಡಬೇಕೆಂದು ಉಪದೇಶ ಮಾಡಿರುವುದರಿಂದ ಅಂತಹ ಶೃತಿಲಿಂಗಗಳಿಂದ ವರ್ಣಿತನಾದವನು (ಸಾವಕಾಶ ಪ್ರಮಾಣ) ಸಾಕ್ಷಾತ್ ಬ್ರಹ್ಮನೇ. ಈ ಶೃತಿಯಲ್ಲಿ ಹೇಳಿದ ಆತ್ಮಬ್ರಹ್ಮಾದಿ ಶಬ್ದಗಳು ಅಗ್ನಿಯಲ್ಲಿ ಸರ್ವಥಾ ಪ್ರವೃತ್ತವಾಗಲಾರವು. ಅದರಿಂದ ವೈಶ್ವಾನರನೆಂದರೆ ವಿಷ್ಣುವೇ. ಮತ್ತು

ಪುರುಷವಿಧಂ- ಪುರುಷಸೂಕ್ತವರ್ಣಿತ ನಾರಾಯಣ ಸಮಾನವಾದ ಗಣಗಳನ್ನೇ ಹೇಳುತ್ತಿರುವುದರಿಂದ ಹಾಗೂ ಪುರುಷಸೂಕ್ತವು ವಿಷ್ಣುವೇ ಎಂದು ಅನೇಕ ಪ್ರಮಾಣ ಪ್ರಮಿತವಾಗಿರುವುದರಿಂದಲೂ ವಿಷ್ಣುವೇ ವೈಶ್ವಾನರ ಶಬ್ದ ವಾಚ್ಯನು, ಬೇರೆ ಅಗ್ನ್ಯಾದಿಗಳಲ್ಲವೇ ಅಲ್ಲ.

**೨೭) ಓಂ ಓಂ ಅತ ಏವ ನ ದೇವತಾ ಭೂತಂ ಚ ಓಂ**

ಅದಕ್ಕೆ ಅಗ್ನ್ಯಾದಿದೇವತೆಗಳಾಗಲೀ ಅವರಿಂದ ನಿಯಮಿತರಾದ ಜೀವ (ಭೂತ)ರಾಗಲೀ ವೈಶ್ವಾನರ ಶಬ್ದ ಪ್ರತಿಪಾದ್ಯರಾಗದೇ ವಿಷ್ಣುವೇ ಆಗಿರುವನು.

**೨೮) ಓಂ ಓಂ ಸಾಕ್ಷಾದಪ್ಯವಿರೋಧಂ ಜೈಮಿನಿಃ ಓಂ**

ಬ್ರಹ್ಮಸ್ಥಾನಭೂತವಾದ (ಅಕ್ಷಿ) ಕಣ್ಣಿನಲ್ಲಿಯ ದರ್ಶನ ಶಕ್ತಿಗೂ ಅದಕ್ಕೆ ಮುಖ್ಯ ನಿಯಾಮಕ (ಅಧಿಷ್ಠಾತೃ) ಬ್ರಹ್ಮಶಕ್ತಿಗೂ ವ್ಯಪದೇಶಾತ್-ಕಣ್ಣಿನ ಒಳಗಿರುವವನು ಯಾವನೋ ಅವನೇ ಬ್ರಹ್ಮನು ಜೀವನಲ್ಲ. ಶ್ರುತಿ ಉದಾ; 'ಸರ್ಪಿರ್ವೋದಕೆ ವಾಸಿಂಚತಿ' ಇತ್ಯಾದಿಗಳು.

**೧೯) ಓಂ ಓಂ ನ ಚ ಸ್ಮಾರ್ತಮತ್ದ್ಧರ್ಮಾಭಿಲಾಪಾತ್ ಓಂ**

ಸ್ಮಾರ್ತಂ- ಕಪಿಲಸೂತ್ರಾದಿಗಳಿಂದ (ಸ್ಮೃತಿ) ಹೇಳಿಸಿಕೊಂಡ ಪ್ರಧಾನ ಜೀವನಾಗಲೀ ಅಂತರ್ಯಾಮಿ ಆಗಲಾರರು. ತದ್ಧರ್ಮಾಭಿಲಾಪಾತ್ ಜೀವ ಧರ್ಮಿಕವಾದ ತ್ರಿಗುಣತ್ವ ಸಂಸಾರಿತ್ವ ಆದಿ ಗುಣಗಳನ್ನು ಹೇಳದಿರುವುದರಿಂದ ಅದರಲ್ಲಿಯ ಮುಖ್ಯ ಅಂತರ್ಯಾಮ್ಯಾದಿ ಗುಣಗಳು ಬ್ರಹ್ಮನಲ್ಲಿಯೇ ಇದೆ ವಿನಃ ಜೀವರಲ್ಲಿಲ್ಲ.

**೨೦) ಓಂ ಓಂ ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ಓಂ**

ಚ- ನಿಷೇಧಾರ್ಥವನ್ನು (ಜೀವ) ಅಧ್ಯಾಹಾರ ಮಾಡಿದರೆ ಉಭಯೇ- ಮಾಧ್ಯಂದಿನರಾಗಲೀ, ಕಾಣ್ವರಾಗಲೀ, 'ಆತ್ಮನೋಽಂತರಃ', 'ವಿಜ್ಞಾನಾದಂತ ರಃ'- ಎಲ್ಲಾ ಶ್ರುತಿ ಪ್ರತಿಪಾದ್ಯನಾದವನೆಂದು ವರ್ಣಿಸುತ್ತಿದ್ದು ಶಾರೀರನೂ, ಜೀವನೂ ಅಂತರ್ಯಾಮಿ ಸರ್ವಥಾ ಆಗುವುದಿಲ್ಲ.

**೨೧) ಓಂ ಓಂ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ಓಂ ( ಅದೃಶ್ಯ ತ್ವಾಧಿಕರಣಂ)**

ಅದೃಶ್ಯತ್ವಾದಿಗುಣಕಃ- ಯತ್ತದದ್ರೇಶ್ಯಂ- ಇವೇ ಮೊದಲಾದ ವೇದವಾ ಕ್ಯದಿಂದ ವರ್ಣಿತರಾಗುವರೋ ಅಕ್ಷರ ಶಬ್ದವಾಚ್ಯನೂ ನಾರಾಯಣನೇ ವಿನಃ ಸರ್ವಥಾ ಪ್ರಕೃತ್ಯಾದಿಗಳಲ್ಲ ಯಾಕೆಂದರೆ ಧರ್ಮೋಕ್ತೇಃ- ಋಗಾದಿಪರವಿದ್ಯಾ ವಿಷಯತ್ವರೂಪವಾದ ಧರ್ಮಗಳು ಬ್ರಹ್ಮನಲ್ಲಿಯೇ ಇರುವುದರಿಂದ ಜೀವ ಪ್ರಕೃತ್ಯಾದಿಗಳಲ್ಲಿ ಈ ಧರ್ಮ ಸರ್ವಥಾ ಇರಲಾರದು. ಕೇವಲ ಅದೃಶ್ಯತ್ವಾದಿ ಗುಣಗಳು ಬ್ರಹ್ಮನಲ್ಲಿಯೇ ಇರುತ್ತವೆ.

**೨೨) ಓಂ ಓಂ ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ ಓಂ**

ಇತರೌ- ಎರಡು ಪ್ರಕೃತಿಗಳು (ಬ್ರಹ್ಮರುದ್ರರು) ಅದೃಶ್ಯತ್ವಾದಿ ಗುಣಯು ಕ್ತರಲ್ಲ. ಯಾಕೆಂದರೆ? 'ವಿಶೇಷಣ ಭೇದವ್ಯಪದೇಶಾಭ್ಯಾಂ'- ಅದೃಶ್ಯತ್ವಮೊದ ಲಾದ ವಿಶೇಷಣಗಳಿಂದ ಅತ್ಯಂತ ಭಿನ್ನರಾಗಿರುವರು. ಬ್ರಹ್ಮರುದ್ರರಾಗಿದ್ದು ಅವ ರಿಂದ ಭಿನ್ನನಾದ 'ತಸ್ಮಾದೇತತ್ ಬ್ರಹ್ಮನಾಮ ಸಾರ್ವಜ್ಞತ್ವಾದಿ ಗುಣವಿಶಿಷ್ಟನಾ ದವನು ನಾರಾಯಣನೇ ವಿನಃ ಬೇರೆಯವರಲ್ಲ.

**೨೩) ಓಂ ಓಂ ರೂಪೋಪನ್ಯಾಸಾಚ್ಚ ಓಂ .**

'ಯದಾಪಶ್ಯಃ ಪಶ್ಯತ ರುಕ್ಮವರ್ಣಂ' ಇತ್ಯಾದಿ ಶೃತಿಪ್ರತಿಪಾದ್ಯನು ಸ್ವರ್ಣವರ್ಣರೂಪ ಪ್ರತಿಪಾದನೆಯಿಂದಲೂ ಅದೃಶ್ಯತ್ವಾದಿ ಗುಣ ವಿಶಿಷ್ಠನಾದವನು ಶ್ರೀಮನ್ನಾರಾಯಣಾಖ್ಯ ಪರಬ್ರಹ್ಮನೇ ಆಗಿರುವನು.

**೨೪) ಓಂ ಓಂ ವೈಶ್ವಾನರಃ ಸಾಧಾರಣ ಶಬ್ದ ವಿಶೇಷಾತ್ ಓಂ (ವೈಶ್ವಾನರಾಧಿಕರಣಂ)**

ವೈಶ್ವಾನರಃ- 'ಯಸ್ತ್ವೇತಮೇವಂ' ಈ ಶೃತಿಯಿಂದ ವರ್ಣಿತನಾದ ವೈಶ್ವಾನರಾದಿ ಶಬ್ದವಾಚ್ಯನಾದವನು ವಿಷ್ಣುವೇ ವಿನಃ ಅಗ್ನಿಯಲ್ಲ. 'ಅಗ್ನಾವಿಷ್ಣೌ', 'ಆತ್ಮಾನಂ ವೈಶ್ವಾನರಂ' - ಇತ್ಯಾದಿ (ವೇದ) ಸಾಧಾರಣವಾದ ವೈಶ್ವಾನರಾದಿ ಶಬ್ದಗಳಿಂದ ಆತ್ಮಶಬ್ದವಾಚ್ಯವಾದ ವಿಶೇಷಣ ವಿಶಿಷ್ಠನಾದವನು ಅಗ್ನಿ ಆಗದಂತೆ ಶ್ರೀವಿಷ್ಣುವೇ ಆಗಿರುತ್ತಾನೆ.

**೨೫) ಓಂ ಓಂ ಸ್ಮರ್ಯಮಾಣಮನುಮಾನಂಸ್ಯಾದಿತಿ ಓಂ**

ಇತಿ ಸ್ಮರ್ಯಮಾಣಂ ಆಹಂ ವೈಶ್ವಾನರೋಭೂತ್ವಾ- ಈ ಸ್ಮೃತಿಯಿಂದ ಪ್ರತಿಪಾದ್ಯನಾದವನು ಹಾಗೂ ಅನುಮಾನಂ-ವೈಶ್ವಾನರವಿದ್ಯೆಯು ಭಗವತ್ಪರವಾಗಿರುವುದಾಗಿ ಅನುಮಾನ ಯೋಗ್ಯವಾಗಿದೆ. ಆದರಿಂದ ಅಂತರ್ಯಾಮಿ ವಿಷ್ಣುವೇ.

**೨೬) ಓಂ ಓಂ ಶಬ್ದಾದಿಭ್ಯೋಽಂತಪ್ರತಿಷ್ಠಾನಾನ್ನೇತಿಚೇನ್ನತಥಾದೃಷ್ಟ್ಯುಪದೇಶಾದಸಂಭವಾತ್ ಪುರುಷವಿಧಮಪಿ ಚೈನಮಧೀಯತೇ ಓಂ**

ಯುಕ್ತಿಗಳ ದ್ಯೋತಕ ಚ ಶಬ್ದವು ಶಬ್ದಾದಿಭ್ಯಃ- ಅಗ್ನಿಶಬ್ದವು ಹೋಮಾಧಿಕರಣ ರೂಪಲಿಂಗದಿಂದ (ಹೇತು) ಅಂತಃಪ್ರತಿಷ್ಠಾನಾತ್ -ಪಾಚಕತ್ವಾದಿ ಶರೀರದ ಒಳಗಿನ (ಅಂತರ) ಗುಣವರ್ಣನೆಯಿಂದ ವೈಶ್ವಾನರನೆಂದರೆ ವಿಷ್ಣುವಲ್ಲ

ಅಗ್ನಿಯೇ. ಅಂದರೆ ತಥಾದೃಷ್ಟ್ಯುಪದೇಶಾತ್- ಹಾಗೆ ಅಗ್ನ್ಯಾದಿ ಹೆಸರು ಕಾರಣ ಕಾರ್ಯಗಳಿಂದ ಉಪಾಸನೆ ಮಾಡಬೇಕೆಂದು ಉಪದೇಶ ಮಾಡಿರುವುದರಿಂದ ಅಂತಹ ಶೃತಿಲಿಂಗಗಳಿಂದ ವರ್ಣಿತನಾದವನು (ಸಾವಕಾಶ ಪ್ರಮಾಣ) ಸಾಕ್ಷಾತ್ ಬ್ರಹ್ಮನೇ. ಈ ಶೃತಿಯಲ್ಲಿ ಹೇಳಿದ ಆತ್ಮಬ್ರಹ್ಮಾದಿ ಶಬ್ದಗಳು ಅಗ್ನಿಯಲ್ಲಿ ಸರ್ವಥಾ ಪ್ರವೃತ್ತವಾಗಲಾರವು. ಆದರಿಂದ ವೈಶ್ವಾನರನೆಂದರೆ ವಿಷ್ಣುವೇ. ಮತ್ತು ಪುರುಷವಿಧಂ- ಪುರುಷಸೂಕ್ತವರ್ಣಿತ ನಾರಾಯಣ ಸಮಾನವಾದ ಗುಣಗಳನ್ನೇ ಹೇಳುತ್ತಿರುವುದರಿಂದ ಹಾಗೂ ಪುರುಷಸೂಕ್ತವು ವಿಷ್ಣುಪರವೇ ಎಂದು ಅನೇಕ ಪ್ರಮಾಣಪ್ರಮಿತವಾಗಿರುವುದರಿಂದಲೂ ವಿಷ್ಣುವೇ ವೈಶ್ವಾನರ ಶಬ್ದ ವಾಚ್ಯನು, ಬೇರೆ ಅಗ್ನ್ಯಾದಿಗಳಲ್ಲವೇ ಅಲ್ಲ.

### ೨೭) ಓಂ ಓಂ ಅತ ಏವ ನ ದೇವತಾ ಭೂತಂ ಚ ಓಂ

ಅದಕ್ಕೆ ಅಗ್ನ್ಯಾದಿದೇವತೆಗಳಾಗಲೀ ಅವರಿಂದ ನಿಯಮಿತರಾದ ಜೀವ (ಭೂತ)ರಾಗಲೀ ವೈಶ್ವಾನರ ಶಬ್ದ ಪ್ರತಿಪಾದ್ಯರಾಗದೇ ವಿಷ್ಣುವೇ ಅಗಿರುವನು.

### ೨೮) ಓಂ ಓಂ ಸಾಕ್ಷಾದಪ್ಯವಿರೋಧಂ ಜೈಮಿನಿಃ ಓಂ

ಅಗ್ನ್ಯಾದಿಗಳಲ್ಲಿ ಮುಖ್ಯವೃತ್ತಿಯಿಂದ ಶಬ್ದವಾಚ್ಯತ್ವವು ಇಲ್ಲದಿದ್ದರೂ ಗೌಣ ವೃತ್ತಿಯಿಂದ ಇದೆ. ಅಜ್ಞಾನಾದಿ ದೋಷವಿಶಿಷ್ಟರಾಗಿರುವುದರಿಂದ ಮುಖ್ಯ ವೃತ್ತಿ ಯಿಂದ ವಿಷ್ಣುವೇ ವಾಚ್ಯನೆಂಬುದು ಜೈಮಿನಿ ಋಷಿಗಳ ಅಭಿಪ್ರಾಯ.

### ೨೯) ಓಂ ಓಂ ಅಭಿವ್ಯಕ್ತೇರಿತ್ಯಾಶ್ಮರಥ್ಯಃ ಓಂ

ಅಭಿವ್ಯಕ್ತೇಃ- ಬ್ರಹ್ಮೋಪಾಸನೇ ಮಾಡುವ ಅಗ್ನ್ಯಾದಿಗಳ ನಿಮಿತ್ತ ಈಶ್ವರನ ಅಭಿವ್ಯಕ್ತಿ ನಿಮಿತ್ತ ಅಗ್ನ್ಯಾದಿ ಸೂಕ್ತಗಳ ಅಭಿವ್ಯಕ್ತಿ ಎಂದು ಆಶ್ಮರಥ್ಯಾ ಚಾರ್ಯರ (ಅಭಿಪ್ರಾಯ) ಮತವೆಂದು ತಿಳಿಯಬೇಕು.

**೩೦) ಓಂ ಓಂ ಅನುಸ್ಮೃತೇರ್ಬಾದರಿಃ ಓಂ**

ಬಾದರಿ ಎಂಬುವರ ಅಭಿಪ್ರಾಯವು - ಆಯಾಸೂಕ್ತಗಳಿಂದ ಉಪಾಸನೆ ಮಾಡುವವರು ಬ್ರಹ್ಮನ ಅನುಸಂಧಾನಪೂರ್ವಕವಾಗಿ ವರ್ಣನೆ ಮಾಡುವುದೇ ಅಗ್ನ್ಯಾದಿ ಸೂಕ್ತಗಳ ವ್ಯವಸ್ಥೆ ಎಂದು ಬಾದರಿಯವರ ಅಭಿಮತವಾಗಿದೆ.

**೩೧) ಓಂ ಓಂ ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ ಓಂ**

ಯಾವ ಕಾರಣದಿಂದ 'ತಂ ಯಥಾಯಥೋಪಾಸತೇ' - ಈ ರೀತಿ ಪ್ರಸಿದ್ಧವಾದ ಶೃತಿ ಎಂಬುದಾಗಿ ಜೈಮಿನಿಯವರು ಪ್ರತಿಪಾದಿಸುತ್ತಾರೆ. ಯಾರು ಅಗ್ನ್ಯಾದಿಸೂಕ್ತಗಳಿಂದಲೇ ಸೂಕ್ತಗಳ ಅಭಿವ್ಯಕ್ತಿಯ ನಿಯಮ ಎಂದು ಜೈಮಿನಿ ಆಚಾರ್ಯರು ಹೇಳುತ್ತಾರೆ.

**೩೨) ಓಂ ಓಂ ಅನುವಂತಿ ಚೈನಮಸ್ಮಿನ್ ಓಂ**

ಯಾವ ಫಲ ನಿಮಿತ್ತವಾಗಿ ಏನಂ- ಈ ವಿಷ್ಣುವನ್ನು ಆಸ್ಮಿನ್- ಈ ಅಗ್ನ್ಯಾದಿಗಳನ್ನು ನಿಮಿತ್ತವಾಗಿಟ್ಟುಕೊಂಡು 'ಯೋಽಗ್ನೌತಿಷ್ಠನ' - ಇವೇ ಮೊದಲಾದ ಶೃತಿಗಳಿಂದ ಅಗ್ನ್ಯಾದಿಗಳಲ್ಲಿಯ ವಿಷ್ಣುವನ್ನು ಉಪಾಸನೆ ಮಾಡಿದರೂ ಅಮುಖ್ಯ ಅಗ್ನ್ಯಾದಿಗಳ ಪ್ರಾಪ್ತಿಯಾಗುತ್ತದೆಯೆಂದರೆ - ಆ ಶಬ್ದಗಳಿಂದ ಪ್ರತಿಪಾದ್ಯನಾದ ವಿಷ್ಣುವಿನ ಪ್ರಾಪ್ತಿಯೇ ಆಗುವುದೆಂದು (ಶಾಸ್ತ್ರದ) ಸರ್ವವೇದಾಂತದ ಅಭಿಪ್ರಾಯವಾಗಿದೆ. ಒಟ್ಟು ಸರ್ವ ದೇವಗತ. ದೇವತಾಪದವಾಚ್ಯ ಅಂತರ್ಯಾಮಿಯಾಗಿ ಸರ್ವಜಗತ್ಪ್ರೇರಕನಾದವನು ಬ್ರಹ್ಮ ಶಬ್ದಪ್ರತಿಪಾದ್ಯನು ಶ್ರೀಮನ್ನಾರಾಯಣನೇ ವಿನಃ ಬೇರೆ ಯಾರೂ ಅಲ್ಲ ಎಂಬುದೇ ಪಾದದ ಅಭಿಪ್ರಾಯವಾಗಿದೆ.

**ಇತಿ ಶ್ರೀಜಗನ್ನಾಥಯತಿಕೃತಾಯಾಂ ಸೂತ್ರದೀಪಿಕಾಯಾಂ ಪ್ರಥಮಾಧ್ಯಾಯಸ್ಯ ದ್ವಿತೀಯಃ ಪಾದಃ ಉಮರ್ಜಿ ಪ್ರಹ್ಲಾದಕೃತ ಸೂತ್ರದೀಪಿಕೆಯ ಕನ್ನಡಾನುವಾದದ ಪ್ರಥಮಾಧ್ಯಾಯದ ದ್ವಿತೀಯ ಪಾದ ಸಮಾಪ್ತಿ.**

## ೧) ಓಂ ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ (ದ್ಯುಭ್ವಾಧಿಕರಣಂ೧)

ದ್ಯುಭ್ವಾದ್ಯಾಯತನಂ - ಈ ವಾಕ್ಯದಲ್ಲಿ ವರ್ಣಿತನಾದವನು ಸ್ವರ್ಗಭೂಮಿ ಆದಿ ಎಲ್ಲ(ರೀತಿ)ರಿಗೂ ಆಶ್ರಮಭೂತನಾದವನು ಹರಿಯೇ ವಿನಃ ಬೇರೆಯವರಲ್ಲ. ಯಾಕೆಂದರೆ ಸ್ವಶಬ್ದಾತ್- ಸ್ವ ಶಬ್ದದಿಂದ (ಗೃಹೀತ) ಪ್ರತಿಪಾದಿತ ಬ್ರಹ್ಮ ಶಬ್ದ ಪ್ರತಿಪಾದ್ಯ ಆತ್ಮ ಶಬ್ದ ಇರುವುದರಿಂದ ಸ್ವರ್ಗಾದ್ಯಾಶ್ರಮ ವಿಷ್ಣುವೇ.

## ೨) ಓಂ ಓಂ ಮುಕ್ತೋಪಸೃಪ್ಯವ್ಯಪದೇಶಾತ್ ಓಂ

ಭೂಮ್ಯಾದ್ಯಾಶ್ರಯನು ವಿಷ್ಣುವಿನಿಂದ ಅನ್ಯನಾದವನು ಬೇರೆ ಅಲ್ಲ. ಯಾಕೆಂದರೆ ಮುಕ್ತೋಪಸೃಪ್ಯವ್ಯಪದೇಶಾತ್-ದ್ಯುಭ್ವಾದ್ಯಾಶ್ರಯ ವಸ್ತು ( ಜೀವ) ಅಮೃತಸ್ಯೈಷಸೇತುಃ ವಿಗೆ ಮುಕ್ತಿ ಕೊಡುವನು ಈಶ್ವರನೇ, (ಭಾವ ಪ್ರಾಧಾನ್ಯ ಇಲ್ಲಿ).

## ೩) ಓಂ ಓಂ ನಾನುಮಾನಮತಚ್ಛಬ್ದಾತ್ ಓಂ

ಅನುಮಾನಂ- ಆಸಾಮಾನ ಅಥವಾ ಅನುಮಾನ(ದಿಂದ)ವೆಂಬ ಪ್ರಮಾಣದಿಂದ (ಸಿದ್ಧ) ವರ್ಣಿತವಾದ ಪಾಶುಪತಾದಿ ಶಾಸ್ತ್ರಗಳಿಂದ ಸರ್ವಾಶ್ರಯವೆಂದು ಪ್ರಸಿದ್ಧರಾದ ರುದ್ರ ಪ್ರಧಾನ ಮೊದಲಾದವರುಗಳು ಭೂಮ್ಯಾದ್ಯಾಶ್ರಯ ಆಗಲಾರರು. ಯಾಕೆಂದರೆ ಅತಚ್ಛಬ್ದಾತ್- ಭಸ್ಮಧರ, ಉಗ್ರ ಇತ್ಯಾದಿ ಶೃತಿಲಿಂಗಾದಿಗಳು ದ್ಯುಭ್ವಾದ್ಯಾಯತನಕ್ಕೆ ಇಲ್ಲದಿರುವುದರಿಂದ ವಿಷ್ಣುವೇ ಆಗಿರುವನು ಬೇರೆಯವರಲ್ಲ.

## ೪) ಓಂ ಓಂ ಪ್ರಾಣಭೃಚ್ಚ ಓಂ

ಜೀವನಲ್ಲಿಯೂ ಅದಕ್ಕೆ ದ್ಯುಭ್ವಾದ್ಯಾಯತನತ್ವವೂ ಇಲ್ಲದೇ ಹರಿಯಲ್ಲಿಯೇ ಇದೆ.

೫) ಓಂ ಓಂ ಭೇದವ್ಯಪದೇಶಾತ್ ಓಂ

ಸ್ಪಷ್ಟಯದಾಪಶ್ಯತ್ಯನ್ಯಮೀಶಂ- ಈ ಶೃತಿಯಿಂದ ಜೀವ ಈಶರಲ್ಲಿ ಪರಸ್ಪರ ಭೇದವಿರುವುದರಿಂದ ಅವರಿಬ್ಬರಲ್ಲಿ ಐಕ್ಯವು ಸರ್ವಥಾ ಕೂಡಲಾರದು.

೬) ಓಂ ಓಂ ಪ್ರಕರಣಾತ್ ಓಂ

'ಅನಶ್ನನ್ನನ್ಯೋ ಅಭಿಚಾಕಸೀತಿ' ಇತ್ಯಾದಿ ವಿಷ್ಣು ವರ್ಣನೆ ಪ್ರಕರಣವಿದ್ದು ಇಲ್ಲಿ ಜೀವನಿಗೆ ವಿಷ್ಣುವಿನಿಂದ ಭೇದವನ್ನೇ ಹೇಳುತ್ತಿದ್ದು ಪರಸ್ಪರ ಭೇದವೂ ಇದೆ.

೭) ಓಂ ಓಂ ಸ್ಥಿತ್ಯದನಾಭ್ಯಾಂ ಚ ಓಂ

ಜೀವೇಶರಿಗೆ 'ದ್ವಾಸುಪರ್ಣಾ' 'ಜಾತೆ' ಇತ್ಯಾದಿ ವಾಕ್ಯಗಳಿಂದ ಕರ್ಮಫಲವನ್ನು ಉಪಭೋಗಿಸುವ ಅವಸ್ಥೆ ಭೋಗ ಕೊಡುವ ಅವಸ್ಥೆ ಎಂಬ ಎರಡು ಕಾರಣ ಕೊಟ್ಟಿದ್ದರಿಂದ ಜೀವ-ಬ್ರಹ್ಮರಲ್ಲಿ ಸರ್ವಥಾ ಐಕ್ಯ ಕಂಡುಬರಲಾರದು.

೮) ಓಂ ಓಂ ಭೂಮಾ ಸಂಪ್ರದಾನಾದಾದಧ್ಯುಪದೇಶಾತ್ ಓಂ (ಭೂಮಾಧಿಕರಣಂ)

'ಯೋ ವೈ ಭೂಮಾತತ್ಸುಖಂ' - ಇಲ್ಲಿ ಹೇಳಿದ ಭೂಮ ಶಬ್ದಕ್ಕೆ ಅರ್ಥಪೂರ್ಣ. ಅಂತಹ ಪೂರ್ಣನು ವಿಷ್ಣುವೇ ಯಾಕೆಂದರೆ 'ಸಂಪ್ರಸಾದಾತ್' - ಯಾವನು ಭೂಮನೂ ಅವನೇ ಸಂಪ್ರಸಾದನು. ಪೂರ್ಣಸುಖರೂಪನೆಂದು ಕರೆಸಿಕೊಳ್ಳುತ್ತಾನೆ. ಅಧ್ಯುಪದೇಶಾತ್ - ನಾಮಾದಿ ಬೇರೆ ದೇವತೆಗಳಕಿಂತಲೂ ಉತ್ತಮನೆಂದು ಹೇಳಿಸಿಕೊಳ್ಳುವುದರಿಂದ ವಿಷ್ಣುವೇ ಭೂಮ ಪೂರ್ಣಸುಖರೂಪನು ಬೇರೆಯವರಲ್ಲ.

## ೯) ಓಂ ಓಂ ಧರ್ಮೋಪಪತ್ತೇಶ್ಚ ಓಂ

'ಸ ಏವಾಧಸ್ತಾತ್' - ಇತ್ಯಾದಿಗಳಿಂದ ಪೂರ್ಣಸುಖತ್ವಾದಿ ಸರ್ವಧರ್ಮಗಳು ಆ ಭಗವಂತನಲ್ಲಿ ಕೂಡುವುದರಿಂದ ಭೂಮ ಎಂದರೆ ವಿಷ್ಣುವೇ ಆಗಿರುವನು.

## ೧೦) ಓಂ ಓಂ ಅಕ್ಷರಮಂಬರಾಂತಧೃತೇಃ ಓಂ (ಅಕ್ಷರಾಧಿಕರಣಂ)

ಅಕ್ಷರಂ- 'ತದ್ವಾ ಏತತ್' - ಈ ರೀತಿ ಅಕ್ಷರ ಶಬ್ದವಾಚ್ಯನು ಬ್ರಹ್ಮನೇ ವಿನಃ ಚಿತ್-ಪ್ರಕೃತಿ ಅಲ್ಲ ಯಾಕೆಂದರೆ 'ಅಂಬರಾಂತ ಧೃತೇ' - 'ಏತಸ್ಮಿನ್ ಖಲ್ವಕ್ಷರೇ' - ಈ ರೀತಿ ಆಕಾಶದ ಒಳಗಿರುವ ಪದಾರ್ಥ ಧಾರಕತ್ವವು ವಿಷ್ಣುವಿನಲ್ಲಿ ಮುಖ್ಯ ವಾಗಿ ಕೇಳುವುದರಿಂದ ವಿಷ್ಣುವೇ (ಭೂಮ) ಪೂರ್ಣಸುಖರೂಪಿಯು.

## ೧೧) ಓಂ ಓಂ ಸಾಚಪ್ರಶಾಸನಾತ್ ಓಂ

ಚ ಯಾಕೆಂದರೆ ಸಾ(ಚ) (ಅಂಬರಾಂತ ಧೃತಿ) ಆಕಾಶದ ಒಳಗೆ ಧಾರಣವು ಪ್ರಶಾಸನಾತ್ ಭಗವದಾಜ್ಞೆಯಿಂದ ಮಾತ್ರ ಆಗಲು ಸಾಧ್ಯ. 'ಏಕ ಸ್ಯವಾ ಅಕ್ಷರಸ್ಯ' - ಈ ಶೃತಿಯಲ್ಲಿ ಹೇಳಿದ್ದರಿಂದ ಅಕ್ಷರ ಶಬ್ದದಿಂದ ವರ್ಣನೆ ಮಾಡಿ ಸಿಕೊಳ್ಳುವನು ವಿಷ್ಣುವೇ ವಿನಃ ಚೇತನಪ್ರಕೃತ್ಯಾದಿಗಳಲ್ಲ.

## ೧೨) ಓಂ ಓಂ ಅನ್ಯಭಾವವ್ಯಾವೃತ್ತೇಶ್ಚ ಓಂ

'ಅನ್ಯಭಾವಾನಾಂ' - ಭಗವಂತನಿಂದ ಭಿನ್ನವಾದ ವಸ್ತುಗಳಾದ ಸ್ಥೂಲತ್ವಾದಿಗಳ ವಿರುದ್ಧವಾದ 'ಅಸ್ಥೂಲಮನಣು' ಈ ಶೃತಿಯಿಂದ ಅಕ್ಷರ ವ್ಯಾವೃತ್ತಃ-ಇಲ್ಲವೆಂದು ಹೇಳುವುದರಿಂದ ಬ್ರಹ್ಮನೇ ಅಕ್ಷರ ಶಬ್ದ ಪ್ರತಿಪಾದ್ಯ ನೆಂದರ್ಥ.

**೧೩) ಓಂ ಓಂ ಈಕ್ಷತಿಕರ್ಮವ್ಯಪದೇಶಾತ್ ಸಃ ಓಂ (ಸದಧಿಕರಣಂ)**

'ಸ ದೇವಸೌಮ್ಯೇದಮಗ್ರ ಆಸೀತ್' ಈ ಶೃತಿ ಭಾಗದಲ್ಲಿ ಇರುವ ಸತ್ ಆದಿ ಶಬ್ದಗಳಿಂದ (ವಾಚ್ಯ) ವರ್ಣಿತನಾದವನು ವಿಷ್ಣುವೇ ವಿನಃ ಪ್ರಧಾನ ಪ್ರಕೃತಿ ಅಲ್ಲ. ಯಾಕೆಂದರೆ ಈಕ್ಷತಿಕರ್ಮವ್ಯಪದೇಶಾತ್- 'ತದೈಕ್ಷತ ಇತ್ಯಾದಿ ಜೀವನಿಷ್ಠವಾದ ಈಕ್ಷಣ, ಶ್ರವಣ ಮೊದಲಾದ ಶಬ್ದಗಳಿಂದ ಲಕ್ಷಿತನಾದ ದರ್ಶನಾದಿ ಕ್ರಿಯಾಗಳಿಂದ ಕರೆಸಿಕೊಳ್ಳುವುದರಿಂದ ಸತ್ ಶಬ್ದ ಪ್ರತಿಪಾದ್ಯ ವಿಷ್ಣುವೇ.

**೧೪) ಓಂ ಓಂ ದಹರ ಉತ್ತರೇಭ್ಯಃ ಓಂ (ದಹರಾಧಿಕರಣಂ)**

ದಹರೆ- 'ದಹರಂ ಪುಂಡರೀಕಂ ವೇಶ್ಮ' ಈ ವಾಕ್ಯದಿಂದ ವರ್ಣಿತನಾದ ಹೃದಯಕಮಲ ಮಧ್ಯದಲ್ಲಿರುವ (ಆಕಾಶದಲ್ಲಿ) ನಾರಾಯಣನೇ ವಿನಃ ಅನ್ಯಜೀವಾದಿಗಳಲ್ಲ ಯಾಕೆಂದರೆ ಉತ್ತರೇಭ್ಯಃಯ ಆತ್ಮಾಅಪಹತ ಪಾತ್ಮಾ ಇವೇ ಮೊದಲಾದ ಉತ್ತರವಾಕ್ಯದಲ್ಲಿ ವರ್ಣಿತನಾದ ಪಾಪ ಕಳೆಯುವ ಧರ್ಮಯುಕ್ತನಾದವನು ಪರಮಾತ್ಮನೇ ವಿನಃ ಜೀವರಲ್ಲ.

**೧೫) ಓಂ ಓಂ ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ ಓಂ**

ಗತಿಶಬ್ದಾಭ್ಯಾಂ- 'ಅಹರಹರ್ಗಚ್ಛತಿ ಏತಂ ಬ್ರಹ್ಮಲೋಕಂ' ಎಂಬ ವಾಕ್ಯದಲ್ಲಿ ಸುಪ್ತ(ನಾಗಿದ್ದರೂ) ಪ್ರಾಪ್ಯತ್ವ ಬ್ರಹ್ಮ ಈ ಶಬ್ದಗಳಿಂದ ಹೃದಯಕಮಲಸ್ಥನಾದನು ಬ್ರಹ್ಮನೇ ಮತ್ತು 'ಅರಶ್ಚ' ಈ ಶೃತಿಯಲ್ಲಿ ಹಾಗಿರುವನೇ ಪ್ರಾಪ್ಯ ಎಂದು ಹೇಳಿದ್ದರಿಂದ ಹೀಃ- ವಿಷ್ಣುವಿಗೆ ಮಾತ್ರ ಕಾರಣವೆಂಬ ಹೇತುವಿನಿಂದ ಅರಣ್ಯಾಖ್ಯ ಅಮೃತ ಸಮುದ್ರವನ್ನಾಶ್ರಯಿಸಿದವನೆಂದು ಜ್ಞಾಪಕವಾಗಿರುವುದರಿಂದಲೂ ಹಾಗೂ ಹೃದಯಕಮಲದಲ್ಲಿ (ದೃಷ್ಟ) ಕಾಣಿಸಿಕೊಂಡವನೆಂದೂ ಹೇಳುವುದರಿಂದ ದಹರಕಮಲಸ್ಥನು ವಿಷ್ಣುವೇ ಆಗಿರುವನು.

## ೧೬) ಓಂ ಓಂ ಧೃತೇಶ್ಚಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ ಓಂ

ಧೃತೇಃ- 'ಸ ಏಷ ಸೇತುರ್ವಿಧೃತಿಃ' ಈ ರೀತಿ ಹೃದಯ ಕಮಲದೊಳಗಿರುವ ಸರ್ವಾಧಾರಕನಾದವನು ವಿಷ್ಣುವೇ ಅನ್ಯರಿಲ್ಲ. (ಯಾಕೆಂದರೆ) ಮತ್ತು ಛಾಂದೋಗ್ಯೋಪನಿಷತ್ತಿನಲ್ಲಿ 'ಹೃತ್ಪದ್ಮಸ್ಥನಿಷ್ಠ' ಎಂದು ಹೇಳಿದ್ದರಿಂದ 'ಏಷಃ ಸರ್ವೇಶ್ವರಃ' ಇತ್ಯಾದಿ ವಾಜಸನೇಯ ವಾಕ್ಯದಲ್ಲಿಯೂ ಮಹಿಮ್ನಃ- ಅನೇಕ ಮಹಿಮಾ (ಉಪಲಬ್ಧೇಃ) (ಸಿಗುವ) ಕಾಣುವುದರಿಂದ ಇಂತಹ ಮಹಿಮೆ ವಿಷ್ಣುವಿನಲ್ಲಿಯೇ ದೊರೆಯುತ್ತದೆ, ಬೇರೆಯವರಲ್ಲಿ ಕಾಣುವುದಿಲ್ಲ. ಇಲ್ಲಿ ಮಾತ್ರ ವಾಜಸನೇಯ ವಾಕ್ಯಗಳಿಂದ ಉಪಲಬ್ಧೇ - ಸಿಗುವುದರಿಂದ ವಿಷ್ಣುವಿನಲ್ಲಿಯೇ ಹೃತ್ಪದ್ಮಸ್ಥತ್ವರೂಪಮಹಿಮೆ ಇದೇ ಎಂದು ಕೇಳುವುದರಿಂದ ಅಂತಹ ಮಹಿಮೋಪೇತನು ಹರಿಯೇ.

## ೧೭) ಓಂ ಓಂ ಪ್ರಸಿದ್ಧೇಶ್ಚ ಓಂ

'ದಹರಂ ವಿಪಾಪ್ಮಂ' ಈ ಶೃತಿಯಲ್ಲಿ ನಾರಾಯಣನೇ ಹೃತ್ಪದ್ಮಸ್ಥನೆಂದು ಪ್ರಸಿದ್ಧೇಶ್ಚ - ಅತ್ಯಂತ ಪ್ರಸಿದ್ಧನಾಗಿರುವದರಿಂದ (ಅವನೇ ಹೃತ್ಪದ್ಮಸ್ಥನೆಂದು).

## ೧೮) ಓಂ ಓಂ ಇತರಪರಾಮರ್ಶಾತ್ ಸ ಇತಿಚೇನ್ನಾಸಂಭವಾತ್ ಓಂ

ಇತರಪರಾಮರ್ಶಾತ್ 'ಸ್ವೇನರೂಪೇಣಾಭಿನಿಷ್ಪದ್ಯತೇ' ಈ ಶೃತಿಯಲಿಲ್ಲ ಜೀವನಿಗೆ ಹೃತ್ಪದ್ಮಸ್ಥತ್ವ ರೂಪ ಆತ್ಮನೆಂದು ಏಷ ಆತ್ಮಾ ಇಲ್ಲಿಯ ಏತತ್ ಶಬ್ದದಿಂದ ಸ್ವೀಕಾರ ಮಾಡಿರುವುದರಿಂದ ಜೀವನೇ ಹೃದಯಕಲಮಲವಾಸಿ ಎಂದರೆ ಅದು ಸರ್ವಥಾ ಕೂಡುವುದಿಲ್ಲ (ಅಸಂಭವಾತ್- ಹೃದಯಗುಹಾಕಮಲದಲ್ಲಿದ್ದು ಪಾಪಗಳನ್ನು ಕಳೆಯುವ ಮೊದಲಾದ ಗುಣಗಳು ಜೀವನಲ್ಲಿಲ್ಲದಿರುವುದರಿಂದ (ಸ್ವತಂತ್ರವಾಗಿ) ಹೃತ್ಪದ್ಮಸ್ಥನು ಜೀವನಲ್ಲ ಆದರೆ ಪರಮಾತ್ಮನೇ ಎಂದು ತಿಳಿಯಬೇಕು.

## ೧೩) ಓಂ ಓಂ ಈಕ್ಷತಿಕರ್ಮವ್ಯಪದೇಶಾತ್ ಸಃ ಓಂ (ಸದಧಿಕರಣಂ)

'ಸ ದೇವಸೌಮ್ಯೇದಮಗ್ರ ಆಸೀತ್' ಈ ಶೃತಿ ಭಾಗದಲ್ಲಿ ಇರುವ ಸತ್ ಆದಿ ಶಬ್ದಗಳಿಂದ (ವಾಚ್ಯ) ವರ್ಣಿತನಾದವನು ವಿಷ್ಣುವೇ ವಿನಃ ಪ್ರಧಾನ ಪ್ರಕೃತಿ ಅಲ್ಲ. ಯಾಕೆಂದರೆ ಈಕ್ಷತಿಕರ್ಮವ್ಯಪದೇಶಾತ್- 'ತದೈಕ್ಷತ ಇತ್ಯಾದಿ ಜೀವನಿಷ್ಠವಾದ ಈಕ್ಷಣ, ಶ್ರವಣ ಮೊದಲಾದ ಶಬ್ದಗಳಿಂದ ಲಕ್ಷಿತನಾದ ದರ್ಶನಾದಿ ಕ್ರಿಯಾಗಳಿಂದ ಕರೆಸಿಕೊಳ್ಳುವುದರಿಂದ ಸತ್ ಶಬ್ದ ಪ್ರತಿಪಾದ್ಯ ವಿಷ್ಣುವೇ.

## ೧೪) ಓಂ ಓಂ ದಹರ ಉತ್ತರೇಭ್ಯಃ ಓಂ (ದಹರಾಧಿಕರಣಂ)

ದಹರೆ- 'ದಹರಂ ಪುಂಡರೀಕಂ ವೇಶ್ಮ' ಈ ವಾಕ್ಯದಿಂದ ವರ್ಣಿತನಾದ ಹೃದಯಕಮಲ ಮಧ್ಯದಲ್ಲಿರುವ (ಆಕಾಶದಲ್ಲಿ) ನಾರಾಯಣನೇ ವಿನಃ ಅನ್ಯಜೀವಾದಿಗಳಲ್ಲ ಯಾಕೆಂದರೆ ಉತ್ತರೇಭ್ಯಃಯ ಆತ್ಮಾಅಪಹತ ಪಾತ್ಮಾ ಇವೇ ಮೊದಲಾದ ಉತ್ತರವಾಕ್ಯದಲ್ಲಿ ವರ್ಣಿತನಾದ ಪಾಪ ಕಳೆಯುವ ಧರ್ಮಯುಕ್ತನಾದವನು ಪರಮಾತ್ಮನೇ ವಿನಃ ಜೀವರಲ್ಲ.

## ೧೫) ಓಂ ಓಂ ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ ಓಂ

ಗತಿಶಬ್ದಾಭ್ಯಾಂ- 'ಅಹರಹರ್ಗಚ್ಛತಿ ಏತಂ ಬ್ರಹ್ಮಲೋಕಂ' ಎಂಬ ವಾಕ್ಯದಲ್ಲಿ ಸುಪ್ತ(ನಾಗಿದ್ದರೂ) ಪ್ರಾಪ್ಯತ್ವ ಬ್ರಹ್ಮ ಈ ಶಬ್ದಗಳಿಂದ ಹೃದಯಕಮಲಸ್ಥನಾದನು ಬ್ರಹ್ಮನೇ ಮತ್ತು 'ಅರಶ್ಚ' ಈ ಶೃತಿಯಲ್ಲಿ ಹಾಗಿರುವನೇ ಪ್ರಾಪ್ಯ ಎಂದು ಹೇಳಿದ್ದರಿಂದ ಹೀಃ- ವಿಷ್ಣುವಿಗೆ ಮಾತ್ರ ಕಾರಣವೆಂಬ ಹೇತುವಿನಿಂದ ಅರಣ್ಯಾಖ್ಯ ಅಮೃತ ಸಮುದ್ರವನ್ನಾಶ್ರಯಿಸಿದವನೆಂದು ಜ್ಞಾಪಕವಾಗಿರುವುದರಿಂದಲೂ ಹಾಗೂ ಹೃದಯಕಮಲದಲ್ಲಿ (ದೃಷ್ಟ) ಕಾಣಿಸಿಕೊಂಡವನೆಂದೂ ಹೇಳುವುದರಿಂದ ದಹರಕಮಲಸ್ಥನು ವಿಷ್ಣುವೇ ಆಗಿರುವನು.

**೧೬) ಓಂ ಓಂ ಧೃತೇಶ್ಚಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ ಓಂ**

ಧೃತೇಃ- 'ಸ ಏಷ ಸೇತುರ್ವಿಧೃತಿಃ' ಈ ರೀತಿ ಹೃದಯ ಕಮಲದೊಳಗಿರುವ ಸರ್ವಾಧಾರಕನಾದವನು ವಿಷ್ಣುವೇ ಅನ್ಯರಿಲ್ಲ. (ಯಾಕೆಂದರೆ) ಮತ್ತು ಛಾಂದೋಗ್ಯೋಪನಿಷತ್ತಿನಲ್ಲಿ 'ಹೃತ್ಪದ್ಮಸ್ಥನಿಷ್ಠ' ಎಂದು ಹೇಳಿದ್ದರಿಂದ 'ಏಷಃ ಸರ್ವೇಶ್ವರಃ' ಇತ್ಯಾದಿ ವಾಜಸನೇಯ ವಾಕ್ಯದಲ್ಲಿಯೂ ಮಹಿಮ್ನಃ- ಅನೇಕ ಮಹಿಮಾ (ಉಪಲಬ್ಧೇಃ) (ಸಿಗುವ) ಕಾಣುವುದರಿಂದ ಇಂತಹ ಮಹಿಮೆ ವಿಷ್ಣುವಿನಲ್ಲಿಯೇ ದೊರೆಯುತ್ತದೆ, ಬೇರೆಯವರಲ್ಲಿ ಕಾಣುವುದಿಲ್ಲ. ಇಲ್ಲಿ ಮಾತ್ರ ವಾಜಸನೇಯ ವಾಕ್ಯಗಳಿಂದ ಉಪಲಬ್ಧೇ - ಸಿಗುವುದರಿಂದ ವಿಷ್ಣುವಿನಲ್ಲಿಯೇ ಹೃತ್ಪದ್ಮಸ್ಥತ್ವರೂಪಮಹಿಮೆ ಇದೇ ಎಂದು ಕೇಳುವುದರಿಂದ ಅಂತಹ ಮಹಿಮೋಪೇತನು ಹರಿಯೇ.

**೧೭) ಓಂ ಓಂ ಪ್ರಸಿದ್ಧೇಶ್ಚ ಓಂ**

'ದಹರಂ ವಿಪಾಪ್ಮಂ' ಈ ಶ್ರುತಿಯಲ್ಲಿ ನಾರಾಯಣನೇ ಹೃತ್ಪದ್ಮಸ್ಥನೆಂದು ಪ್ರಸಿದ್ಧೇಶ್ಚ - ಅತ್ಯಂತ ಪ್ರಸಿದ್ಧನಾಗಿರುವದರಿಂದ (ಅವನೇ ಹೃತ್ಪದ್ಮಸ್ಥನೆಂದು).

**೧೮) ಓಂ ಓಂ ಇತರಪರಾಮರ್ಶಾತ್ ಸ ಇತಿಚೇನ್ನಾಸಂಭವಾತ್ ಓಂ**

ಇತರಪರಾಮರ್ಶಾತ್ 'ಸ್ವೇನರೂಪೇಣಾಭಿನಿಷ್ಪದ್ಯತೇ' ಈ ಶ್ರುತಿಯಲಿಲ್ಲ ಜೀವನಿಗೆ ಹೃತ್ಪದ್ಮಸ್ಥತ್ವ ರೂಪ ಆತ್ಮನೆಂದು ಏಷ ಆತ್ಮಾ ಇಲ್ಲಿಯ ಏತತ್ ಶಬ್ದದಿಂದ ಸ್ವೀಕಾರ ಮಾಡಿರುವುದರಿಂದ ಜೀವನೇ ಹೃದಯಕಲಮಲವಾಸಿ ಎಂದರೆ ಅದು ಸರ್ವಥಾ ಕೂಡುವುದಿಲ್ಲ (ಅಸಂಭವಾತ್- ಹೃದಯಗುಹಾಕಮಲದಲ್ಲಿದ್ದು ಪಾಪಗಳನ್ನು ಕಳೆಯುವ ಮೊದಲಾದ ಗುಣಗಳು ಜೀವನಲ್ಲಿಲ್ಲದಿರುವುದರಿಂದ (ಸ್ವತಂತ್ರವಾಗಿ) ಹೃತ್ಪದ್ಮಸ್ಥನು ಜೀವನಲ್ಲ ಆದರೆ ಪರಮಾತ್ಮನೇ ಎಂದು ತಿಳಿಯಬೇಕು.

## ೧೯) ಓಂ ಓಂ ಉತ್ತರಾಚ್ಚೇದಾವಿರ್ಭೂತ ಸ್ವರೂಪಸ್ತು ಓಂ

ಉತ್ತರಾತ್ - 'ಸತತ್ರಪರ್ಯೇತಿ' ಎಂಬ ಉತ್ತರವಾಕ್ಯದಿಂದ ಜೀವನಿಗೂ ಸತ್ಯಕಾಮತ್ವಾದಿ ರೀತಿ ಪ್ರಸಿದ್ಧ ಇದೆ ಅದಕ್ಕೆ ಅವನಿಗೂ ವಿಶೋಕ ಮೃತ್ಯುರಾಹಿತ್ಯ ಆದಿ ಕೂಡುತ್ತದೆ. ಅದಕ್ಕೆ ಅವನೇ (ಜೀವನೇ) ಹೃತ್ಪದ್ಮಸ್ಥನೆಂದರೇ ಅಲ್ಲ ಯಾಕೆಂದರೆ ಆವಿರ್ಭೂತಸ್ವರೂಪಃ- 'ಸ್ವೇನ' ಎಂಬ ಉತ್ತರ ವಾಕ್ಯದ ಬಲದಿಂದ ಮುಕ್ತನಿಗೆ ಮಾತ್ರ ಅಲ್ಲ ವರ್ಣಿತನಾಗುತ್ತಿದ್ದು ಸಾಮಾನ್ಯ ಜೀವನಲ್ಲ. ಮುಕ್ತನಿಗೆ ಸ್ವತಃ ಪಾಪ ಪರಿಹಾರ ಮಾಡಿಕೊಳ್ಳುವ ಸಾಮರ್ಥ್ಯವಿಲ್ಲದಿರುವುದರಿಂದ ಅವನಿಗೆ ಹೃತ್ಪದ್ಮಸ್ಥತ್ವವಿಲ್ಲದಿರುವುದರಿಂದ ಸರ್ವಥಾ ಜೀವನಲ್ಲ ಪರಮಾತ್ಮನೇ

## ೨೦) ಓಂ ಓಂ ಅನ್ಯಾರ್ಥಶ್ಚ ಪರಾಮರ್ಶಃ ಓಂ

'ಏಷ ಆತ್ಮಾ' ಈ ವಾಕ್ಯದಲ್ಲಿಯ ಏತತ್ ಶಬ್ದವು ಅನ್ಯಾರ್ಥಕವಾಗಿದ್ದು 'ಪರಂಜ್ಯೋತಿಃ' ಇಲ್ಲಿ ಹೇಳಿದ ಪರಮಾರ್ಥಪರವೇ ವಿನಃ ಸರ್ವಥಾ ಜೀವ ಪರವಾಗಿರುವುದಿಲ್ಲ.

## ೨೧) ಓಂ ಓಂ ಅಲ್ಪಶೃತೇರಿತಿಚೇತ್ತದುಕ್ತಂ ಓಂ

'ದಹರ ಅಲ್ಪಶೃತೇ' - ಕೇವಲ ಕೆಲವು ಸ್ಥಾನದಲ್ಲಿರುವನೆಂಬುವುದರಿಂದ ಹೃತ್ಪದ್ಮಸ್ಥನು ಜೀವನೇ ಎಂದರೆ 'ಇತಿಚೇತ್' ನಿಚಾಯ್ಯತ್ವಾತ್ ಇಲ್ಲಿ ವ್ಯಾಪ್ತತ್ವವನ್ನು ಹೇಳಿದ್ದು ಇದರಿಂದ ವ್ಯಾಪ್ತನಾದ ವಿಷ್ಣುವಿನ ಉಪಾಸನೆ ಮಾಡುವುದಕ್ಕೇ ಹೇಳಿ ರುವುದರಿಂದ ಅದಕ್ಕೆ 'ಆತ್ಮಾಂತಹೃದಯೇ' ಎಂಬ ಶೃತಿಯಲ್ಲಿ ಹೇಳಿರುವುದ ರಿಂದಲೂ ಯಾವುದಕ್ಕೆ ಎಂದು ಅರ್ಥೈಸುವುದು.

## ೨೨) ಓಂ ಓಂ ಅನುಕೃತೇಸ್ತಸ್ಯಂ ಚ ಓಂ ( ಅನುಕೃತ್ಯಧಿಕರಣಂ)

ಸತ್ಯವೇದೋಕ್ತವಾದ ಆ ಹೃದಯಕಮಲಮಧ್ಯಸ್ಥನಾದವನನ್ನು ಅನುಕೃತೇ

- ಆ ಸಂಕರಣತೆಯನ್ನು ಮಾಡುವ 'ಕಥಂ ತು ತದ್ವಿಜಾನೀಯಾಂ ಅವನನ್ನು ಹೇಗೆ ತಿಳಿಯುವುದು ಎಂದು ಜ್ಞಾನವಾಗಲು ಪ್ರಾರ್ಥನೆ ಮಾಡಿಸಿಕೊಳ್ಳುವನು ಪರಬ್ರಹ್ಮನೇ ಆಗಿರುವನು ಯಾಕೆಂದರೆ 'ತಮೇವಭಾಂತಮನುಭಾತಿ ಸರ್ವಂ' ಅವನ ಪ್ರಕಾಶವೇ ಎಲ್ಲರಿಗೂ ಪ್ರಕಾಶವು ಅಂದರೆ 'ಯದಾದಿತ್ಯಗತಂ ತೋಜೋ ಇತ್ಯಾದಿ 'ತಸ್ಯಭಾಸಾಸರ್ವಮಿದಂ ವಿಭಾತಿ' ಈ ಎಲ್ಲ ವಾಕ್ಯಗಳಿಂದ ಜಗತ್ತಿಗೆ ಭಗವಂತನ ಪ್ರಕಾಶದಿಂದಲೇ ಪ್ರಕಾಶ್ಯತ್ವವಿರುವುದಾಗಿ ಶೃತಿಯ ಅಭಿಪ್ರಾಯ, ಅನುಸರಣತ್ವವು ಪರಮಾತ್ಮನಿಂದ.

## ೨೩) ಓಂ ಓಂ ಅಪಿಸ್ಮರ್ಯತೇ ಓಂ

ಇದು ಜಗತ್ಪ್ರಕಾಶಕತ್ವವು ಕೇವಲ ಶೃತಿ ಪ್ರತಿಪಾದ್ಯವಷ್ಟೇ ಅಲ್ಲದೇ ಸ್ಮೃತಿಯಲ್ಲೂ ವರ್ಣಿತವಾಗಿದೆ. ಶ್ರೀಕೃಷ್ಣನು ಅರ್ಜುನನಿಗೆ ಉಪದೇಶ ಮಾಡುವಾಗ್ಗೆ 'ಯದಾದಿತ್ಯಗತಂ' ಇತ್ಯಾದಿ ವರ್ಣಿಸಿದ್ದಾನೆ.

## ೧೪) ಓಂ ಓಂ ಶಬ್ದಾದೇವ ಪ್ರಮಿತಃ ಓಂ (ವಾಮನಾಧಿಕರಣಂ)

'ಈಶಾನೋ ಭೂತಭವ್ಯಸ್ಯ' ಎಂದು ಈಶಾನ ಎಂಬ ಶಬ್ದದಿಂದ (ವಾಚ್ಯ) ಹೇಳಿಸಿಕೊಂಡವನೆಂದು ಹೇಳುವುದು ಸತ್ಯಪ್ರಮಾಣದಿಂದ ನಿಶ್ಚಿತವೇ. ಆದರೆ ಈಶಾನವೆಂದರೆ ವಾಯುವಲ್ಲ ಏಕೆಂದರೆ ಶಬ್ದಾದೇವ ಪ್ರಮಿತಃ- ವಾಮನ ಶಬ್ದದಿಂದಲೇ ಯಾವ ಸಂಶಯವಿಲ್ಲದ ವಾಮನ ಶೃತಿಯಿಂದಲೇ ವಾಮನ ಶಬ್ದ ವಾಚ್ಯನಾದ ವಿಷ್ಣುವೆಂದು ಪ್ರಮಾಣಿಸಿದ್ಧ.

## ೧೫) ಓಂ ಓಂ ಹೃದ್ಯಪೇಕ್ಷಯಾತುಮನುಷ್ಯಾಧಿಕಾರತ್ವಾತ್ ಓಂ

ತು - ಆದರೆ ಮತ್ತು ವಾಮನ ಶಬ್ದದಿಂದ ಪ್ರಮಿತನಾದ ವಿಷ್ಣುಬ್ದ ಸರ್ವಗ ತತ್ವರೂಪಧರ್ಮದಿಂದ ವರ್ಣಿತನಾಗಿದ್ದಾನೆ. ಆದರೆ ಅಂಗುಷ್ಠ ಮಾತ್ರ (ಪುರುಷ)ನೆಂದು ಹೇಳಿದ್ದು ಹೃದ್ಯಪೇಕ್ಷಯಾ- ಹೃದಯಾಕಾಶದಕಿಂತಲೂ

(ಆ ಪರಿಚ್ಛಿನ್ನ) ವ್ಯಾಪ್ತನಾದ ವಿಷ್ಣುವಿಗೆ ಅವ್ಯಾಪ್ತತ್ವರೂಪದೋಷ ಬರುವುದಿಲ್ಲ ಆದರೆ ಹೃದ್ಯಪೇಕ್ಷಯಾ ಅನುಷ್ಯಾಧಿಕಾರಿತ್ವಾತ್ ಅಂಗುಷ್ಠ ಇದು ಪಶುಗಳಲ್ಲಿರದಿರುವುದರಿಂದ ಅಲ್ಲಿ ಹೇಗೆ ಸಮನ್ವಯವಾಗುವುದೆಂದರೆ ಅಂಗುಷ್ಠ ಮಾತ್ರ ಎಂದು ಸರ್ವಾಧಿಕಾರಕವೇ ವಿನಃ ವಿಭಾಗವಿಲ್ಲ ಮತ್ತು ವಿದ್ಯೋಪಾಸನೆಗೆ ಮನುಷ್ಯರೇ ಅಧಿಕಾರಿಗಳೆಂದು ಹೇಳುವಾಗ ಇದನ್ನು ಹೇಳಿರುವುದರಿಂದ ಪಶ್ವಾದಿಗಳಲ್ಲಿ ಅಂಗುಷ್ಠ ಪ್ರಮಾಣಾಭಾವತ್ವ ವರ್ಣಿಸಿದರೂ ದೋಷವಾಗಲಾರದು.

## ೧೬) ಓಂ ಓಂ ತದುಪರ್ಯಪಿ ಬಾದರಾಯಣ ಸಂಭವಾತ್ ಓಂ (ದೇವತಾಧಿಕರಣಂ)

ತದುಪರ್ಯಪಿ- ದೇವ ಪದವಿಗೆ ಯೋಗ್ಯರಾದ ಮನುಷ್ಯರಿಗೆ ವೇದ ವಿದ್ಯಾಧಿಕಾರವೆಂದರೆ ಅವರು ದೇವತೆಗಳಾದ ಮೇಲೂ ಅಧಿಕಾರ ವಿದ್ಯೆ ಇರುತ್ತದೆ. ಯಾಕೆಂದರೆ ಸಂಭವಾತ್- ಅವರಿಗೂ ಕೂಡ ಅಧಿಕಾರ ಕಾರಣೀಭೂತ ವಿಶಿಷ್ಠವಾದ ಬುಧ್ಯಾದಿಗಳು ತೋರುವುದರಿಂದ ಅವರೂ ಅಧಿಕಾರಿಗಳೆಂದು (ಮುಖ್ಯ) ಶ್ರೀವೇದವ್ಯಾಸ ದೇವರು ಹೇಳುತ್ತಾರೆ.

## ೨೭) ಓಂ ಓಂ ವಿರೋಧಃ ಕರ್ಮಣೀತಿಚೇನ್ನಾನೇಕ ಪ್ರತಿಪತ್ತೇರ್ದರ್ಶನಾತ್ ಓಂ

ದೇವತೆಗಳು ಸಾದಿಗಳಾದ್ದರಿಂದ ಕರ್ಮಣಿ ಹಿಂದಿನ (ಕಲ್ಪ) ಜನ್ಮದಲ್ಲಿ ಪ್ರವೃತ್ತವಾದ ಯಜ್ಞಾದಿ ಕರ್ಮಗಳಲ್ಲಿ ವಿರೋಧಃ- ಉದ್ದೇಶ್ಯವಿಲ್ಲದಿದ್ದರೂ ಮಾಡಿದ್ದರಿಂದ ವ್ಯರ್ಥತಾರೂಪ ವಿರೋಧ ಬರುತ್ತದೆ ಎಂದರೆ ಬರುವುದಿಲ್ಲ. ಅನೇಕರಾದ ಯೋಗ್ಯ ಮನುಷ್ಯರಿಗೆ ಜನ್ಮಾಂತರದಲ್ಲಿ ಮಾಡಿದ ಯಜ್ಞಾದಿಗಳಿಂದ ದೇವತಾ ಪದವಿ ಸಿಕ್ಕಿರುವುದು ಕಂಡು ಬಂದಿದೆಯಾದ್ದರಿಂದ ಮತ್ತು 'ಯತ್ರ ಪೂರ್ವೇ ಸಾಧ್ಯಾಸಂತಿ ದೇವಾಃ' ಎಂಬ ಶೃತಿಯಲ್ಲಿ ಹೇಳಿರುವುದರಿಂದ ವೈಯರ್ಥತೆ ಬರುವುದಿಲ್ಲ.

## ೨೮) ಓಂ ಓಂ ಶಬ್ದ ಇತಿಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಂ ಓಂ

ದೇವತೆಗಳಿಗೆ ಆದಿ ಅಂತ ಇದೆ ಎಂದು ಹೇಳುವುದರಿಂದ ಅನಾದಿತ್ವ ವರ್ಣಿಸುವ ವೇದವಾಕ್ಯದಲ್ಲಿ ಪರಸ್ಪರ ವಿರೋಧ ಬಂದು ವೇದ ಅಪ್ರಮಾಣ ವಾಗುವುದೆಂಬ ವಿರೋಧ ಕಂಡು ಬರುವದೆಂದರೆ? ಹಾಗೆ ಬರಲಾರದು ಯಾಕೆಂದರೆ 'ಧಾತಾ ಯಥಾ' ಈ ರೀತಿ ಐಕ್ಯವಿದ್ದದ್ದರಿಂದ ಮತ್ತು ಪ್ರತ್ಯಕ್ಷಾನು ಮಾನಾಭ್ಯಾಂ, ಯೋಗಿಗಳ ಪ್ರತ್ಯಕ್ಷದಿಂದ ಮತ್ತು ದೇವಾಃ ಪ್ರವಾಹತಃ ಉತ್ಪತ್ತಿ ಮಂತಃ ಇತ್ಯಾದಿ ಅನುಮಾನ ಹೇತುಗಳಿಂದ ಪ್ರತಿಕಲ್ಪಗಳಲ್ಲಿ ಉತ್ಪನ್ನರಾಗುತ್ತಿರು ವುದರಿಂದ ಉತ್ಪತ್ತಿಮತ್ ರೂಪಕವಾದ ಶಬ್ದದಿಂದ ಹೇಳುವುದು ಯುಕ್ತವಾಗಿಯೇ ಇದೆ ದೋಷ ಬರುವುದಿಲ್ಲ. ವಿರೋಧವೂ ವೇದವಾಕ್ಯಕ್ಕೆ ಇಲ್ಲ.

## ೨೯) ಓಂ ಓಂ ಅತ ಏವ ಚ ನಿತ್ಯತ್ವಂ ಓಂ

ಅತ ಏವ ಚ-ಪೂರ್ವಪಕ್ಷಿಯಿಂದ ಹೇಳಲ್ಪಟ್ಟ ಅನಿತ್ಯತ್ವವೇ ಅನ್ಯಥಾನುಪ ಪತ್ತಿಯಿಂದ ಅದರಿಂದ ವೇದಕ್ಕೆ ಪ್ರವಾಹತಃ ನಿತ್ಯತ್ವವು ಅಂದರೆ ವೇದಕ ಪ್ರವಾಹ ನಿತ್ಯತ್ವವು ಸಿದ್ಧವಾಗುತ್ತದೆ.

## ೩೦) ಓಂ ಓಂ ಸಮಾನ ನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ ಸ್ಮೃತೇಶ್ಚ ಓಂ

ಅಮೃತಾವಪಿ - ಮೊದಲಿನ ಕಲ್ಪದಲ್ಲಿ ಮುಕ್ತರಾದ ದೇವತೆಗಳಿಗೆ ಮತ್ತೂ ಅದೇ ಸ್ಥಾನದಲ್ಲಿ ಇಲ್ಲದಿದ್ದರೂ ಕೂಡ ಅವಿರೋಧಾತ್ - ಆ ದೇವತೆಗಳ ವರ್ಣಿಸುವ ವೇದ ವಾಕ್ಯಕ್ಕೆ ಆ ಪ್ರಮಾಣವೆಂಬ ವಿರೋಧವಿಲ್ಲದ್ದರಿಂದ (ಇಲ್ಲಿ) ಯಾಕೆಂದರೆ ಸಮಾನ ನಾಮರೂಪತ್ವಾತ್ - ಈ ಕಲ್ಪದಲ್ಲಿರುವ ದೇವತೆಗಳ ಹೆಸರು ಹಿಂದಿನ ಕಲ್ಪಗಳಲ್ಲಿಯ ದೇವತಾ ಸಮಾನವಾದ ನಾಮರೂಪಗಳಿದ್ದದ್ದರಿಂದಲೂ

ವರ್ಣಿತ ವಸ್ತು (ವ್ಯಕ್ತಿ) ಏಕ ವಿಧವಾದ್ದರಿಂದಲೂ ಅದನ್ನು ವರ್ಣಿಸುವ ವೇದಕ್ಕೆ ಅಪ್ರಾಮಾಣ್ಯ ಕಲ್ಪನೆ ಸರಿಯಲ್ಲ. ಒಂದೇ ಸಮಾನ ವಿಧಾನ ಹೇಗೆಂದರೆ ಸ್ಮೃತಿ ಶೃತಿ ಪ್ರತಿಪಾದ್ಯವಾಗಿರುವುದರಿಂದ ಶೃತಿ- 'ಧಾತಾ ಯಥಾ ಪೂರ್ವಮಕಲ್ಪಯತ್', ಸ್ಮೃತಿ- 'ಅನಾದಿನಿಧನಾನಿತ್ಯಾ' ಇತ್ಯಾದಿಗಳಿಂದ.

**೩೧) ಓಂ ಓಂ ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ ಓಂ**

ಮಧ್ವಾದಿಷು ಮಧುವಿದ್ಯೆ (ಮೋಕ್ಷ) ಯಲ್ಲಿ 'ಅಸೇವಾ ಆದಿತ್ಯೋ ದೇವಮಧು' ಇತ್ಯಾದಿಗಳಲ್ಲಿ ಅನಧಿಕಾರಂ ಅಧಿಕಾರವಿಲ್ಲವೆಂದು ಜೈಮಿನ್ಯಾಚಾರ್ಯರ ಅಭಿಪ್ರಾಯವು. ಯಾಕೆಂದರೆ, ಅಸಂಭವಾತ್- ಆ ದೇವತೆಗಳಿಗೆ ಅರ್ಥದ (ವಸ್ತು ಬೇಕೆಂಬುದು) ಅಪೇಕ್ಷೆ ಇಲ್ಲದ ಪ್ರಯುಕ್ತ ಅನಧಿಕಾರವೆಂದು ಹೇಳಿದ್ದಾರೆ.

**೩೨) ಓಂ ಓಂ ಜ್ಯೋತಿಷಿಭಾವಾಚ್ಚ ಓಂ**

ಜ್ಯೋತಿಷಿ - ದೇವತೆಗಳಲ್ಲಿ ಸರ್ವಜ್ಞತ್ವವಿರುವುದರಿಂದ ಎಲ್ಲ ವಸ್ತುಗಳ ಜ್ಞಾನ ಅವರಿಗೆ ಇದ್ದು ಸಿದ್ಧ ಜ್ಞಾನಿಗಳಾದ್ದರಿಂದ ಪುನಃ ಅವರಿಗೆ ಜ್ಞಾನವನ್ನು ಪಡೆಯುವ ಅಪೇಕ್ಷೆ ಇದೆ ಎಂಬುದು ಯೋಗ್ಯವಲ್ಲ ಹಾಗೆಯೇ ಮೋಕ್ಷವಿದ್ಯೆಯಲ್ಲಿ ಅಧಿಕಾರವಿಲ್ಲವೆಂಬ ಅಭಿಪ್ರಾಯದಿಂದ ಹೇಳಿದೆಯೇ ವಿನಃ ಅನ್ಯಥಾ ಇಲ್ಲ.

**೩೩) ಓಂ ಓಂ ಭಾವಂತು ಬಾದರಾಯಣೋಸ್ತಿಹೀ ಓಂ**

ಹಿ- ನಿಶ್ಚಿತವಾಗಿಯೂ ದೇವತೆಗಳಿಗೆ ಕೂಡ ಅಧಿಕಾರ ಇದ್ದೇ ಇದೆ. ಅದರಲ್ಲಿಯೂ ಮೋಕ್ಷರೂಪ ಫಲಪ್ರಾಪ್ತಿಗೆ ಜ್ಞಾನಾಧಿಕ್ಯತೆ ಇದೆ ಎಂಬುದಾಗಿ ದೇವಾದಿಗಳಿಗೆ ಅಧಿಕಾರವಿದೆ ಎಂದು ಬಾದರಾಯಣರ ಮತ ಜೈಮಿನಿಯವರು ಮಾತ್ರ ಒಂದು ಸಲ ಜ್ಞಾನವನ್ನು ಪಡೆದ ಮೇಲೆ ಪುನಃ ಅಧಿಕಾರವಿಲ್ಲವೆಂದು.

**೩೪) ಓಂ ಓಂ ಶುಗಸ್ಯತದನಾದರಶ್ರವಣಾತ್ತದಾದ್ರವಣಾತ್ ಸೂಚ್ಯತೇ ಹಿ ಓಂ (ಅಪಶೂದ್ರಾಧಿಕರಣಂ)**

ತದನಾದರಶ್ರವಣಾತ್ - ಇಲ್ಲಿ ಪೌತ್ರಾಯಣನೆಂಬ ರಾಜನ ವಿಷಯದಲ್ಲಿ 'ಕಂಬರ ಏನಂ' ಎಂದು ಅನಾದರದ ವಾಕ್ಯ ಕೇಳುವುದರಿಂದ 'ಶಕ್' ಶೋಕಮುಕ್ತ ಯುಕ್ತನಾಗಿರುವುದರಿಂದ 'ಸಹಸಂಚಿ ಹೀನ ಏವ' ಎಂಬ ಮುಂದಿನ ವಾಕ್ಯದಿಂದ ತಿಳಿಯುತ್ತದೆ. ರಾಜನು ರೈಕ್ವ ಎಂಬ ಋಷಿಯಿಂದ ಶುದ್ರ ಎಂಬುದಾಗಿ ಸಂಬೋಧಿತನಾದನೇ ವಿನಃ ಅವರ ಜಾತಿಯವನೆಂದು ಸರ್ವಥಾ ಹೇಳಲಿಲ್ಲ. ಇದರಿಂದ ಶೂದ್ರಜಾತಿಯವನಿಗೆ ಸರ್ವಥಾ ವೇದ ವಿದ್ಯಾಧಿಕಾರವನ್ನು ನಿಷೇಧಿಸಲ್ಪಟ್ಟಿದೆ ಎಂದು ತಿಳಿಯಬೇಕು.

**೩೫) ಓಂ ಓಂ ಕ್ಷತ್ರಿಯತ್ವಾವಗತೆಶ್ಚೋತ್ತರತ್ರಚೈತ್ರರಥೇನಲಿಂಗಾತ್ ಓಂ**

ಹಿ- ಯಾವ ಕಾರಣದಿಂದ ಉತ್ತರತ್ರ - 'ಅಶ್ವತರೀರಥಃ' ಎಂಬ ಉತ್ತರ ವಾಕ್ಯದ ಶೃತಿಯಲ್ಲಿ ಚೈತ್ರರಥೇನ- ಚಿತ್ರ ಶಬ್ದದಿಂದ ಅಶ್ವತರೀಯುಕ್ತ ರಥಸಂಬಂಧಿ ರೂಪ (ಲಿಂಗ) ಕಾರಣದಿಂದ ಇವನಲ್ಲಿ ಕ್ಷತ್ರಿಯತ್ವಾಗತೇಶ್ಚ - ಇವನು ಕ್ಷತ್ರಿಯನೆಂಬ ಜ್ಞಾನದಿಂದ ಪೌತ್ರಾಯಣನೆಂಬುವನು ಶೂದ್ರನಲ್ಲವೆಂಬುವದಾಗಿ ನಿಶ್ಚಿತ ಜ್ಞಾನವಾಗುತ್ತದೆ.

**೩೬) ಓಂ ಓಂ ಸಂಸ್ಕಾರಪರಾಮರ್ಶಾತ್ತದಭಾವಾಭಿಲಾಪಾಚ್ಚ ಓಂ**

ನಿಶ್ಚಿತವಾಗಿಯೂ 'ಸಂಸ್ಕಾರ ಪರಾಮರ್ಶಾತ್- ಅಷ್ಟವರ್ಷಂ ಬ್ರಾಹ್ಮಣ ಮುಪನಯೀತೆ ತಮಧ್ಯಾಪಯೀತ' ಇವೇ ಮೊದಲಾದ ವೇದವಾಕ್ಯದಿಂದ ಉಪನಯನರೂಪ ಸಂಸ್ಕಾರಯೋಗ್ಯವೆಂಬ ವಚನದಿಂದ ಮತ್ತು 'ತದಭಾವಾಭಿಲಾಪಾತ್' ಶೂದ್ರನಿಗೆ 'ನಾಗ್ನಿರ್ನಯಜ್ಞೋ ಶೂದ್ರಸ್ಯ' ಇವೇ ಮೊದಲಾದ ವೇದವಾಕ್ಯದಿಂದ ಸಂಸ್ಕಾರಾದಿಗಳಿಲ್ಲವೆಂದು ಹೇಳಿರುವುದರಿಂದ ವೇದವಿದ್ಯೆಯ

ಅಧ್ಯಯನಾದಿ ಅಧಿಕಾರ ಶೂದ್ರನಿಗೆ ಸರ್ವಥಾ ಇಲ್ಲವೆಂದು ಹೇಳಿದ್ದಾರೆ.

**೩೭) ಓಂ ಓಂ ತದಭಾವ ನಿರ್ಧಾರಣೇ ಚ ಪ್ರವೃತ್ತೇಃ ಓಂ**

ಚ- ನಿಶ್ಚಿತವಾಗಿಯೂ ತದಭಾವನಿರ್ಧಾರಣೇ- ಸತ್ಯಕಾಮನೆಂಬ ಮನುಷ್ಯನಲ್ಲಿ ಶೂದ್ರತ್ವಾಭಾವವನ್ನು ನಿಶ್ಚಯಿಸಿ ಅವನ ಉಪನಯನಕ್ಕೆ ಗೌತಮರು ಪ್ರವೃತ್ತರಾದರೇ ವಿನಃ ಶೂದ್ರನಿಗೆ ಸಂಸ್ಕಾರವಿಲ್ಲವೆಂದು ಜ್ಞಾಪಿಸಿದಂತೆಯೂ ಆಯಿತು.

**೩೮) ಓಂ ಓಂ ಶ್ರವಣಾಧ್ಯಯನಾರ್ಥ ಪ್ರತಿಷೇಧಾತ್ ಸ್ಮೃತೇಶ್ಚ ಓಂ**

ಶ್ರವಣಾಧ್ಯಯನಾತ್ ಪ್ರತಿಷೇಧಾತ್- 'ಶ್ರವಣೇತ್ರ್ಯಪುಜತುಭ್ಯಾಂ ಶ್ರೋತ್ರ ಪರಿಪೂರಣಂ ಅಧ್ಯಯನೇಜಿಹ್ವಾಛೇದಃ' ಇದೇ ಮೊದಲಾದ ವೇದವಾಕ್ಯಗಳಿಂದ ಶೂದ್ರನಿಗೆ ಶ್ರವಣ-ಅಧ್ಯಯನ, ತಿಳಿಯುವುದು ಇವುಗಳ ನಿಷೇಧ ಮಾಡಿದ್ದು. ಸ್ಮೃತಿಯೂ ನಿಷೇಧಿಸಿದೆ, 'ನಾಗ್ನಿರ್ನಯಜ್ಞೋ ಶೂದ್ರಸ್ಯ.... ವಿಧೀಯತೆ' ಇತ್ಯಾದಿಗಳಿಂದ ಸರ್ವಥಾ ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ನಿಷೇಧಿಸಲ್ಪಟ್ಟಿದೆ.

**೩೯) ಓಂ ಓಂ ಕಂಪನಾತ್ ಓಂ (ಕಂಪನಾಧಿಕರಣಂ)**

'ಮಹದ್ಭಯಂ ವಜ್ರಮುದ್ಯತಂ' ಈ ವಾಕ್ಯದಿಂದ ಇಂದ್ರನ ವಜ್ರಾಯುಧವಾಗದಂತೆ ವಿಷ್ಣುವೇ ಎಂದು ಭಗವದ್ವರ್ಣನ ಪರವಾಗಿದೆ. ಯಾಕೆಂದರೆ ಕಂಪನಾತ್ - 'ಏಜತಿ-ಏಜತಿ' ಈ ವಾಕ್ಯಗಳಿಂದ ಸರ್ವಜಗಚ್ಚೇಷ್ಟಕತ್ವರೂಪವಾದ ಲಿಂಗವಿರುವುದರಿಂದ ಉದ್ಯತವಜ್ರ ಎಂದರೆ ವಿಷ್ಣುವೇ ಆಗಿರುವನು.

**೪೦) ಓಂ ಓಂ ಜ್ಯೋತಿರ್ದರ್ಶನಾತ್ ಓಂ (ಜ್ಯೋತಿರಧಿಕರಣಂ)**

'ಯೋಯಮಂತಜ್ಯೋತಿಃ' - ಇಲ್ಲಿ ಜ್ಯೋತಿ ಶಬ್ದದಿಂದ ವರ್ಣಿತನಾದವನು ವಿಷ್ಣುವೇ ವಿನಃ ಜೀವರಲ್ಲ. ಯಾಕೆಂದರೆ, 'ವಿಷ್ಣುರೇವ ಜ್ಯೋತಿಃ ವಿಷ್ಣುರೇವ ಪ್ರಾಣಃ' ಇತ್ಯಾದಿ ಶೃತಿ ಪ್ರತಿಪಾದ್ಯನಾಗಿರುವುದರಿಂದ.

## ೪೧) ಓಂ ಓಂ ಆಕಾಶೋಽರ್ಥಾಂತರತ್ವಾದಿ ವ್ಯಪದೇಶಾತ್ ಓಂ (ಆಕಾಶಾಧಿಕರಣಂ)

'ಅಕಾಶೋಹ ವೈ ನಾಮ' ಎಂಬ ಶೃತಿಯಿಂದ ವರ್ಣಿತನಾದವನು ವಿಷ್ಣುವೇ, ವ್ಯಾಪ್ತವಾದ (ಜಡ) ಅವ್ಯಾಕೃತಾಕಾಶವಲ್ಲ; ಏಕೆಂದರೆ, 'ಅರ್ಥಾಂತರತ್ವಾದಿ ವ್ಯಪದೇಶಾತ್' - ಅರ್ಥಾಂತರತ್ವಾದಿ ರೂಪದಿಂದ ವ್ಯಪದಿಷ್ಟನಾಗಿದ್ದಾನೆ. 'ತೇ ಯದಂತರಾ' ಈ ವಾಕ್ಯಗಳಲ್ಲಿ ವಿಷ್ಣುವಿನಲ್ಲಿ ನಾಮರೂಪಾದಿಗಳ ರಹಿತತ್ವವೇ ಕೂಡುವುದೆಂದು ತೋರಿದರೆ 'ವಿಲಕ್ಷಣಾರ್ಥತ್ವವೇ ಆದಿಶಬ್ದದಿಂದ ಗ್ರಹೀತವಾದ ಬ್ರಹ್ಮತ್ವ ಮತ್ತು ಅಮೃತತ್ವಗಳನ್ನೂ ಹೇಳಲಾಗುತ್ತದೆ' ಎಂಬ ಅರ್ಥ ಸ್ಪಷ್ಟವಾಗುತ್ತದೆ.

## ೪೨) ಓಂ ಓಂ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇ ನ ಓಂ (ಸುಷುಪ್ತ್ಯಧಿಕರಣಂ)

'ಸಯತ್ತತ್ರಕಿಂಚಿತ್ ಪಶ್ಯತಿ' - ಈ ಶೃತಿಯಲ್ಲಿ ಹೇಳಿದಂತೆ ಸ್ವಪ್ನಾದಿಗಳ ದರ್ಶಕನು ನಾರಾಯಣನೇ ವಿನಃ ಜೀವಿಯಲ್ಲ. ಯಾಕೆಂದರೆ, 'ಅಸಂಗೋ ಹ್ಯಮಂ ಪುರುಷಃ' ಹೀಗೆ ಹೇಳಿದ ಅಸಂಗತ್ವ ಚಿಹ್ನೆಯಿಂದ ಎಂಬ ಹೇತುವನ್ನು ಬ್ಯಾಹ್ಯವೆಂದೇ ಇಟ್ಟುಕೊಳ್ಳಬೇಕು. ಹೇಗೆಂದರೆ, ಈಶ್ವರನಿಂದ ಅಭಿನ್ನನಾದ ಜೀವಿಯಲ್ಲಿಯೂ ಅಸಂಗತ್ವವು ಕೂಡಬಹುದೆಂದರೇ ಸುಷುಪ್ತಿ ಇತ್ಯಾದಿಯಿಂದ ಜೀವನಲ್ಲಿ ಗಾಢ ನಿದ್ರಾವಸ್ಥೆಯಲ್ಲಿ ಇರಲಾರದು. ಹಾಗೆ ಇದ್ದರೂ ಕೂಡ 'ಸುಷುಪ್ತ್ಯುತ್ಕ್ರಾಂತ್ಯೋಃ' ಹಾಗೂ 'ಪ್ರಾಜ್ಞೇನಾತ್ಮನಾಸಂಪರಿಷ್ವಕ್ತಃ' ಎಂದು

ಹಾಗೂ 'ಪ್ರಾಜ್ಞೇನಾತ್ಮನಾತನ್ವಾರೂಢಃ' ಹೀಗಿದ್ದರೂ -ಸುಷುಪ್ತಿ, ಗಾಢನಿದ್ರೆ ಮತ್ತು ಉತ್ಕ್ರಾಂತಿ, ಮೋಕ್ಷಮಾರ್ಗಗಮನ ಎಂಬ ಪ್ರಕರಣಗಳಿಗೆ ಪರಸ್ಪರವಾಗಿ 'ಭೇದೇನ, ಜೀವ ಮತ್ತು ಈಶ್ವರರಲ್ಲಿ ಅತ್ಯಂತ ಭಿನ್ನತ್ವೇನ ಹೇಳಿದ್ದರಿಂದ, ಅವರಿಬ್ಬರಲ್ಲಿ ಪರಸ್ಪರ ಬೇರೆಯೆಂಬುದೇ ವಿನಃ ಐಕ್ಯತೆ ಇರುವುದಿಲ್ಲ.

## ೪೩) ಓಂ ಓಂ ಪತ್ಯಾದಿಶಬ್ದೇಭ್ಯಃ ಓಂ (ಬ್ರಹ್ಮಾಧಿಕರಣಂ)

'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಈ ವೇದೋಕ್ತ ನಿತ್ಯ ಮಹಿಮೆಯುಳ್ಳವನು ವಿಷ್ಣುವೇ ವಿನಃ ಬ್ರಾಹ್ಮಣ ಎಂದು ಹೇಳಿಸಿಕೊಳ್ಳುವ ಚತುರ್ಮುಖಾದಿಗಳಲ್ಲಿರದೇ ವಿಷ್ಣುವಿನಲ್ಲಿಯೇ ಇರುವುದರಿಂದ ಬ್ರಹ್ಮ ಶಬ್ದವಾಚ್ಯ ವಿಷ್ಣುವಿನ ವಿಷಯ (ಜಿಜ್ಞಾಸೆ) ವಿಚಾರ ಮಾಡಬೇಕೆಂಬುದೇ ಈ ತೃತೀಯ ಪಾದದ ಭಾವಾರ್ಥವು.

**ಇತಿ ಶ್ರೀಜಗನ್ನಾಥಯತಿಕೃತಾಯಾಂ ಸೂತ್ರದೀಪಿಕಾಯಾಂ ಪ್ರಥಮಾಧ್ಯಾಯಸ್ಯ ತೃತೀಯಃ ಪಾದಃ ಉಮರ್ಜಿ ಪ್ರಹ್ಲಾದಕೃತ ಸೂತ್ರದೀಪಿಕೆಯ ಕನ್ನಡಾನುವಾದದ ಪ್ರಥಮಾಧ್ಯಾಯದ ತೃತೀಯ ಪಾದ ಸಮಾಪ್ತಿ**

## ಅಥ ಪ್ರಥಮಾಧ್ಯಾಯಸ್ಯ ಚತುರ್ಥಃ ಪಾದಃ

### ೧) ಓಂ ಓಂ ಆನುಮಾನಿಕಮಪ್ಯೇಕೇಷಾಮಿತಿಚೇನಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತಿ ಚ ಓಂ (ಅನುಮಾನಿಕಾಧಿಕರಣಂ)

ಅಪಿ ಶಬ್ದವು ನಿಶ್ಚಿತಾರ್ಥದ್ಯೋತಕ ಚ- ಎಂದರೆ ಎಲ್ಲ ಸ್ಮೃತಿಗಳಲ್ಲಿಯೂ ಎಂದು. ಯಾವುದರಿಂದ ಅನುಮಾನಿಕಂ, ಸಾಂಖ್ಯರಿಂದ ಕಲ್ಪಿತವಾದ ಅನುಮಾನದಿಂದ ಪ್ರಧಾನಾದಿಗಳೇ ಪ್ರಕೃತ್ಯಾದಿಗಳೇ ಎಂದೂ ಇನ್ನೂ ಕೆಲವು (ಶಾಖೆ) ವಿಭಾಗಗಳಲ್ಲಿ ತೋರುವ 'ಅವ್ಯಕ್ತಾತಃ ಪುರುಷಃ' ಇವೇ ಮೊದಲಾದ ವಾಕ್ಯಾರ್ಥದಿಂದ ಅವ್ಯಕ್ತಾದಿ ಶಬ್ದಗಳಿಂದ ಎಂದು ಹೇಳಲ್ಪಡುವುದು. ಅದಕ್ಕೆ ಎಲ್ಲ ಶಬ್ದಪ್ರತಿಪಾದಕತ್ವವು ವಿಷ್ಣುವಿಗೆ ಕೂಡುವುದಿಲ್ಲವೆಂದರೆ ಅದು ಸರಿಯಲ್ಲ. ಆದರೆ ವಿಷ್ಣುವೇ ಅವ್ಯಕ್ತಾದಿ ಶಬ್ದವಾಚ್ಯನು ಪ್ರಧಾನಾದಿಗಳಲ್ಲ. ಯಾಕೆಂದರೆ 'ಅವ್ಯಕ್ತಂ' ಎಂಬ ವೇದ 'ಅವ್ಯಕ್ತೋ ಅಕ್ಷರ' ಎಂಬ ಸ್ಮೃತಿಗಳಿಂದಲೂ 'ದರ್ಶಯತಿ ವಿಷ್ಣುವಿನಲ್ಲಿಯೇ ಅವ್ಯಕ್ತಾದಿ ಶಬ್ದವಾಚ್ಯತ್ವವಿದೆ ಎಂದು ಪ್ರತಿಪಾದನೆ (ವರ್ಣನೆ) ಮಾಡುತ್ತಾರೆ. ಅದರಿಂದಲೇ ಮುಖ್ಯ ಅವ್ಯಕ್ತ ಶಬ್ದಪ್ರತಿಪಾದ್ಯನು ವಿಷ್ಣುವೇ. ಹಾಗಾದರೆ ಬೇರೆ ಕಡೆಯಲ್ಲಿಯೂ ಅವ್ಯಕ್ತಾದಿ ವ್ಯವಹಾರ ಕಂಡು ಬರುತ್ತದೆಯಲ್ಲವೆಂದರೆ 'ಶರೀರರೂಪಕ' ಅಂದರೆ 'ಕುತ್ಸಿತಾರ್ಥತ್ವೇನ', 'ಗೌಣತ್ವೇನ' ಎಂದು ತಿಳಿಯುವುದು. ಅದನ್ನೇ 'ಶರೀರರೂಪಕ ವಿನ್ಯಸ್ತಗೃಹೀತೇಃ' – ಹೇಗೆ ಶರೀರ ಅಂದರೆ ಪುರುಷಾಧಿಷ್ಠಿತ (ಪುರುಷತಂತ್ರ) ವೋ ಹಾಗೆಯೇ ಪರಮಾತ್ಮಾಧೀನನಿಮಿತ್ತ ಶರೀರತ್ವ ಕಂಡು ಬರುತ್ತಿದ್ದು ಕುತ್ಸಿತವಾಗಿ (ಗೌಣವಾಗಿ) ಜೀವಿಗಳಲ್ಲಿ ತೋರುವಂತೆ ಪ್ರಧಾನಪದವೂ ಅಶರೀಕತ್ವೇನ ಪ್ರಧಾನಾದಿಗಳಲ್ಲಿ ತೋರಿದರೂ 'ವಿನ್ಯಸ್ತಸ್ಯ' ಇರುವ ಭಗವಂತನಲ್ಲಿಯೇ ಆಯಾ ಶಬ್ದಗಳಿಂದ ಪ್ರತಿಪಾದ್ಯನೆಂಬುದಾಗಿ 'ಗೃಹೀತೇಃ' – ಸ್ವೀಕರಿಸುವುದು. ಒಟ್ಟು ಮುಖ್ಯವಾಗಿ ಭಗವಂತನ ಸಂಬಂಧವನ್ನೇ ಮುಖ್ಯವಾಗಿಟ್ಟುಕೊಂಡು ಪ್ರಕೃ

ತ್ಯಾದಿಗಳಲ್ಲಿ ಅವ್ಯಕ್ತ, ಕೂಟಸ್ಥ, ಅಕ್ಷರ ಇತ್ಯಾದಿ ಶಬ್ದ ವ್ಯವಹಾರ ಮಾಡಬೇಕೆಂಬುದೇ ಸೂತ್ರಾರ್ಥವು.

**೨) ಓಂ ಓಂ ಸೂಕ್ಷ್ಮಂತು ತದರ್ಹತ್ವಾತ್ ಓಂ (ಅನುಮಾನಾಧಿಕರಣಮೇವ)**

ಯಾವುದರಿಂದ 'ಸೂಕ್ಷ್ಮಂ' - ಅತ್ಯಂತ ಸೂಕ್ಷ್ಮವಾದದ್ದೇ ಅವ್ಯಕ್ತ ಶಬ್ದ ಪ್ರತಿಪಾದ್ಯವಾಗಿದೆ. ಯಾಕೆಂದರೆ 'ತದರ್ಹತ್ವಾತ್', ಆ ಸೂಕ್ಷ್ಮವಾದ ಅವ್ಯಕ್ತ ಶಬ್ದ ಪ್ರವೃತ್ತಿನಿಮಿತ್ತವಾದ ಯೋಗ್ಯತ್ವವು. ಅದರಲ್ಲಿಯೇ ಅತಿಸೂಕ್ಷ್ಮವಾದ ವಸ್ತು (ವ್ಯಕ್ತಿ)ಯೆಂದರೆ ವಿಷ್ಣುವೇ ಆಗಿದ್ದಾನೆ. ಅದಕ್ಕೆ ಅವನಲ್ಲಿಯೇ ಅವ್ಯಕ್ತ ಶಬ್ದ ಮುಖ್ಯ ವಾಚ್ಯತ್ವ (ಪ್ರತಿಪಾದ್ಯತ್ವವು)ವು ಇರುವುದು.

**೩) ಓಂ ಓಂ ತದಧೀನತ್ವಾದರ್ಥವತ್ ಓಂ (ಅನುಮಾನಾಧಿಕರಣಂ)**

ಪ್ರಥಮಸೂತ್ರದಲ್ಲಿಯ 'ದರ್ಶಯತಿ ಚ' ಈ ಶಬ್ದಗಳ ಅಧ್ಯಾಹಾರ (ಅನುವರ್ತನ) ಮಾಡಿದರೆ ಪರಮಾತ್ಮನಲ್ಲಿಯೇ ಎಲ್ಲರಿಂದ ಬೇರೆಯವ ಅವರ ದುಃಖಿ, ಬದ್ಧ ಇತ್ಯಾದಿ ವಾಚಿತ್ವವು ಅದರ ಪ್ರವೃತ್ತಿ ನಿಮಿತ್ತ ಶಬ್ದಗಳೂ ಅರ್ಥಪ್ರವೃತ್ತವಾಗುತ್ತಿವೆ. ಆ ಯಾವ ಶಬ್ದಗಳಲ್ಲಿಯೂ ವೈಯರ್ಥತೆ ಇರುವುದಿಲ್ಲ. ಯಾಕೆಂದರೆ 'ಅರ್ಥವತ್', 'ತದಧೀನತ್ವಾತ್'. ಆ ಪ್ರಧಾನಾದಿಗಳಲ್ಲಿರುವ ಪರಾವರತ್ವಾದಿ ಧರ್ಮಗಳು ಭಗವದಧೀನವಾಗಿರುವುದರಿಂದ. ಬೇರೆಯವರಲ್ಲ ಪ್ರಯುಕ್ತವಾಗುವ ಪರಾವರತ್ವಾದಿ ಪ್ರವೃತ್ತಿ ನಿಮಿತ್ತ ಸಾಮಿತ್ವರೂಪದಿಂದ ದೇವರಲ್ಲ ಪರಾವರ, ದುಃಖಿ, ಬದ್ಧ ಇತ್ಯಾದಿ ಶಬ್ದಗಳನ್ನು ಪ್ರಯೋಗ ಮಾಡುವುದು ಯೋಗ್ಯವೇ ಎನಿಸಿಕೊಳ್ಳುತ್ತದೆ.

**೪) ಓಂ ಓಂ ಜ್ಞೇಯತ್ವಾವಚನಾಚ್ಚ ಓಂ (ಅನುಮಾನಿಕಾಧಿಕರಣಂ)**

'ತಮೇವೈಕಂಜಾನಥ' - ಮೋಕ್ಷಾರ್ಥಿಗಳು ಪರಬ್ರಹ್ಮನನ್ನೇ 'ಜ್ಞೇಯತ್ವಾ

ವಚನಾತ್' - ಮುಖ್ಯತ್ವೇನ ತಿಳಿಯಬೇಕು ಎಂಬ ವಾಕ್ಯಗಳಿರುವುದರಿಂದ ಹಾಗೂ ಬೇರೆಯವರ ನಿಮಿತ್ತ ಹೇಳದಿರುವುದರಿಂದ ಅಷ್ಟೇ ಅಲ್ಲದೇ ಬೇರೆ ದೇವತೆಗಳ ನಿಮಿತ್ತ ಅನ್ಯಾವಾಚೋ ವಿಮುಂಚಥ ಎಂದು ಹೇಯತ್ವೇನ ಪ್ರತಿಪಾದಿತರಾಗಿ ರುವ, ಬೇರೆ ಕಡೆಯಲ್ಲಿ ವರ್ಣಿತವಾದ ಅವ್ಯಕ್ತಾದಿ ಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನೆಂದು ತಿಳಿಯಬೇಕು.

**೫) ಓಂ ಓಂ ವದತೀತಿಚೇನ್ನಪ್ರಾಜ್ಞೋಹಿ ಓಂ**

ಅನಾದಿಕಾಲಗಳಿಂದ ಅನಂತವಾದದ್ದೇ ಕಾಠಕೋಪನಿಷದ್ವಾಕ್ಯವು. ಅದು 'ವದತಿ' - ಪ್ರಧಾನನನ್ನೇ ವರ್ಣಿಸುತ್ತದೇ. ಹೀಗೆ ಅದನ್ನು ತಿಳಿಯಲೇಬೇ ಕೆಂದರೆ? 'ನ ಹಿ' - ನಿಶ್ಚಿತವಾಗಿ ತಿಳಿಯಬೇಕಿಲ್ಲ. ಯಾಕೆಂದರೆ 'ಪ್ರಾಜ್ಞ' - ಈ ಶಬ್ದದಿಂದ ಭಗವಂತನೇ ಅಲ್ಲಿ ಪ್ರಾಜ್ಞ ಶಬ್ದದಿಂದ ಪ್ರತಿಪಾದಿತನು ಪ್ರಧಾನನಲ್ಲ. ಅದರಿಂದಲೇ ಅವನಲ್ಲಿ ಜ್ಞಾನ ವಿಷಯತ್ವವಿಲ್ಲವೆಂದು ತಿಳಿಯಬೇಕೆಂದರ್ಥವು.

**೬) ಓಂ ಓಂ ಪ್ರಕರಣಾತ್ ಓಂ**

ವೈಷ್ಣವರೂಪ (ವಿಷ್ಣು ಸಂಬಂಧ) ಈ ಮೂರನ್ನೂ 'ಪ್ರಕರಣಾತ್' - ಪ್ರಕರಣಬಲದಿಂದ ಪ್ರಜ್ಞಾನಾಮಕ ಪರಮಾತ್ಮನೇ. ಇಲ್ಲಿ ಪ್ರತಿಪಾದ್ಯ ನಾಗಿದ್ದಾನೆಂಬ ಅರ್ಥ.

**೭) ಓಂ ಓಂ ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಸ್ಯ ಓಂ**

ಎಲ್ಲ ಯುಕ್ತಿಗಳೆನ್ನಲೂ 'ಚ' ಎಂಬ ಶಬ್ದಪ್ರಯೋಗವು. 'ಏವ' ಎಂಬ ಶಬ್ದವು ಮೂರು ಪ್ರಕಾರಗಳಲ್ಲಿ ತ್ರೈವಿಧ್ಯದ ವಿಚಾರವಾಗಿದೆ. ಯಾವುದರಿಂದ ಹೀಗೆ 'ತ್ರಯಾಣಾಮೇವ' ಪಿತೃ. ಸೌಮನಸ್ಯ (ಸೋಮಯಾಗ) ಸ್ವರ್ಗ, ಅಗ್ನಿ ರೂಪವಾದ ಪರಮಾತ್ಮನ ಮೂರು ರೂಪಗಳ ಪ್ರತಿಪಾದಕವಾಗಿಯೇ ಇವೆ.

ಅದರ ವಿಷಯಕವಾಗಿಯೇ ನಚಿಕೇತ ಋಷಿಗಳು ಯಮಧರ್ಮರಾಜರನ್ನು ಮಾಡಿರುವ ಪ್ರಶ್ನೆಗಳು. ಆ ಪ್ರಶ್ನೆಗಳ ಉತ್ತರರೂಪವಾಗಿ ಹೇಳುವದೇ-ಉಪನ್ಯಾಸ. ಈ ಪ್ರಕರಣದಲ್ಲಿ ಕಂಡುಬರುತ್ತದೆ. ಇದರಿಂದಲೂ ಕೂಡ ಹೀಗೆ ತೋರುತ್ತದೆ. ಸರ್ವಥಾ ಪ್ರಧಾನಾಧಿಗಳು ಪ್ರತಿಪಾದ್ಯರಲ್ಲವೆಂಬುದೇ ತೋರುತ್ತದೆ.

## ೮) ಓಂ ಓಂ ಮಹದ್ವಚ್ಚ ಓಂ

'ಚ' ಶಬ್ದದಿಂದ ಎಲ್ಲ ದ್ರಾಷ್ಟಾಂತಿಕ ಭಾವವನ್ನು ತೋರಿಸುವುದರಿಂದ. ಹೇಗೆಂದರೆ, 'ಮಹಾಂತಃ ವಿಭುಮಾತ್ಮನಂ' ಇದೇ ಮೊದಲಾದ ವಾಕ್ಯಗಳಲ್ಲಿ ತೋರುವ ಮಹತ್ ಶಬ್ದಗಳು ಹೇಗೆ ವಿಷ್ಣು ಪರವಾಗಿಯೇ ಇವೆಯೋ ಹಾಗೆಯೇ ಮಹತ್ತತ್ವ ಪರವಾಗಿ ಸರ್ವಥಾ ತೊರುವುದೇ ಇಲ್ಲ. ಅದೇ ರೀತಿ ಅವ್ಯಕ್ತಾದಿ ಶಬ್ದಗಳೂ ಮುಖ್ಯವಾಗಿ ವಿಷ್ಣು ಪರವಾಗಿಯೇ ಇವೆ ಎಂಬ ಅರ್ಥವು.

## ೯) ಓಂ ಓಂ ಚಮಸವದವಿಶೇಷಾತ್ ಓಂ

'ಚಮಸವತ್' ಯಜ್ಞಪಾತ್ರೆಗಳಲ್ಲಿ 'ಚಮಸ್' ಎಂಬ ಪಾತ್ರೆಯು ಯಜ್ಞದಲ್ಲಿ ಪ್ರಸಿದ್ಧವಾಗಿದ್ದರೂ 'ಇದಂತಭಿರಃ' ಮುಖ್ಯವಾಗಿ ಪ್ರಧಾನವಾಗಿದ್ದೆಂದು ಹೇಳುತ್ತದೆಯೇ ವಿನಃ ಮುಖ್ಯವೃತ್ತಿಯಿಂದ (ಈಶ್ವರ) ಪರಬ್ರಹ್ಮವಾಚಿಯಾಗಿದೆ. ಅದರಂತೆ ಪ್ರಧಾನಾದಿಗಳಲ್ಲಿ ಪ್ರಸಿದ್ಧವಾಗಿದ್ದರೂ ಪರಮ ಮುಖ್ಯಾರ್ಥ ವಿಷ್ಣುವೇ. ಯಾಕೆಂದರೆ 'ನಾಮಾನಿ ಸರ್ವಾಣಿ' ಎಂಬ ಶೃತಿಬಲದಿಂದ ಆದರೂ ವಿಷ್ಣುವಾಚ್ಯವೇ ಎಂದು ಏಕೆ ಹೇಳಬೇಕೆಂದರೆ 'ಅವಿಶೇಷಾತ್' ಇದೆ. 'ನಾಮಾನಿ ಸರ್ವಾಣಿ' ಈ ಶೃತಿಯಿಂದ 'ಇದಂ ಸರ್ವಂ' ಈ ವೇದವಾಕ್ಯದಿಂದಲೂ ಅನ್ಯತ್ರ ವಿಶೇಷತೆ ಇಲ್ಲದಿರುವುದರಿಂದಲೂ ಮುಖ್ಯವಾಚ್ಯತ್ವವು ಪರಬ್ರಹ್ಮನಲ್ಲಿಯೇ ಇದೆ ಎಂದು ತಿಳಿಯಬೇಕು.

## ೧೦) ಓಂ ಓಂ ಜ್ಯೋತಿರುಪಕ್ರಮಾತ್ತು ತಥಾಹ್ಯಧೀಯತ ಏಕೇ ಓಂ (ಜ್ಯೋತಿರುಪಕ್ರಮಾಧಿಕರಣಂ)

'ತು' ಎಂದರೆ ಅದರಿಂದಲೇ ಎಂಬರ್ಥ, 'ಜ್ಯೋತಿಃ ಜ್ಯೋತಿಷಾ ಯಜೇತ' ಇತ್ಯಾದಿ ವಾಕ್ಯಗಳಿಂದ ವರ್ಣಿತನಾದ ಜ್ಯೋತಿ ಮೊದಲಾದ ಶಬ್ದವಾಚ್ಯನು ಬ್ರಹ್ಮನೇ ವಿನಃ ಜ್ಯೋತಿಷ್ಟೋಮಾದಿ ಯಾಗಗಳಲ್ಲ. ಯಾಕೆಂದರೆ 'ಹಿ' ಯಾವುದರಿಂದ ಒಂದು ಶಾಖೆಯವರು 'ಉಪಕ್ರಮಾತ್' 'ಏಷ ಇಯಂ' ಅಲ್ಲಿಂದ ಆರಂಭಿಸಿ 'ತಥಾ' ಎಲ್ಲ ಶಬ್ದಗಳಿಂದ (ಅಭಿಧೇಯ) ಪ್ರತಿಪಾದ್ಯ ನಾದ ಹರಿಯನ್ನೇ 'ತಾವಾ ಏತಾಃ' ಇವೇ ಮೊದಲಾದವುಗಳಲ್ಲಿ ಗಾಯನ ಮಾಡುತ್ತಾರೋ ಅದಕ್ಕೋಸ್ಕರವಾಗಿಯೇ ಜ್ಯೋತಿಃ ಎಂದರೆ ವಿಷ್ಣುವೇ ಎಂದು ಅರಿಯಬೇಕು.

## ೧೧) ಓಂ ಓಂ ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ ಓಂ

ಚ ಮತ್ತು ಒಟ್ಟಿನ ಮೇಲೆ ಹಾಗೂ ಮತ್ತು ಮಧ್ವಾದಿವತ್ ಹೇಗೆ ಮೋಕ್ಷ ವಿದ್ಯಾಯಾಂತರ್ಗತವಾದ ಮಧ್ವಾದಿ ಶಬ್ದಗಳು ವಿಷ್ಣುವಾಚಿ ಎಂದರೆ ಹೇಗೆ ವಿರೋಧವಿರುವುದಿಲ್ಲವೋ ಹಾಗೆ ಲೌಕಿಕವಾದ ಕ್ಷುದ್ರ ಮೊದಲಾದ ಪದಗಳಿಗೆ ಶಬ್ದಾಭಾವದಿಂದ ಆ ಪದಗಳ ಅಭಾವವೆಂಬ ಹೆಸರಿನ ವಿರೋಧ ತೋರುತ್ತದೆ. ಏಕೆಂದರೆ, ಸಾಮಾನ್ಯವಾಗಿ ಪ್ರತಿಯೊಂದು ಶಬ್ದಕ್ಕೂ ಯೋಗಿಕ,ರೂಡಿ, ವೃತ್ತಿಗ ಳನ್ನು ಒಪ್ಪಿ ಈಶ್ವರನಲ್ಲಿ ಮಾತ್ರ ಮಹಾಯೋಗವೃತ್ತಿಯನ್ನು ಒಪ್ಪಿ ಹಾಗೆಯೆ ಅಧ್ಯಾ ಹಾರ ಮಾಡಿಕೊಳ್ಳಬೇಕು. ಅದಾದರೂ ಯಾಕೆಂದರೆ, 'ಕಲ್ಪನೋಪದೇಶಾತ್', 'ಪ್ರಾಣ ಋಚಃ' ಎಂದು ಎಲ್ಲ ಶಬ್ದಗಳಿಂದ ವರ್ಣಿತನಾದವನು ವಿಷ್ಣು ಎಂದು ಕಲ್ಪನೆ ಮಾಡಿದ್ದು ಶಬ್ದತಃ ಉಪಾಸನೆಯು ಹೇಳಿರುವುದರಿಂದ ಆ ವಿಷ್ಣುವಿನಲ್ಲಾ ದರೂ ಎಲ್ಲ ಶಬ್ದಾರ್ಥಗಳ ಮುಖ್ಯಗುಣರೂಪ ಮಹಾಯೋಗವೃತ್ತಿಯನ್ನು ಕಲ್ಪನೆ ಮಾಡದಿದ್ದ ಪಕ್ಷದಲ್ಲಿ ಅದು ಸಮಂಜಸವಾಗಿ ಕೂಡುವುದಿಲ್ಲವೆಂದರ್ಥ.

## ೧೨) ಓಂ ನ ಸಂಖ್ಯೋಪಸಂಗ್ರಹಾದಪಿನಾನಾಭಾವಾದತಿರೇಕಾಚ್ಚಓಂ (ನಸಂಖ್ಯೋಪಸಂಗ್ರಹಾಧಿಕರಣಂ)

'ಸಂಖ್ಯೋಪಸಂಗ್ರಹಾತ್', 'ಯಸ್ಮಿನ್ ಪಂಚ-ಪಂಚಜನಾ' ಎಂದು ಬಹುಸಂಖ್ಯೆಯ ವಚನವಿದೆ. ಮತ್ತು 'ಯಸ್ಮಿನ್' ಎಂದು ಆಧಾರಾಧೇಯ ಭಾವ ವನ್ನು ತೋರಿಸುತ್ತಿರುವುದರಿಂದಲೂ ಹಾಗೆ ಅಲ್ಲಿಯಾದರೂ ವಿಷ್ಣುವಿನಲ್ಲಿ ಪಂಚ ಜನ ಎಂದು ಹೇಳುವುದರಿಂದ ಬಹುತ್ವವಿರೋಧ ಬರುವುದಿಲ್ಲ. ಯಾಕೆಂದರೆ? 'ನಾನಾಭಾವಾತ್' -ಭಗವಂತನಲ್ಲಿ ಅನೇಕ ರೂಪಗಳಿರುವುದರಿಂದ 'ಅತಿರೇ ಕಾಚ್ಚ ಯಸ್ಮಿನ್' ಅಂದರೆ ಆಧಾರರೂಪತ್ವ ತೋರಿಸಿದಂತೆ ಪಂಚಜನಾ ಎಂಬ ಆಧೇಯರೂಪಾರ್ಥದಲ್ಲಿಯೂ ಪರಸ್ಪರ ಸವಿಶೇಷಾಭಿನ್ನತ್ವ (ವಿದೆ)ವೇ ತೋರುತ್ತದೆ ಎಂದು ಅರ್ಥ.

## ೧೩) ಓಂ ಓಂ ಪ್ರಾಣಾದಯೋವಾಕ್ಯಶೇಷಾತ್ ಓಂ

ಭಗವದ್ರೂಪಗಳೆಂದು ಹೇಳಿದ ಪಂಚಜನರಾರೆಂದರೆ ಪ್ರಾಣಾದೇಃ, ದ್ವಿತೀಯಾ ವಿಭಕ್ತಿಯಿಂದ ನಿರ್ದಿಷ್ಟರಾದ ಪ್ರಾಣಾದಿಗಳು ಪ್ರಾಣಚಕ್ಷು, ಶ್ರೋತ್ರ, ಅನ್ನ, ಮನಃ ಎಂಬ ಹೆಸರಿನಿಂದ ಯುಕ್ತರಾದವರೆಂದು ತಿಳಿಯಬೇಕು. ಯಾಕೆಂದರೆ ? ವಾಕ್ಯಶೇಷಾತ್, ಎಲ್ಲ ಭಗವದ್ರೂಪವಿಶೇಷಗಳೇ ಯಾಕೆಂದರೆ ವಿಷ್ಣುವ್ಯತಿರಿಕ್ತರಾದ ಬೇರೆಯವರಲ್ಲಿ ಪ್ರಾಣಸ್ತಪ್ರಾಣಂ ಎಂಬ ವಾಕ್ಯದಿಂದ ಪ್ರಾಣ ನಿಗೆ ಪ್ರಾಣಪ್ರದಾತೃತ್ವಾದಿಗಳು ಸರ್ವಥಾ ಕೂಡದಿರುವುದರಿಂದ ಈ ಅರ್ಥ ಅನ್ಯತ್ರ ಅಸಂಭಾವಿತವೇ ಆಗಿದೆ.

## ೧೪) ಓಂ ಓಂ ಜ್ಯೋತಿಷೇಕೇಷಾಮಸತ್ಯನ್ನೇ ಓಂ

'ಏಕೇಷಾಂ ಕಾಣ್ವಶಾಖೆಯವರಲ್ಲ'- 'ಅನ್ನ' ಅನ್ನ ಶಬ್ದದಿಂದ ವಾಚ್ಯ ಭಗವದ್ರೂಪದಲ್ಲಿ 'ಅಸತಿ' ಹೇಳದೇ ಇದ್ದರೂ ಕೂಡ, 'ಜ್ಯೋತಿ

ಷಾ' ಜ್ಯೋತಿರೂಪವಾದ ಭಗವದ್ರೂಪದಲ್ಲಿ ಈ ಹಿಂದೆ ಹೇಳಿದ ಐದು ಭಗವದ್ರೂಪಪೂರ್ಣತೆಯನ್ನು ತಿಳಿಯಬೇಕೆಂದರ್ಥ.

## ೧೫) ಓಂ ಓಂ ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ ಓಂ (ಆಕಾಶಾಧಿಕರಣಂ)

'ಆತ್ಮನಃ ಆಕಾಶಃ ಸಂಭೂತಃ ಆಕಾಶಾದ್ ವಾಯುಃ' ಇತ್ಯಾದೌ ಈ ವಾಕ್ಯಗಳಿಂದ ಯಾವ ಆಕಾಶಕಾರ್ಯವಾಗಿದೆಯೋ ಅದಕ್ಕೆ ಕಾರಣತ್ವವನ್ನು ಹೇಳುವುದರಿಂದ ಆಕಾಶಾದಿ ಶಬ್ದಗಳಿಂದ ಅವುಗಳಲ್ಲಿರುವ ಭಗವಂತನೇ ಎಂದು ಹೇಳಿದರೆ ಜಡವಾದ (ಭೂತ)ಗಳಾಗದೇ ವಿಷ್ಣುವಿನಲ್ಲಿ ಕಾರ್ಯ-ಕಾರಣತ್ವಗಳು ಅಂತರ್ಯಾಮಿತ್ವೇನ ಕೂಡುತ್ತವೆ. ಯಾಕೆಂದರೆ 'ಯಥಾವ್ಯಪದಿಷ್ಟತ್ವೋಕ್ತೇ', 'ಸಯೋತೋತಶ್ರುತಃ', ಇಲ್ಲಿ ವಿಷ್ಣುವು ಯಥಾ ಯಾವ ರೀತಿ ತಿಳಿಯದಿರುವ ಎಂದು ವರ್ಣಿತನೆಂದು ಹೇಳಿದೆಯೋ ಹಾಗೇ ಆಕಾಶಾದಿಗಳಲ್ಲಿ ಏಕರೂಪ (ತದ್ರೂಪ)ನಾಗಿ ಆಕಾಶಾದಿಗಳಲ್ಲಿ 'ಯಮಾಕಾಶೋನ ವೇದ' ಇತ್ಯಾದಿ ವಾಕ್ಯಗಳಿಂದ ಪ್ರತಿಪಾದಿತನಾಗಿದ್ದಾನೆ.

## ೧೬) ಓಂ ಓಂ ಸಮಾಕರ್ಷಾತ್ ಓಂ (ಸಮಾಕರ್ಷಾಧಿಕಣಂ)

ಮುಖ್ಯವೃತ್ತಿಯಿಂದ ಭಗವದ್ವಾಚಿಯಾದ ಶಬ್ದಗಳನ್ನು ಸೆಳೆದು ಮಹಾಲಾಕ್ಷಣಿಕಾರ್ಥ (ಮಹಾರೂಢಿ) ಹೇಳುವುದನ್ನು ಒಪ್ಪಿದ್ದಾರೆ. ಹಾಗೆ ಮಾಡಿದರೆ ವ್ಯವಹಾರ ಲೋಪವಾಗಲಾರದು.

## ೧೭) ಓಂ ಓಂ ಜಗದ್ವಾಚಿತ್ವಾತ್ ಓಂ

ಲೋಕದಲ್ಲಿ ವ್ಯವಹರಿಸುವ ಶಬ್ದಗಳನ್ನು 'ಜಗದ್ವಾಚಿತ್ವಜ್ಞಾನಾತ್', ಅವುಗಳಲ್ಲಿ ಅದರ ಖ್ಯಾತಿ ಯೋಗ್ಯವೇ ಆಗಿದೆ.

## ೧೮) ಓಂ ಓಂ ಜೀವಮುಖ್ಯಪ್ರಾಣಲಿಂಗಾದಿಪತಿಚೇತ್ತದ್ವ್ಯಾಖ್ಯಾತಂ ಓಂ

'ಅಸ್ಯಯದೇಕಾ ಶಾಖಾಂ ಜೀವೋ ಜಹಾತಿ' ಹೀಗೇ ಮತ್ತು 'ವಾಯು ನಾಹಿ ಲೋಕಾನೇನೀಯಂತೆ' ಈ ಶರೀರವನ್ನು ಜೀವನು ಬಿಡುತ್ತಾನೆ. ಆ ವಾಯು ವಿನಿಂದಲೇ ಎಲ್ಲ ಲೋಕಗಳೂ (ನಿಯಂತ್ರಿತವಾಗಿ) ಒಯ್ಯಲ್ಪಡುತ್ತವೆ ಎಂಬ ವಾಕ್ಯದಲ್ಲಿ 'ಜೀವ ಮುಖ್ಯ ಪ್ರಾಣಲಿಂಗಾತ್' - ಜೀವ ಮತ್ತು ಮುಖ್ಯ ಪ್ರಾಣಲ ಕ್ಷಣ ಹೇಳಿದೆ ಎಂದು ತೋರುತ್ತದೆ. ಆದರೆ ಅವರಿಬ್ಬರಲ್ಲಿ ಆ ಶಬ್ದಗಳ ಮುಖ್ಯವಾ ಚ್ಯತ್ವ ಮಾತ್ರ ಇರುವುದಿಲ್ಲ. ಯಾಕೆಂದರೆ ಯಾವುದರಿಂದ ಯಾವ ವಾಕ್ಯ ಅಭಿ ವ್ಯಕ್ತವಾಗುತ್ತದೋ, ಅದೆಲ್ಲವೂ ಅಂತರ್ಯಾಮಿಪರತ್ವೇನ (ವ್ಯಾಪಕ) ವ್ಯಾವೃತ ವಾಗಿರುವುದರಿಂದ ಹೀಗೆ ಅರ್ಥವು.

## ೧೯) ಓಂ ಓಂ ಅನ್ಯಾರ್ಥಂತು ಜೈಮಿನಿಃ ಪ್ರಶ್ನ ವಾಖ್ಯಾನಾಭ್ಯಾಮಪಿ ಚೈವಯೇಕೇ ಓಂ

'ತು' ಎಂದರೆ ಅದೇ ಎಂದರ್ಥ. ಇದರಿಂದ ವಿಷ್ಣು ವ್ಯತಿರಿಕ್ತವಾದ ಶಬ್ದಗ ಳನ್ನು ಸೆಳೆದು ಕರ್ಮ ಪ್ರತಿಪಾದಕವಾಗಿದ್ದರೂ ವಿಷ್ಣುಪರಯೋಗ್ಯವೇ. ಯಾಕೆಂದರೆ 'ಅನ್ಯಾರ್ಥಂ' - ಪರಮಾತ್ಮನ ವಿಷಯಜ್ಞಾನಕ್ಕೇವೇ. ಅದೇಕೆ ಬೇಕೆಂದರೆ? ಪ್ರಶ್ನ 'ವ್ಯಾಖ್ಯಾನಾಭ್ಯಾಂ' ಯಾರೆಂದು ಶೌನಕರ ಪ್ರಶ್ನೆಯಿಂದ 'ದ್ವೇ ವಿದ್ಯೆ' ಎಂದು ಆಂಗರಸರ (ವಚನ) ಉತ್ತರ ಮತ್ತು ಹೇಗೆಂದರೆ? ಶ್ವೇತು ವಿನ ಪ್ರಶ್ನೆಗೂ 'ಯಥಾ ಸೌಮ್ಯ' ಎಂದು ಉದ್ದಾಲಕರ ವಚನದಿಂದ ಎಂದು ಜೈಮಿನ್ಯಾಚಾರ್ಯರ ಅಭಿಪ್ರಾಯ. ಇನ್ನು ಕೆಲವು ಶಾಖೆಯ ಜನರ ಅಭಿಪ್ರಾಯ ವೆಂದರೆ 'ಯಸ್ತಂ ನ ವೇದ' ಎಂಬ ಬೇರೆ ರೀತಿಯ ಜ್ಞಾನವು ಪರಮಾತ್ಮ ಜ್ಞಾನ ನಿಮಿತ್ತವೆಂದೇ ಚಿಂತನೆ (ಪಠಣ) ಮಾಡುತ್ತಾರೋ ಅದಕ್ಕೆಂದೇ ಎಂಬರ್ಥ.

## ೨೦) ಓಂ ಓಂ ವಾಕ್ಯಾನ್ವಯಾತ್ ಓಂ

ಎಲ್ಲ ವಾಕ್ಯಗಳನ್ನೂ ಪರಬ್ರಹ್ಮನಲ್ಲಿಯೇ ಹೊಂದಿಸುವ ದೃಷ್ಟಿಯಿಂದ ವೇದದಿಂದ ಕರ್ಮಾದಿಗಳನ್ನೂ ವರ್ಣನೆ ಮಾಡಬೇಕೆಂಬ ಅಭಿಪ್ರಾಯ.

## ೨೧) ಓಂ ಓಂ ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ ಓಂ

ವೇದವು ಕರ್ಮಾದಿಗಳನ್ನು ವರ್ಣಿಸುತ್ತವೆ. ಯಾಕೆಂದರೆ 'ಪ್ರತಿಜ್ಞಾಸಿದ್ಧೇಃ ಲಿಂಗಂ' ಮೋಕ್ಷರೂಪ ನಮ್ಮ ಪ್ರತಿಜ್ಞೆಸಿದ್ಧವಾಗಲು ಮುಖ್ಯವಾಗಿ ಜ್ಞಾನವೇ ಕಾರಣ. ಬೇರೆ ಯಾವುದೂ ಇಲ್ಲ. 'ನಾನ್ಯಃ ಪಂಥಾಃ' ಎಂಬ ಪಣತೊಟ್ಟು ಕಾರ್ಯಸಿದ್ಧಿ(ಪ್ರತಿಜ್ಞಾ)ಗೆ ಸಾಧಕವು. ಅದಕ್ಕೆ ಉಪಯುಕ್ತವಾದ ಆ ಬ್ರಹ್ಮ ಪ್ರತಿಪಾದನೆ ಮಾಡುವುದೇ ಯೋಗ್ಯವೆಂದು 'ಆಶ್ಮರಥ್ಯಾಚಾರ್ಯ' ಅವರ ಅಭಿಪ್ರಾಯವೆಂದರ್ಥ.

## ೨೨) ಓಂ ಓಂ ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ ಓಂ

'ಉತ್ಕ್ರಮಿಷ್ಯತಃ ಜ್ಞಾನದಿಂದ ಮೋಕ್ಷಾಪೇಕ್ಷಿತರಾದ ಅಧಿಕಾರಿಗಳಿಂದ 'ಏವಂ' ಹಾಗೂ ಜ್ಞಾನಪಡೆಯಲು ಬೇಕಾದ ಸಾಧನಗಳಿಂದಲೂ 'ಭಾವಾತ್', ಕರ್ಮಾನುಷ್ಠಾನ ಮಾಡುವುದೂ ಜ್ಞಾನಸಾಧನವೇ ಎಂದು ಹೇಳುವ ವೇದವು ಕರ್ಮಗಳನ್ನು ವರ್ಣನೆ ಮಾಡುವದ್ದು ಯೋಗ್ಯವೇ ಎಂದು 'ಔಡುಲೋಮಿ' ಎಂಬ ಆಚಾರ್ಯರು ಒಪ್ಪುವರೆಂದರ್ಥ.

## ೨೩) ಓಂ ಓಂ ಅವಸ್ಥಿತೇರಿತಕಾಶಕೃತ್ಸ್ನಃ ಓಂ

ಸರ್ವಾಧಾರನಾದ ಭಗವಂತನಲ್ಲಿ ಕರ್ಮಾದಿಗಳ 'ಅವಸ್ಥಿತೇಃ' ಇರುವುದರಿಂದ ಹಾಗೂ ಶ್ರೀವಿಷ್ಣುವಿನಲ್ಲಿ ಕರ್ಮಾದಿಗಳ ಆಧಾರಕತ್ವವಿದೇ ಎಂಬ

ಜ್ಞಾನದಿಂದ ಅದರ ಆಧೇಯ ಭೂತವಾದ ಕರ್ಮಾದಿಗಳ ಸ್ವರೂಪವು ವೇದದಿಂದ ಪ್ರತಿಪಾದಿಸಲ್ಪಡುತ್ತದೆಂದ ಕಾಶಕೃತ್ಸ್ನಾಚಾರ್ಯರ ಅಭಿಪ್ರಾಯ. ಇದರಿಂದ ಪರಸ್ಪರ ಎಲ್ಲಮತಗಳಲ್ಲಿ ಅಧಿಕಾರಕತ್ವ (ಹೊಂದಾಣಿಕೆ) ಇರುವುದ ರಿಂದ ವಿರೋಧ ಕಾಣುವುದಿಲ್ಲ.

## ೨೪)ಓಂ ಓಂ ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ಓಂ ಪ್ರಕೃತ್ಯಧಿಕರಣಂ)

ಈಶ್ವರನು ಕೇವಲ ಪುಲ್ಲಿಂಗ ಮಾತ್ರದಿಂದಲೇ ಕರೆಯಿಸಿಕೊಳ್ಳುವುದಿಲ್ಲ. ಆದರೆ ಪ್ರಕೃತ್ಯಾದಿ ಸ್ತ್ರೀಲಿಂಗ ವಾಚಕನೂ ಅಹುದು. 'ಸೈಷಾಪ್ರಕೃತಿಃ' ಇತ್ಯಾದಿಗಳಿಂದ ಹೇಳಿರುವ ಪ್ರಕೃತ್ಯಾದಿ ಶಬ್ದವಾಚ್ಯನೇ ಆಗಿದ್ದಾನೆ. ಏಕೆಂದರೆ ಹೀಗಿದ್ದರೂ 'ಪ್ರತಿಜ್ಞಾ ದೃಷ್ಟಾಂತಾನುಪರೋಧಾತ್', 'ಹಂತೈತಮೇವ' ಎಂಬ ಪ್ರತಿಜ್ಞೆಯಿಂದ 'ಯಥಾಸದ್ಯಃ....' ಇತ್ಯಾದಿ ವಾಕ್ಯಗಳಿಂದ ವಿರೋಧವಿಲ್ಲದಿರುವುದರಿಂದ ಪ್ರಕೃತಿ ಶಬ್ದದಿಂದಲೂ ಈಶ್ವರ ವಾಚವೇ ಎಂದು ಹೇಳಬೇಕು. ಹಾಗಿಲ್ಲವೆಂದರೆ ವಾಕ್ಯವಿರೋಧ ಬರುತ್ತದೆಂದು ಅರ್ಥ.

## ೨೫) ಓಂ ಓಂ ಅಭಿಧ್ಯೋಪದೇಶಾತ್ ಓಂ

'ಅಭಿಧ್ಯಾಯಾ' ದೇವರ ಇಚ್ಛೆಗೆ 'ಉಪದೇಶಾತ್', 'ಮಾಯಾಂತು ಪ್ರಕೃತಿಂ....' ಇತ್ಯಾದಿ ವೇದದಲ್ಲಿ ಪ್ರಕೃತಿ ಶಬ್ದಗಳಿಂದ ವಾಚ್ಯನೆಂದು ಹೇಳಿದ್ದು ಅಂತ ಇಚ್ಛೆಯಿಂದ ಅಭಿನ್ನನಾದ ಈಶ್ವರನಲ್ಲಿಯೂ ಆಯಾ ಶಬ್ದಗಳಿಂದ ವಾಚ್ಯತ್ವವನ್ನು ಹೇಳಲ್ಪಡುವುದೆಂದರ್ಥ.

## ೨೬) ಓಂ ಓಂ ಸಾಕ್ಷಾಚ್ಚೋಭಯಾಮ್ನಾನಾತ್ ಓಂ

'ಚ' ನಿಶ್ಚಿತವಾಗಿಯೂ 'ಸಾಕ್ಷಾತ್' ಯಾವ ನಿಮಿತ್ತವಿಲ್ಲದೇ 'ಉಭಯಾಮ್ನಾನಾತ್', 'ಏಷಸ್ತ್ರೈಷ ಪುರುಷಃ' ಈ ವಾಕ್ಯಗಳಿಂದ ಪ್ರಕೃತಿ-ಪುರುಷ ಎಂಬ

ಉಭಯ ಶಬ್ದಗಳಿಂದ ಪ್ರತಿಪಾದಿತನಾಗಿದ್ದಾನೆ ಎಂದು ಹೇಳುವುದರಿಂದ ಈಶ್ವರನಿಗೆ ಪ್ರಕೃತ್ಯಾದಿ ಶಬ್ದವಾಚ್ಯತ್ವವು ಅತ್ಯಾವಶ್ಯಕವೆಂದು ತಿಳಿಯಬೇಕೆಂಬ ಅರ್ಥವು.

**೨೭) ಓಂ ಓಂ ಆತ್ಮಕೃತೇಃ ಪರಿಣಾಮಾತ್ ಓಂ**

ಪ್ರಕೃತಿಯನ್ನು ಪರಿಣಾಮ (ವ್ಯತ್ಯಾಸ) ಮಾಡಿ ಆ ಪ್ರಕೃತಿಯನ್ನು ಪ್ರೇರಣೆ ಮಾಡಲು 'ಆತ್ಮಕೃತೇಃ' ತನ್ನ ಶರೀರದಿಂದಲೇ (ಅಪತ್ಯ) ಸಂತಾನಾದಿಗಳನ್ನು ಉತ್ಪಾದನೇ ಮಾಡುವನೆಂದು 'ಗೀಯತೆ' ಪ್ರತಿಪಾದಿತನಾಗುತ್ತಾನೆ. ಆದರಿಂದಲೇ ಶ್ರೀಮನ್ನಾರಾಯಣನು ಪ್ರಕೃತ್ಯಾದಿ ಶಬ್ದಗಳಿಂದ ವಾಚ್ಯನಾಗಿರುವನೆಂದು ತಿಳಿಯಬೇಕು.

**೨೮) ಓಂ ಓಂ ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ ಓಂ**

ಇದರಿಂದಲೇ 'ಏತೇನ ಸರ್ವೇ' ಸಮಸ್ತವಾದ ಶೂನ್ಯಾದಿ ಶಬ್ದಗಳನ್ನೂ ಕೂಡ 'ವ್ಯಾಖ್ಯಾತಾಃ' ಮುಖ್ಯವಾಗಿ ಎಲ್ಲ ಶಬ್ದಗಳೂ ಭಗವದ್ವಾಚಕಗಳಾಗಿಯೇ ಇವೆ ಎಂದು ಅರ್ಥ. ಈ ಅಧ್ಯಾಯದ ಪ್ರಾರಂಭದಿಂದ ಕೊನೆಯವರೆಗೆ ಹೇಳಿರುವ ಎಲ್ಲ ಅರ್ಥಗಳಲ್ಲಿಯೂ ಸಾರ್ಥಕ್ಯವನ್ನೂ, ದಾರ್ಢ್ಯತೆಯನ್ನೂ ಪ್ರದರ್ಶಿಸುವುದಕ್ಕಾಗಿಯೇ ಅಧ್ಯಾಯದ ಕೊನೆಯ ಭಾಗದಲ್ಲಿಯ ಸೂತ್ರವಾಕ್ಯದಲ್ಲಿ ದ್ವಿರುಕ್ತಿಯನ್ನು ತೋರುವುದಕ್ಕಾಗಿಯೇ 'ವ್ಯಾಖ್ಯಾತಾಃ ವ್ಯಾಖ್ಯಾತಃ' ಎಂದು ಹೇಳಿ ಅಧ್ಯಾಯದ ಸಮಾಪ್ತಿಯನ್ನು ಮಾಡುತ್ತಾರೆ ಶ್ರೀ ವೇದವ್ಯಾಸದೇವರು.

**ಇತಿ ಶ್ರೀಜಗನ್ನಾಥಯಿಕೃತಾಯಾಂ ಸೂತ್ರದೀಪಿಕಾಯಾಂ ಪ್ರಥಮಾಧ್ಯಾಯಸ್ಯ ಚತುರ್ಥಃ ಪಾದಃ ಉಮರ್ಜಿ ಪ್ರಹ್ಲಾದಕೃತ ಸೂತ್ರದೀಪಿಕೆಯ ಕನ್ನಾಡಾನುವಾದದ ಪ್ರಥಮಾಧ್ಯಾಯದ ಚತುರ್ಥಃ ಪಾದ ಸಮಾಪ್ತಿ.**

## ಅಥ ದ್ವಿತೀಯಾಧ್ಯಾಯಃ ಪ್ರಾರಂಭಃ

### ೧) ಓಂ ಓಂ ಸ್ಮೃತ್ಯನವಕಾಶದೋಷಪ್ರಸಂಗ ಇತಿಚೇನ್ನಾನ್ಯಸ್ಮೃತ್ಯನವಕಾಶದೋಷ ಪ್ರಸಂಗಾತ್ ಓಂ ( ಸ್ಮೃತ್ಯಧಿಕರಣಂ)

ಯತಃ ಸ್ಮೃತ್ಯನವಕಾಶದೋಷಪ್ರಸಂಗಃ (ಪಾಶುಪತಾದಿ ರೂಪವಾದ ಸ್ಮೃತಿಗಳಿಗೆ ವಿಷ್ಣುವೇ ಜಗತ್ಕರ್ತಾ ಇತ್ಯಾದಿ ವಾಕ್ಯಗಳಿಗೆ ನಿರವಕಾಶ ಪ್ರಮಾಣ ತೋರುವವರಿಂದಲೂ ಕೇವಲ ತೋರಿಕೆಯಂತೆ ಇದ್ದು ಶಿವಾದಿಕರ್ತೃತ್ವವನ್ನೇ ಒಪ್ಪುವುದು ಸರಿ. ಶೃತಿಗಳಿಂದ ಮಾತ್ರ ವಿಷ್ಣುಜಗತ್ಕರ್ತಾ ಎಂದು ತೋರುತ್ತಿದ್ದು ಅದಕ್ಕೆ ವಿರೋಧಕವಾದ ವಾಕ್ಯಗಳಿದ್ದು ಉಭಯ ಥಾದೋಷ ಬರುತ್ತಿದ್ದು ಈ ವಾಕ್ಯ ಅಪ್ರಮಾಣ ಎಂಬ ದೋಷ ಬಂದಂತೆ ಆಗುತ್ತದೆ. ಅದಕ್ಕೆ ಶೃತಿಗಳೂ ವಿಷ್ಣು ಪರವಾಗಿ ವರ್ಣಿಸುತ್ತವೆ ಎಂದು ಹೇಳುವುದು ಸರಿಯೆಂದರೆ ಅದು ಸರಿಯಲ್ಲ. ಸ್ಮೃತ್ಯನವಕಾಶದೋಷ ಪ್ರಸಂಗಃ ಪಾಶುಪತಾದ್ಯಾಗಮಸ್ಮೃತಿಗಳು ಶಿವನೇ ಜಗತ್‌ಕರ್ತಾ ಎಂದು ಸಾರುತ್ತವೆ. ಅವು ಅನವಕಾಶ ಪ್ರಮಾಣ ಸಹ ಕೃತಿ ಅನವಕಾಶ. ನಿರವಕಾಶಗಳಲ್ಲಿ ನಿರವಕಾಶಕತ್ವಕ್ಕೆ ಪ್ರಾಬಲ್ಯವಿರುವುದರಿಂದಲೂ ಮತ್ತು ವಿಷ್ಣು ಜಗತ್‌ಕರ್ತಾ ಎಂದು ಶೃತಿಗಳು ಸಾರುತ್ತಿರುವುದರಿಂದ ಅನವಕಾಶ ಸ್ಮೃತಿಗಳಕ್ಕಿಂತಲೂ ನಿರವಕಾಶ ಶೃತಿಗಳಿಗೆ ಪ್ರಾಮುಖ್ಯತೆ ಇರುವುದರಿಂದಲೂ ಶಿವ ಜಗತ್ಕರ್ತಾ ಎಂದು ಪ್ರತಿಪಾದಿಸುವುದು ಸರಿ ಎಂಬ ವಾದ ಸರಿಯಲ್ಲ. ಯಾಕೆಂದರೆ, ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್, ಪಾಶುಪತಾದಿ ಶಾಸ್ತ್ರ (ಸ್ಮೃತಿ)ಗಳಿಂದ ಭಿನ್ನವಾದ ಶೃತ್ಯರ್ಥರೂಪಗಳಾದ ಪಂಚರಾತ್ರಾದಿಗಳೂ ಮತ್ತು ರುದ್ರಾದಿ ದೇವತೆಗಳಕಿಂತಲೂ ಸರ್ವಜ್ಞತಮರಾದ ವಿಷ್ವಾದಿಗಳಿಂದ ರಚಿತವಾಗಿರುವುದರಿಂದಲೂ ಹಾಗೂ ಬೇರೆ ಪಾಶುಪತಾದಿ ಸ್ಮೃತಿಗಳಕಿಂತಲೂ ಪ್ರಬಲತಮವಾಗಿರುವುದರಿಂದಲೂ ಆ ಪಂಚರಾತ್ರಾದಿ ವಿರುದ್ಧವಾದ ಶೈವಾದಿಸ್ಮೃತಿಗಳಿಗೆ ಪ್ರಾಮಾಣ್ಯವಿದೆ ಎಂದು ಒಪ್ಪಿದರೆ ಅದಕ್ಕೆ ವಿರೋಧಿಯಾದ

ವಿಷ್ಣ್ವಾದಿ ಪಂಚರಾತ್ರಾದಿಗಳಿಗೆ ಪ್ರಾಬಲ್ಯತೆಯಿಂದ ಅಕಿಂಚಿತ್ಕರ, ಮಹತ್ವ ಪ್ರಾಮಾಣ್ಯವು ಸ್ವತಃ ಸಿದ್ಧವಾದಂತೆಯೇ ಸರಿ.

**೨) ಓಂ ಓಂ ಇತರೇಷಾಂಚಾನುಪಲಬ್ಧೇಃ ಓಂ**

ಇತರೇಷಾಂ ಚ ಪಾಶುಪತಾದಿ ಸ್ಮೃತಿಗಳಿಂದ ಲಭ್ಯವಾಗುವ ಸಾಮಾನ್ಯ ಸ್ವಲ್ಪೇ ಫಲ ಸಿಗುವುದು ಕಂಡು ಬರುತ್ತದೆ. 'ಚ' ಹೀಗೆ ಅಲ್ಪ ಫಲ ಸಿಕ್ಕರೂ ಕೂಡ 'ಇತರೇಷಾಂ' ಭಿನ್ನವಾದ ಪ್ರತ್ಯಕ್ಷದಲ್ಲಿ ಮಾತ್ರ ಯೋಗ್ಯವೆನಿಸುವ ಆ ಪುರಾಣ (ಪಾಶುಪತಿ ಸ್ಮೃತಿಗಳ ಫಲ ಅದು ಅನಿಷ್ಟ ಫಲ ಅಂದರೆ ಮೋಕ್ಷೋಪಭೋಗ ಪ್ರತಿಬಂಧಕವಾದ್ದರಿಂದ ಅಲ್ಲಿ ಹೇಳಿದ ಕರ್ಮಾನುಷ್ಠಾನ ಮಾಡುವುದಕಿಂತಲೂ (ತ್ಯಾಗವೇ) ಮಾಡದೇ ಇರುವುದೇ ಯೋಗ್ಯ. ಯಾಕೆಂದರೆ 'ಅನುಪಲಬ್ಧೇಃ' ಪ್ರತ್ಯಕ್ಷವಾಗಿ ಅವು ಸಿಗದಿರುವುದರಿಂದ (ಶಾಶ್ವತ ಫಲ ಇಲ್ಲದಿರುವುದರಿಂದ) ಆ ವಾಕ್ಯಗಳು ಅಪ್ರಮಾಣವೆಂದು ಹೇಳುವುದೇ ಯೋಗ್ಯವೆಂದು ನಾವು ಅರ್ಥೈಸಿ ಕೊಳ್ಳಬೇಕು.

**೩) ಓಂ ಓಂ ಏತೇನಯೋಗಃ ಪ್ರತ್ಯುಕ್ತಃ ಓಂ**

'ಏತೇನ ಪಾಶುಪತಾದಿ ಸ್ಮೃತಿಗಳಿಂದ ಯಾವ ವಿಧವಾದ ಮಹಾಫಲ ಕಾಣದಿರುವುದರಿಂದ 'ಯೋಗ'. ಯೋಗಶಾಸ್ತ್ರವು ಪ್ರತ್ಯುಕ್ತಃ ಪೂರ್ಣವಾಗಿ ಅಲ್ಲಗಳೆಯಲ್ಪಟ್ಟಿದೆ (ನಿರಾಕರಿಸಲ್ಪಟ್ಟಿದೆ).

**೪) ಓಂ ಓಂ ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ಓಂ (ನ ವಿಲಕ್ಷಣತ್ವಾಧಿಕರಣಂ)**

'ಅಸ್ಯ ವೇದಾನುಸಾರಿಯಾದ ಪಂಚರಾತ್ರಾದಿ ಸ್ಮೃತಿಗಳಿಗೆ 'ವಿಲಕ್ಷಣತ್ವಾತ್' ಸ್ವತಃ ಪ್ರಮಾಣ್ಯರೂಪವಾಗಿರುವ ವೈಲಕ್ಷಣ್ಯವಿರುವುದರಿಂದಲೂ ವೇದ

## ಅಥ ದ್ವಿತೀಯಾಧ್ಯಾಯಃ ಪ್ರಾರಂಭಃ

### ೧) ಓಂ ಓಂ ಸ್ಮೃತ್ಯನವಕಾಶದೋಷಪ್ರಸಂಗ ಇತಿಚೇನ್ನಾನ್ಯಸ್ಮೃತ್ಯನವಕಾಶದೋಷ ಪ್ರಸಂಗಾತ್ ಓಂ ( ಸ್ಮೃತ್ಯಧಿಕರಣಂ)

ಯತಃ ಸ್ಮೃತ್ಯನವಕಾಶದೋಷಪ್ರಸಂಗಃ (ಪಾಶುಪತಾದಿ ರೂಪವಾದ ಸ್ಮೃತಿಗಳಿಗೆ ವಿಷ್ಣುವೇ ಜಗತ್ಕರ್ತಾ ಇತ್ಯಾದಿ ವಾಕ್ಯಗಳಿಗೆ ನಿರವಕಾಶ ಪ್ರಮಾಣ ತೋರುವವರಿಂದಲೂ ಕೇವಲ ತೋರಿಕೆಯಂತೆ ಇದ್ದು ಶಿವಾದಿಕರ್ತೃತ್ವವನ್ನೇ ಒಪ್ಪುವುದು ಸರಿ. ಶೃತಿಗಳಿಂದ ಮಾತ್ರ ವಿಷ್ಣುಜಗತ್ಕರ್ತಾ ಎಂದು ತೋರುತ್ತಿದ್ದು ಅದಕ್ಕೆ ವಿರೋಧಕವಾದ ವಾಕ್ಯಗಳಿದ್ದು ಉಭಯ ಥಾದೋಷ ಬರುತ್ತಿದ್ದು ಈ ವಾಕ್ಯ ಅಪ್ರಮಾಣ ಎಂಬ ದೋಷ ಬಂದಂತೆ ಆಗುತ್ತದೆ. ಅದಕ್ಕೆ ಶೃತಿಗಳೂ ವಿಷ್ಣು ಪರವಾಗಿ ವರ್ಣಿಸುತ್ತವೆ ಎಂದು ಹೇಳುವುದು ಸರಿಯೆಂದರೆ ಅದು ಸರಿಯಲ್ಲ. ಸ್ಮೃತ್ಯನವಕಾಶದೋಷ ಪ್ರಸಂಗಃ ಪಾಶುಪತಾದ್ಯಾಗಮಸ್ಮೃತಿಗಳು ಶಿವನೇ ಜಗತ್‌ಕರ್ತಾ ಎಂದು ಸಾರುತ್ತವೆ. ಅವು ಅನವಕಾಶ ಪ್ರಮಾಣ ಸಹ ಕೃತಿ ಅನವಕಾಶ. ನಿರವಕಾಶಗಳಲ್ಲಿ ನಿರವಕಾಶಕತ್ವಕ್ಕೆ ಪ್ರಾಬಲ್ಯವಿರುವುದರಿಂದಲೂ ಮತ್ತು ವಿಷ್ಣು ಜಗತ್‌ಕರ್ತಾ ಎಂದು ಶೃತಿಗಳು ಸಾರುತ್ತಿರುವುದರಿಂದ ಅನವಕಾಶ ಸ್ಮೃತಿಗಳಕ್ಕಿಂತಲೂ ನಿರವಕಾಶ ಶೃತಿಗಳಿಗೆ ಪ್ರಾಮುಖ್ಯತೆ ಇರುವುದರೆಂದಲೂ ಶಿವ ಜಗತ್ಕರ್ತಾ ಎಂದು ಪ್ರತಿಪಾದಿಸುವುದು ಸರಿ ಎಂಬ ವಾದ ಸರಿಯಲ್ಲ. ಯಾಕೆಂದರೆ, ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್, ಪಾಶುಪತಾದಿ ಶಾಸ್ತ್ರ (ಸ್ಮೃತಿ)ಗಳಿಂದ ಭಿನ್ನವಾದ ಶೃತ್ಯರ್ಥರೂಪಗಳಾದ ಪಂಚರಾತ್ರಾದಿಗಳೂ ಮತ್ತು ರುದ್ರಾದಿ ದೇವತೆಗಳಕಿಂತಲೂ ಸರ್ವಜ್ಞತಮರಾದ ವಿಷ್ಣ್ವಾದಿಗಳಿಂದ ರಚಿತವಾಗಿರುವುದರಿಂದಲೂ ಹಾಗೂ ಬೇರೆ ಪಾಶುಪತಾದಿ ಸ್ಮೃತಿಗಳಕಿಂತಲೂ ಪ್ರಬಲತಮವಾಗಿರುವುದರಿಂದಲೂ ಆ ಪಂಚರಾತ್ರಾದಿ ವಿರುದ್ಧವಾದ ಶೈವಾದಿಸ್ಮೃತಿಗಳಿಗೆ ಪ್ರಾಮಾಣ್ಯವಿದೆ ಎಂದು ಒಪ್ಪಿದರೆ ಅದಕ್ಕೆ ವಿರೋಧಿಯಾದ

ವಿಷ್ಣ್ವಾದಿ ಪಂಚರಾತ್ರಾದಿಗಳಿಗೆ ಪ್ರಾಬಲ್ಯತೆಯಿಂದ ಅಕಿಂಚಿತ್ಕರ, ಮಹತ್ವ ಪ್ರಾಮಾಣ್ಯವು ಸ್ವತಃ ಸಿದ್ಧವಾದಂತೆಯೇ ಸರಿ.

**೨) ಓಂ ಓಂ ಇತರೇಷಾಂಚಾನುಪಲಬ್ಧೇಃ ಓಂ**

ಇತರೇಷಾಂ ಚ ಪಾಶುಪತಾದಿ ಸ್ಮೃತಿಗಳಿಂದ ಲಭ್ಯವಾಗುವ ಸಾಮಾನ್ಯ ಸ್ವಲ್ಪೇ ಫಲ ಸಿಗುವುದು ಕಂಡು ಬರುತ್ತದೆ. 'ಚ' ಹೀಗೆ ಅಲ್ಪ ಫಲ ಸಿಕ್ಕರೂ ಕೂಡ 'ಇತರೇಷಾಂ' ಭಿನ್ನವಾದ ಪ್ರತ್ಯಕ್ಷದಲ್ಲಿ ಮಾತ್ರ ಯೋಗ್ಯವೆನಿಸುವ ಆ ಪುರಾಣ (ಪಾಶುಪತಿ ಸ್ಮೃತಿಗಳ ಫಲ ಅದು ಅನಿಷ್ಟ ಫಲ ಅಂದರೆ ಮೋಕ್ಷೋಪಭೋಗ ಪ್ರತಿಬಂಧಕವಾದ್ದರಿಂದ ಅಲ್ಲಿ ಹೇಳಿದ ಕರ್ಮಾನುಷ್ಠಾನ ಮಾಡುವುದಕಿಂತಲೂ (ತ್ಯಾಗವೇ) ಮಾಡದೇ ಇರುವುದೇ ಯೋಗ್ಯ. ಯಾಕೆಂದರೆ 'ಅನುಪಲಬ್ಧೇಃ' ಪ್ರತ್ಯಕ್ಷವಾಗಿ ಅವು ಸಿಗದಿರುವುದರಿಂದ (ಶಾಶ್ವತ ಫಲ ಇಲ್ಲದಿರುವುದರಿಂದ) ಆ ವಾಕ್ಯಗಳು ಅಪ್ರಮಾಣವೆಂದು ಹೇಳುವುದೇ ಯೋಗ್ಯವೆಂದು ನಾವು ಅರ್ಥೈಸಿ ಕೊಳ್ಳಬೇಕು.

**೩) ಓಂ ಓಂ ಏತೇನಯೋಗಃ ಪ್ರತ್ಯುಕ್ತಃ ಓಂ**

'ಏತೇನ ಪಾಶುಪತಾದಿ ಸ್ಮೃತಿಗಳಿಂದ ಯಾವ ವಿಧವಾದ ಮಹಾಫಲ ಕಾಣ ದಿರುವುದರಿಂದ 'ಯೋಗ'. ಯೋಗಶಾಸ್ತ್ರವು ಪ್ರತ್ಯುಕ್ತಃ ಪೂರ್ಣವಾಗಿ ಅಲ್ಲಗ ಳೆಯಲ್ಪಟ್ಟಿದೆ (ನಿರಾಕರಿಸಲ್ಪಟ್ಟಿದೆ).

**೪) ಓಂ ಓಂ ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ಓಂ (ನ ವಿಲಕ್ಷ ಣತ್ವಾಧಿಕರಣಂ)**

'ಅಸ್ಯ ವೇದಾನುಸಾರಿಯಾದ ಪಂಚರಾತ್ರಾದಿ ಸ್ಮೃತಿಗಳಿಗೆ 'ವಿಲಕ್ಷಣ ತ್ವಾತ್' ಸ್ವತಃ ಪ್ರಮಾಣ್ಯರೂಪವಾಗಿರುವ ವೈಲಕ್ಷಣ್ಯವಿರುವುದರಿಂದಲೂ ವೇದ

ನಿತ್ಯತ್ವರೂಪ ವೈಲಕ್ಷಣ್ಯವಿದ್ದದ್ದರಿಂದಲೂ ಹಾಗೂ ಸ್ಮೃತಿಗಳಿಗೆ ಶ್ರುತ್ಯನುಸಾರಿತಾ ಇರುವ ವೈಲಕ್ಷಣ್ಯವಿರುವುದರಿಂದಲೂ ಶೈವಾದಿ ಸ್ಮೃತಿಗಳಂತೆ ಈ ಸ್ಮೃತಿಗಳ ವಿಷಯದಲ್ಲಿ ಅಪ್ರಮಾಣವೆಂದು ಹೇಳಲು ಬರುವುದಿಲ್ಲ. 'ತಥಾತ್ವಂ ಚ' ಮೇಲೆ ವರ್ಣನೆ ಮಾಡಿದ ವಿಲಕ್ಷಣ ಧರ್ಮವಿರುವುದರಿಂದ ಸ್ವತಃ ಪ್ರಮಾಣವಾಗಿದೆ ಹಾಗೂ 'ಶಬ್ದಾತ್' ವಾಚಾವಿರೂಪನಿತ್ಯನೂ ಇದೇ ಮೊದಲಾದ ವೇದಗಳಿಂದಲೂ ಪ್ರಾಮಾಣ್ಯ ಹಾಗೂ ವೈಲಕ್ಷಣ್ಯನಿಶ್ಚಿತವಾಗಿದೆ.

## ೫) ಓಂ ಓಂ ದೃಶ್ಯತೇ ತು ಓಂ

'ತು' ವಿಶೇಷವಾಗಿ ಫಲ (ಅಥ) ಪ್ರಾಪ್ತಿಯಾಗುವುದು 'ದೃಶ್ಯತೇ' ಫಲ ಪಡೆಯಲು ಯೋಗ್ಯರಾದ ವಿಶಿಷ್ಟಾಧಿಕಾರಿಗಳಿಗೆ ವೇದೋಕ್ತವಾದ ಫಲವು ಸಿಕ್ಕೇ ಸಿಗುತ್ತದೆ. ಆದ್ದರಿಂದ ಈ ಸ್ಮೃತಿಗಳು ಅಪ್ರಮಾಣವೆಂದು ಹೇಳಲು ಬರುವುದಿಲ್ಲ. ಪ್ರಮಾಣವೇ.

## ೬) ಓಂ ಓಂ ಅಭಿಮಾನವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಓಂ (ಅಭಿಮಾನ್ಯಧಿಕರಣಂ)

ನಿಶ್ಚಿತವಾಗಿಯೂ 'ಅಭಿಮಾನಿವ್ಯಪದೇಶಃ', 'ಮೃದಬ್ರವೀತ್' ಇವೇ ಮೊದಲಾದಲ್ಲಿ ಅಭಿಮಾನಿಯಾದ ಚೇತನ ನಿಮಿತ್ತವೆಂದೇ ಹೇಳುವುದೇ ವಿನಃ ಅಚೇತನಕ್ಕಲ್ಲ. ಯಾಕೆಂದರೆ ಮಣ್ಣು ಜಡವಾದ್ದರಿಂದ ಮಾತನಾಡಲು ಬರುವುದಿಲ್ಲ ಎಂಬ ಯುಕ್ತಿ ವಿರೋಧ ಬರುತ್ತದೆ. ಅದಕ್ಕೆ ವೇದ ಅಪ್ರಮಾಣವಲ್ಲವೆಂದಲ್ಲ. ಅಭಿಮಾನಿ ದೇವತೆಗಳಿಗೆ ದೇಹವಿರುವುದಿಲ್ಲ ಎಂಬುದು ಕೂಡುವುದಿಲ್ಲ. ದೇಹ ವಿದೆಯೆಂದರೆ ಆ ದೇಹ ಕಾಣುವುದಿಲ್ಲ. ಬೇರೆ ವಸ್ತುಗಳಲ್ಲಿ ಅಧಿಷ್ಠಾನನಿಮಿತ್ತ ಮಾತನಾಡುತ್ತದೆಂದರೆ ಅನೇಕ ದೇಹಗಳಲ್ಲಿ ಅಭಿಮನ್ಯವಾಗಿ ಅಧಿಷ್ಠಾತೃನೆನಿಸಿಕೊಂಡು ಇರುವುದು ಒಂದೇ ದೇಹಕ್ಕೆ ಹೇಗೆ ಕೂಡುತ್ತದೆ ಎಂದರೇ 'ವಿಶೇಷಃ'

ಸಾಮರ್ಥ್ಯ ವಿಶೇಷತೆ ಇರುವುದು ಮತ್ತು ಸರ್ವರಲ್ಲಿಯೂ ಅಭಿಮನ್ಯವಾದ ವ್ಯಾಪಕತ್ವ ಇರುವುದರಿಂದ ಕೂಡುತ್ತದೆ. ಅವುಗಳಿಂದ ಎಲ್ಲವೂ ಯೋಗ್ಯ ವೆಂದೆನಿಸುತ್ತದೆ.

**೭) ಓಂ ಓಂ ದೃಶ್ಯತೇ ಚ ಓಂ**

ಅಭಿಮಾನಿ ದೇವತೆಗಳಲ್ಲಿರುವ ಸಾಮರ್ಥ್ಯವನ್ನು ಯೋಗಿಗಳು ನೋಡು ತ್ತಲಿರುತ್ತಾರೆ. ಆದರಿಂದಲೂ ಪ್ರತ್ಯಕ್ಷ ವಿರೋಧವೆನ್ನಲು ಸಾಧ್ಯವೂ ಇಲ್ಲ.

**೮) ಓಂ ಓಂ ಅಸದಿತಿಚೇನ್ನಪ್ರತಿಷೇಧಮಾತ್ರತ್ವಾತ್ ಓಂ (ಅಸದಧಿಕರಣಂ)**

'ಅಸತ್' ಜಗತ್ತಿನಲ್ಲಿಯ ಪೂರ್ವವೇ ಇಲ್ಲ ಯಾಕೆಂದರೆ ಈಶ್ವರ ಜಗ ತ್ಕರ್ತಾ ಅಲ್ಲವೆಂದಲ್ಲ ಯಾಕೆಂದರೆ 'ಪ್ರತಿಷೇಧ ಮಾತ್ರತ್ವಾತ್' ಅಭಾವರೂಪ ಧರ್ಮ ಆತ್ಮವ್ಯತಿರಿಕ್ತವಾದ ಸ್ವರೂಪಭೂತವಾಗಿಯೇ 'ಇದು ಅಲ್ಲ' ಎಂಬ ನಿಷೇಧ ಬುದ್ಧಿ ವಿಷಯವಾಗಿದೆ ಎಂಬ ಅರ್ಥವು ತೋರುತ್ತದೆ.

**೯) ಓಂ ಓಂ ಅಪೀತೌತದ್ವತ್ಪ್ರಸಂಗಾದಸಮಂಜಸಂ ಓಂ**

'ಅಪೀತೌ' ಪ್ರಲಯ ಕಾಲದಲ್ಲಿ 'ತದ್ವತ್‌ಪ್ರಸಂಗಾತ್' ಇದೆಲ್ಲವೂ ಅಸತ್ ಎಂಬ ಸನ್ನಿವೇಶ ತೋರಿದರೆ 'ಅಸಮಂಜಸಂ' ಅಸದ್ಭೂತವಾದ ಜಗತ್ತಿನ ಕರ್ತೃತ್ವವು ಅತ್ಯಂತ ಅಸಮಂಜಸವಾಗಿರುತ್ತದೆ,(ಅಯುಕ್ತವಾಗಿದೆ) ಎಂಬ ಅರ್ಥ.

**೧೦) ಓಂ ಓಂ ನ ತು ದೃಷ್ಟಾಂತಭಾವಾತ್ ಓಂ**

'ತು' ನಿಶ್ಚಿತವಾಗಿಯೂ ಪ್ರಳಯಕಾಲದಲ್ಲಿ ಸರ್ವವೂ ಅಸತ್ತಾಗಿರುತ್ತ ದೆಂದು ಹೇಳುವುದು ಸರಿಯಲ್ಲ ಯಾಕೆಂದರೆ ಪ್ರಳಯಕಾಲದಲ್ಲಿ ಎಲ್ಲ ಪದಾರ್ಥಗಳೂ ಇದ್ದೇ ಇರುವುದರಿಂದ ಮತ್ತು ದೃಷ್ಟಾಂತವಿರುವುದರಿಂದ ಸರ್ವಾಸತ್ವ ಕೂಡವುದಿಲ್ಲ.

## ೧೧) ಓಂ ಓಂ ಸ್ವಪಕ್ಷದೋಷಾಚ್ಚ ಓಂ

'ಸ್ವಪಕ್ಷ' ಪ್ರಳಯದಲ್ಲಿ ಏನೂ ಇರುವುದಿಲ್ಲವೆಂಬ ಪಕ್ಷದಲ್ಲಿ 'ದೋಷಾತ್' ದೃಷ್ಟಾಂತವಿಲ್ಲವೆಂಬ ದೋಷದಿಂದ ಪ್ರಲಯಕಾಲಕ್ಕೆ ಎಲ್ಲ ಅಸತ್ ಎಂಬುವನ ಪಕ್ಷವು ದೋಷಯುಕ್ತವಾಗಿದೆ.

## ೧೨) ಓಂ ಓಂ ತರ್ಕಾಪ್ರತಿಷ್ಠಾನಾದಪ್ಯನ್ಯಥಾಽನುಮೇಯಮಿತಿಚೇದೇವಮಪ್ಯನಿರ್ಮೋಕ್ಷಪ್ರಸಂಗಃ ಓಂ

'ತರ್ಕಾಪ್ರತಿಷ್ಠಾನಾತ್' ದೃಷ್ಟಾಂತವಿಲ್ಲದಿರುವವೇ ಮೊದಲಾದ ತರ್ಕಗಳು ಅವ್ಯವಸ್ಥಿತವಾದ್ದರಿಂದ 'ಅನ್ಯಥಾಪಿ' ಸಿದ್ಧಾಂತ ಯುಕ್ತಿಗಳ ಪ್ರಕಾರದಿಂದ ಬೇರೆ ಯಾದ್ದರಿಂದಲೂ ವಿರುದ್ಧ ಕರ್ತಗಳಿಂದ ವಿಚಾರಗಳಿಂದ ಸಾಧನ ಮಾಡಬಹು ದೆಂದರೆ ಅದು ಸಾಧ್ಯವಿಲ್ಲ. ಯಾಕೆಂದರೆ ಈ ರೀತಿ ಇಷ್ಟು ತರ್ಕಗಳಿದ್ದರೂ ಅಪ್ರಮಾಣಗಳೆಂದು ತಿಳಿಯುವುದು. 'ಅನಿರ್ಮೋಕ್ಷಪ್ರಸಂಗಃ' ಎಲ್ಲ ಸಿದ್ಧಾಂತ ದವರೂ ತಾವು ಮಾಡಿದ ಶಾಸ್ತ್ರಗಳಿಂದ ಪ್ರಯೋಜನವಿಲ್ಲದಿರುವುದಕ್ಕೆ ಅದರಿಂದ ಸಾಧಿತವಾಗುವ ಮೋಕ್ಷ ಲಭಿಸದಿರುವುದರಿಂದ ಆ ಶಾಸ್ತ್ರವನ್ನು ವಿವಾದ ವಿಷಯಕ್ಕೆ ಸಾಧನಕ್ಕೆ ಕೇವಲ ಅನುಮಾನದಿಂದಲೇ ಸಿದ್ಧ ಮಾಡುವುದೆಂದರೆ ಅಪ್ರಾಮಾಣ್ಯವೇ ತೋರುತ್ತದೆ ವಿನಃ ಪ್ರಮಾಣ್ಯತೆ ತೋರುವುದಿಲ್ಲ.

## ೧೩) ಓಂ ಓಂ ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ ಓಂ

'ಏತೇನ' ನಮ್ಮ ಮತ್ತು ಪರಪಕ್ಷಗಳಲ್ಲಿ ದೃಷ್ಟಾಂತವಿದೆ ಅಥವಾ ಇಲ್ಲವೆಂಬ ಸಂದಿಗ್ಧ ಕಾರಣ (ಹೇತು) ದಿಂದ 'ಅಪರಿಗ್ರಹಾ' ವೇದಪ್ರಾಮಾಣ್ಯ ಒಪ್ಪದಿರುವ ಅವುಗಳ (ವೇದ) ವಿರುದ್ಧವಾದ 'ಶಿಷ್ಟಾಃ' ಉಳಿದ ಜೀವರಿಗೆ ಕಾಲಕ್ಕೆ ಸ್ವಭಾವವೇ ಕರ್ತಾ ಎಂಬ ಪಕ್ಷಗಳು ಕೂಡ 'ವ್ಯಾಖ್ಯಾತಾಃ' ವಿರುದ್ಧವಾಗಿ ತೋರು ವುದರಿಂದ ದೂಷಿತವಾಗಿವೆ.

## ೧೪) ಓಂ ಓಂ ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್ ಓಂ (ಭೋಕ್ತ್ರಧಿಕರಣಂ)

'ಭೋಕ್ತ್ರಾಪತ್ತೇಃ' ಭೋಕ್ತಾ ಆದ ಜೀವನಿಗೆ 'ಪರೇ ವ್ಯಯೇಸರ್ವ ಏಕೀ ಭವಂತಿ' ಈ ವಾಕ್ಯಗಳಿಂದ ಬ್ರಹ್ಮಭಾವವು ತೋರುತ್ತಿರುವುದರಿಂದ ಅವಿಭಾಗಃ ಜೀವಬ್ರಹ್ಮರ ಐಕ್ಯವೇ ಇದೆ. ಅದಕ್ಕೆ ಅಲ್ಪನಾದ ಜೀವನಿಂದ ಅಭಿನ್ನನಾದ ಬ್ರಹ್ಮನಿಗೆ ಜಗತ್ಕಾರಣತ್ವವೂ ಕೂಡಲಾರದೆಂದರೆ? ಇಲ್ಲ ಕೂಡುತ್ತದೆ. ಯಾಕೆಂದರೆ 'ಸ್ಯಾತ್ ಲೋಕವತ್' ಜಗತ್ತಿನಲ್ಲಿ ನೀರಿನಲ್ಲಿ ಬೇರೆ ನೀರಿನ ಏಕೀಭಾವ ಒಂದು ಎನ್ನುವ ಹಾಗೆ ವ್ಯವಹಾರವಿದ್ದಂತೆ. ಹಾಗೆಯೇ ಜೀವ-ಬ್ರಹ್ಮರು ಒಂದೇ ಸ್ಥಾನದಲ್ಲಿರುವುದರಿಂದ (ಸ್ಥಾನೈಕ್ಯ) ಜೀವ ಬ್ರಹ್ಮರಲ್ಲಿ ಒಂದು ಎಂಬ ವ್ಯವಹಾರವು 'ಸ್ಯಾತ್' ಕೂಡಬಹುದು (ಉಪಚರಿತ). ಅದಕ್ಕೆ ಹಿಂದಿನ ದೋಷ ಕೂಡಲಾರದು. (ಇಲ್ಲ)

## ೧೫) ಓಂ ಓಂ ತದನನ್ಯತ್ವಮಾರಂಭಣ ಶಬ್ದಾದಿಭ್ಯಃ ಓಂ ( ಆರಂಭಣಾಧಿಕರಣಂ)

'ತದನನ್ಯತ್ವಂ' ಸ್ವತಂತ್ರಕಾರಣನಾದ ಜೀವ-ಬ್ರಹ್ಮರ ಅಭೇದವೇ ಹೇಳಬಹುದು. ಯಾಕೆಂದರೆ ಆರಂಭಣ 'ಶಬ್ದಾದಿಭ್ಯಃ' ಫಲಗಳಿಂದ ಉಪಲಕ್ಷಿತವಾದ (ತೋರುವ) 'ಕಿಂಸ್ವಿದಾಸೀತ್' ಎಂಬ ಅಧಿಷ್ಠಾನಾದಿಗಳನ್ನು ಆಕ್ಷೇಪ ಮಾಡುವ ವಾಕ್ಯಗಳಿಂದ ಹಾಗೂ ಸ್ವಾತಂತ್ರ್ಯರೂಪಯುಕ್ತಿಗಳಿಂದಲೂ ಕೂಡಬಹುದು.

## ೧೬) ಓಂ ಓಂ ಭಾವೇಚೋಪಲಬ್ಧೇಃ ಓಂ

ಪರಮೇಶ್ವರನಿಂದ ಭಿನ್ನವಾದ ಸ್ವತಂತ್ರ ಸಾಧನವಿದ್ದರೆ ಭಾವೇ (ಇದ್ದರೇ) 'ಉಪಲಬ್ಧೇಃ' ಕಾಣಿಸುವ ಪ್ರಸಂಗವಿರಬಹುದು. ಆದರೆ ಸ್ವತಂತ್ರಸಾಧನವು ಪರಬ್ರಹ್ಮವ್ಯತಿರಿಕ್ತವಾದದ್ದು ಇಲ್ಲವೇ ಇಲ್ಲ ( ಸರ್ವಥಾ ಅಭಾವವು).

**೧೭) ಓಂ ಓಂ ಸತ್ವಾಚ್ಚಾವರಸ್ಯ ಓಂ**

ದಾರ್ಢ್ಯತೆಯ ಸಲುವಾಗಿ 'ಅವರಸ್ಯ', ಅಸ್ವತಂತ್ರವಾದ ಸಾಧನಗಳು 'ಸತ್ವಾತ್' - 'ಅದ್ಭ್ಯಃ ಸಂಭೂತಃ' ಇದೇ ಮೊದಲಾದ ವಾಕ್ಯಗಳು ತತ್ಪರಗಳಾಗಿ ರುವುದರಿಂದ ಆ ವಾಕ್ಯಗಳಿಗೆ ವಿರೋಧವಿಲ್ಲ.

**೧೮) ಓಂ ಓಂ ಅಸದ್ವ್ಯಪದೇಶಾನ್ನೇತಿಚೇನ್ನಧರ್ಮಾಂತರೇಣ ವಾಕ್ಯ ಶೇಷಾತ್ ಓಂ**

'ಅಸದ್ವ್ಯಪದೇಶಾತ್', 'ನಾಸದಾಸೀತ್' ಈ ವಾಕ್ಯಗಳಿಂದ ಅಸತ್ವೇನ ತೋರುತ್ತಾ ಇರುವುದರಿಂದ (ವ್ಯಪದೇಶಾತ್) ಬೇರೆ ವಾಕ್ಯಕ್ಕೆ ಸತ್ವವು ಕೂಡಲಾರದೆಂದರೆ ಅದು ಸರಿಯಲ್ಲ. ಯಾಕೆಂದರೆ ಅದರ ನಿಷೇಧವು 'ಧರ್ಮಾಂತರೇಣ' ಅಸ್ವತಂತ್ರ ಮೊದಲಾದ ವಿಶೇಷಧರ್ಮಗಳಿರುವುದರಿಂದ ಕೂಡುತ್ತದೆ. ಯಾಕೆಂದರೆ 'ವಾಕ್ಯಶೇಷಾತ್', 'ತಮ ಆಸೀತ್' ಮೊದಲಾದ ಉಳಿದ ವಾಕ್ಯಗಳಿಂದ.

**೧೯) ಓಂ ಓಂ ಯುಕ್ತೇಃ ಶಬ್ದಾಂತರಾಚ್ಚ ಓಂ**

ಪ್ರಳಯದಲ್ಲಿ 'ಯುಕ್ತಃ', ಮನುಷ್ಯನು ನಡೆಯಲು ಬಂದರೂ ಲೀಲೆಯಿಂದ ಕುಂಟುವ ಹಾಗೆಯೇ ಭಗವಂತನೂ ಕೂಡ ಲೀಲೆಯಿಂದ ತನ್ನ ಅಧೀನವಾದ ಸಾಧನೆಗಳಿಗೆ ಅವಲಂಬಿಯಾಗಿರುವಂತೆ ತೋರಿಸಿಕೊಳ್ಳುವುದು ಯುಕ್ತವೇ ಆಗಿದೆ.

**೨೦) ಓಂ ಓಂ ಪಟವಚ್ಚ ಓಂ**

ಬಟ್ಟೆಯ ಉತ್ಪತ್ತಿಯಂತೆ ಜಗತ್ತಿನ ಸೃಷ್ಟಿಯೂ ಕರ್ತೃವಿನಿಂದ ಭಿನ್ನ ಸಾಧನಾಂತರಗಳಿಂದ ಸಾಧ್ಯವಾಗುತ್ತದೆ.

## ೨೧) ಓಂ ಓಂ ಯಥಾಪ್ರಣಾದಿಃ ಓಂ

ಯಾವರೀತಿಯಿಂದ ಪ್ರಾಣ, ದೇಹ, ಇಂದ್ರಿಯಾದಿಗಳಲ್ಲಿ ಸ್ವಾತಂತ್ರ್ಯವಿರುವುದಿಲ್ಲ. ಅದರಂತೆ ಪ್ರಕೃತ್ಯಾದಿ ಸಾಧನಾಂತರಗಳಿಂದಲೂ ಕೂಡ ಎಂಬ ಅರ್ಥದಂತೆ.

## ೨೨) ಓಂ ಓಂ ಇತರವ್ಯಪದೇಶಾದ್ಧಿತಾಧಿಕರಣಾದ್ಯೋಷಪ್ರಸಕ್ತಿಃ ಓಂ (ಇತರವ್ಯಪದೇಶಾಧಿಕರಣಂ)

ಹೀಗೇ ಆದರೆ ಮುಂದೆ ಕೂಡ ಇತರ 'ವ್ಯಪದೇಶಾತ್', 'ಜೀವಾದ್ಭವಂತಿ' ಎಂಬ ವೇದವಾಕ್ಯದಲ್ಲಿ ಹೇಳಿದಂತೆ ಜೀವನೇ ಕರ್ತಾ ಆಗಿರುವನು. ಈಶ್ವರನಲ್ಲವೆಂದರೆ 'ಹಿತಾಕರಣಾದಿ ದೋಷಪ್ರಸಕ್ತಿಃ' ಜೀವನಿಂದ ಹಿತ ಮಾಡುವುದು ಅಹಿತ ಮಾಡುವುದು ಎಂಬ ದೋಷ ಬರುವ ಪ್ರಸಂಗವಿರುವುದರಿಂದ ಅದು ಕೂಡುವುದಿಲ್ಲ. ಯಾಕೆಂದರೆ, ಜೀವನಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದ ಪೂರ್ವೋಕ್ತ ವಿಷಯ ಕೂಡುವದಿಲ್ಲ ಈ ಎಲ್ಲವೂ ಹಿತ-ಅಹಿತಗಳು ಜೀವನಲ್ಲಿದ್ದ ಕಾರಣ ಜೀವ ಸ್ವತಂತ್ರ ಕರ್ತಾ ಎಂದು ಹೇಳಲು ಬರುವುದಿಲ್ಲ.

## ೨೩) ಓಂ ಓಂ ಅಧಿಕಂತು ಭೇದನಿರ್ದೇಶಾತ್ ಓಂ

ಜೀವನಕಿಂತಲೂ ಬ್ರಹ್ಮನಾದರೋ 'ತು' -ಅತ್ಯಂತ ಭಿನ್ನನೆಂದೇ ಮತ್ತು 'ಅಧಕಂ' ಶೇಷ್ಠನು, 'ಭೇದನಿರ್ದೇಶಾತ್' ಬ್ರಹ್ಮನು 'ಶ್ರೋತಾಮಂತಾ' ಇತ್ಯಾದಿ ವೇದಗಳಲ್ಲಿ ಶ್ರೋತೃತ್ವಾದಿ ವಿಶೇಷ ಗುಣರೂಪಭೇದಯುಕ್ತನಾಗಿರುವನೆಂದು ನಿರ್ದೇಶಿಸುವುದರಿಂದ.

## ೨೪) ಓಂ ಓಂ ಅಶ್ಮಾದಿವಚ್ಚತದನುಪಪತ್ತಿಃ ಓಂ

ಜೀವನು ಚೇತನನಾಗಿದ್ದರೂ ಕೂಡ ಕಲ್ಲಿನಂತೆ 'ಅಶ್ಮಾದಿವತ್' ಜೀವನಲ್ಲ. ಸ್ವತಂತ್ರಕರ್ತೃತ್ವಾದಿಗಳು 'ತದನುಪಪತ್ತಿಃ' ಪರಾಧೀನನಾದವನಿಗೆ ಸ್ವತಂತ್ರಕರ್ತೃತ್ವಾದಿಗಳು ಜೀವನಿಗೆ ಕೂಡುವುದಿಲ್ಲ.

## ೨೫) ಓಂ ಓಂ ಉಪಸಂಹಾರದರ್ಶನಾನ್ನೇತಿಚೇನ್ನಕ್ಷೀರವದ್ಧಿ ಓಂ

'ಉಪಸಂಹಾರದರ್ಶನಾತ್' ಜೀವನಿಂದ ಪ್ರಾರಂಭಿತ ಕಾರ್ಯದ ಉಪಸಂಹಾರ ಸಮಾಪ್ತಿ ಆಗುವುದು ಕಂಡು ಬರುವುದರಿಂದ ಅವನೇ ಕರ್ತಾ ಬ್ರಹ್ಮನಲ್ಲವೆಂದರೆ ಅದು ಸರಿಯಲ್ಲ. ಯಾಕೆಂದರೆ, 'ಕ್ಷೀರವತ್' ಆಕಳುದಲ್ಲಿ ಕಾಣಸುವ ಹಾಲು ಹೇಗೆ ವಾಯುವಿನಿಂದ ರಚಿಸಲ್ಪಡುತ್ತದೋ ಹಾಗೆಯೇ ಜೀವನ ನಿಮಿತ್ತವಾಗುವ ಸಮಾಪನೆಯೂ ಪರಮಾತ್ಮನಿಂದಲೇ ರಚಿತವಾದದ್ದೆಂದು ತಿಳಿಯಬೇಕು. ಹಾಗೂ 'ಅನ್ನಂ' ಇತ್ಯಾದಿ ಪ್ರಮಾಣ ಪ್ರಸಿದ್ಧಿಯಿಂದಲೂ ಬ್ರಹ್ಮನೇ ಮುಖ್ಯಕರ್ತಾ ಎಂದು ಸೂಚಿತವಾಗಿದೆ.

## ೨೬) ಓಂ ಓಂ ದೇವಾದಿವದಪಿ ಲೋಕೇ ಓಂ

ಈ ರೀತಿಯಾದ ಪರಬ್ರಹ್ಮನಲ್ಲಿಯೂ ಕೂಡ 'ದೇವಾದಿವತ್' ಅದೃಶ್ಯತ್ವಾದಿಗಳು ಯೋಗ್ಯವೇ (ಯಾಕೆಂದರೆ) ಆ ಅದೃಶ್ಯತ್ವ ಹೇಗೆಂದರೆ 'ಲೋಕೇ' ಈ ಜಗತ್ತಿನಲ್ಲಿ ಭೂತ ಪಿಶಾಚ ಆದಿಗಳಲ್ಲಿಯೂ ಕೂಡ ಕಾಣಿಸಿಕೊಳ್ಳದಿರುವಂತಹ ಶಕ್ತಿ ಇದ್ದ ಮೇಲೆ ಸರ್ವೇಶ್ವರನಾದ ಪರಬ್ರಹ್ಮನಲ್ಲಿ ಯಾವುದು ಅಸಾಧ್ಯವಾದದ್ದಾಗಿದೆ.

## ೨೭) ಓಂ ಓಂ ಕೃತ್ಸ್ನಪ್ರಸಕ್ತಿರ್ನಿರವಯವತ್ವ ಶಬ್ದಕೋಪೋವಾ ಓಂ

'ವಾ' ಪಂಚಭೇದದಿಂದ ದೋಷಪರಿಹಾರ ಸೂಚಕವು ಜೀವ ಸ್ವತಃ ಕರ್ತಾ ಎನಿಸಿಕೊಂಡು ಹಾಗೆ ಸ್ವತಃ ಮುಂದಕ್ಕೆ ಹೋಗುವನಾದರೆ 'ಕೃತ್ಯಪ್ರಸಕ್ತಿಃ' ಹುಲ್ಲು ಮೊದಲಾದವುಗಳ ಪ್ರವೃತ್ತಿಯಲ್ಲಿ ಸರ್ವಸಾಮರ್ಥ್ಯಪ್ರೇರಕವಾಗಿ ಹಾಗೆ ಸರ್ವಸಾಮರ್ಥ್ಯದಂತೆ ಆ ಕಡೆ ಪ್ರವೃತ್ತನಾಗಬೇಕಾದೀತು. 'ನಿರವಯವತ್ವಶಬ್ದಕೋಪಿ' ಪ್ರಸಕ್ತಿ ಬಾರದಿರಬಹುದು ಮತ್ತು 'ನಿತ್ಯೋ ನಿರವಯವಃ' ಇವೇ ಮೊದಲಾದ ಶ್ರುತಿವಿರೋಧವು ಬರುವುದರಿಂದ ಪಕ್ಷಭೇದದಿಂದ ದೋಷ ನಿವಾರಣೆ.

**೨೮) ಓಂ ಓಂ ಶ್ರುತೇಸ್ತು ಶಬ್ದ ಮೂಲತ್ವಾತ್ ಓಂ ( ತೃತೇಸ್ತು ಶಬ್ದಮೂಲತ್ವಾಧಿಕರಣಂ)**

ಶಬ್ದ (ವೇದ)ಕ್ಕೆ 'ನಿತ್ಯೋ ನಿರವಯವಃ' ಇದು ಈಶ್ವರನಿಗೆ ಸಂಬಂಧಿತವಾದ 'ಕೃತ್ಯಪ್ರಸಕ್ತಿ' ಎಂದರೆ ಜೀವಕರ್ತೃನಾಗಿದ್ದಾನೆಯೆಂಬ ಯುಕ್ತಿ ವಿರೋಧರೂಪದೋಷ ಬರಲಾರದು. ಯಾಕೆಂದರೆ 'ಶ್ರುತೇಸ್ತು' 'ಯೋಸೌ ವಿರುದ್ಧ' ಎಂಬ ಶೃತಿಯ ವಿರೋಧವೆಂದರೆ ಹಾಗೂ ವಿರೋಧಶಾಂತಿಯು ಹೇಗೆಂದರೆ 'ಶಬ್ದಮೂಲತ್ವಾತ್' ಈಶ್ವರ ಮತ್ತು ಅವನ ಗುಣಧರ್ಮಾ ಎಂಬ ಪ್ರಮಾಣಗಳ ಯುಕ್ತಿಯಿಂದ ಕಾಣದಿದ್ದು ಯಾವುದು ಕಾಣುವುದಿಲ್ಲವೋ ಅಂತಹ ಯುಕ್ತಿವಿರುದ್ಧವೆಂದು ಹೇಳಲಾಗುವುದಿಲ್ಲ. ಆದರೆ ಜೀವನಲ್ಲಿ ಹಾಗಲ್ಲ ಜೀವನು ಅನ್ಯ ಪ್ರಮಾಣಗಳಿಂದಲೂ ಗಮ್ಯನಾಗುತ್ತಿರುವುದರಿಂದ.

**೨೯) ಓಂ ಓಂ ಆತ್ಮನಿಚೈವಂ ವಿಚಿತ್ರಾಶ್ಚ ಹಿ ಓಂ**

'ಹಿ' ಅತ್ಯಂತ ಪ್ರಸಿದ್ಧವಾಗಿಯೇ ಇರುವುದರಿಂದ ಒಟ್ಟು ಪ್ರಸಿದ್ಧವಾದ ಆತ್ಮನಲ್ಲ. 'ಆತ್ಮನಿ' ಪರಬ್ರಹ್ಮನಲ್ಲಿಯೇ ಎಲ್ಲ ಯುಕ್ತಿವಿರೋಧ ಪರಿಹಾರ ವಿಚಿತ್ರಾ ಅತ್ಯಂತ ಆಸಕ್ತವಾಗದಿರುವ ಅಚಿಂತ್ಯವಾದ ಅದ್ಭುತವಾದ ವೇದಪ್ರಸಿದ್ಧವಾದ ಶಕ್ತಿಯುಳ್ಳವನು ಜೀವನಲ್ಲ ಪರಬ್ರಹ್ಮನೇ. ಇದರಿಂದ ಜೀವಕರ್ತೃತ್ವ ಪಕ್ಷವು ಯುಕ್ತಿವಿರುದ್ಧವಾಗಿರುತ್ತದೆ. ಈಶ್ವರ ಪಕ್ಷದಲ್ಲಿ ವಿರೋಧವಿಲ್ಲ.

**೩೦) ಓಂ ಓಂ ಸ್ವಪಕ್ಷದೋಷಾಚ್ಚ ಓಂ**

'ಚ' ದಾರ್ಢ್ಯತೆಯ ಸೂಚಕವು ಮತ್ತು 'ಏದೋಷಾ' ಎಂಬ ಶೃತಿಯಿಂದ ಜೀವ ಪಕ್ಷದಲ್ಲಿ ಮಾತ್ರ ಯುಕ್ತಿವಿರೋಧವನ್ನು ತೋರಿಸುತ್ತದೆಯೇ ವಿನಃ ಈಶ್ವರ ಪಕ್ಷದಲ್ಲಿ ಇದನ್ನು ತೋರಿಸಲು ಬರುವುದಿಲ್ಲ ಅಂದರೆ ಈಶ್ವರನಲ್ಲಿ ಅದೋಷತೆ ಇರುತ್ತದೆ.

## ೩೦) ಓಂ ಓಂ ಸರ್ವೋಪೇತಾ ಚ ತದ್ದರ್ಶನಾತ್ ಓಂ

ಯಾಕೆ ದೋಷ ಬರುವುದಿಲ್ಲವೆಂದರೆ ಪರಮಾತ್ಮನು ಕೇವಲ ಸಾಮಾನ್ಯ ಶಕ್ತಿಯುಳ್ಳವನಲ್ಲ ಆದರೆ 'ವಿಚಿತ್ರಶಕ್ತಿಮಾನ್' ಆದರೆ 'ಸರ್ವೋಪೇತಾ' ಸರ್ವ ವಿಷಯ ಕಾಲಗಳಲ್ಲಿಯೂ (ಸಮಾನ) ಶಕ್ತಿವಂತನೂ ಕೂಡ ಆಗಿರುವನು. ಯಾಕೆಂದರೆ 'ತದ್ದರ್ಶನಾತ್' ಸರ್ವೇರ್ಯುಕ್ತಾ ಇದೆ. ಆದಿ ಅಂತಹ ಶೃತಿಗಳಿಂದ ಆದರಿಂದ ಈಶ್ವರನಲ್ಲಿ ಯುಕ್ತಿವಿರೋಧವನ್ನು ಸರ್ವಥಾ ವಿಚಾರ (ಶಂಕೆಯನ್ನೂ) ಮಾಡಬಾರದು.

## ೩೨) ಓಂ ಓಂ ವಿಕರಣತ್ವಾನ್ನೇತಿಚೇತ್ತದುಕ್ತಮ್ ಓಂ

'ನ' ವಿಚಾರ ಮಾಡಬಾರದು - 'ವಿಕರಣತ್ವಾತ್', 'ಅಪಾಣಿಪಾದೌ' ಎಂಬ ಶೃತಿಯಿಂದ ಯುಕ್ತಿಗಳಿಂದಲೂ ಈಶ್ವರನು ಹಸ್ತಪಾದ ಮೊದಲಾದ ಇಂದ್ರಿಯ ಶೂನ್ಯನೆಂದು ತಿಳಿದು ಬರುತ್ತದೆ. 'ನೇತಿಚೇತ್' ಆದ್ದರಿಂದ ಈಶ್ವರನಿಗೆ ಕರ್ತೃತ್ವವಿದೆ ಎಂಬುದು ಸರಿಯಲ್ಲವೆಂಬುದು ಯುಕ್ತವಲ್ಲ. ಯಾಕೆಂದರೆ 'ತದುಕ್ತಂ'-'ತಸ್ಮಿನ್ನೇತಸ್ಯ' ಇವೇ ಮೊದಲಾದ ವೇದಗಳಿಂದ ಜಗತ್‌ಕರ್ತೃತ್ವವಿಲ್ಲವೆಂದರೆ ಪ್ರಾಕೃತೇಂದ್ರಿಯವಿಷಯಗಳಿಂದಲೇ ವಿನಃ ತೇಜೋಮಯದಿಂದವೆಂದಲ್ಲ.

## ೩೩) ಓಂ ಓಂ ನ ಪ್ರಯೋಜನವತ್ವಾತ್ ಓಂ (ನ ಪ್ರಯೋಜನಾಧಿಕರಣಂ)

ಪರಮೇಶ್ವರನಿಗೆ ಸೃಷ್ಟಿಮಾಡಲು ಪ್ರವೃತ್ತಿಯಾಗದಿರಲಿ ಯಾಕೆಂದರೆ ತನಗೆ ಯಾವುದೇ ಪ್ರಯೋಜನವಾಗಲೆಂದಲ್ಲ ಮತ್ತು ಯಾಕೆಂದರೆ 'ಪ್ರಯೋಜನವತ್ವಾತ್' ಪೂರ್ಣಾನಂದಿಯಾಗುವುದರಿಂದ ಪಡೆದು ಪಡೆಯಲು ಇನ್ನೊಬ್ಬರಿಗೆ ತೃಪ್ತಿ ಪಡಿಸಲು ಮಾತ್ರ.

## ೩೪) ಓಂ ಓಂ ಲೋಕವತ್ತುಲೀಲಾಕೈವಲ್ಯಂ ಓಂ

'ತು' ನಿಶ್ಚಿತವಾಗಿ 'ಲೋಕವತ್' ಜಗತ್ತಿನಲ್ಲಿ ಮತ್ತ (ತೃಪ್ತ)ನಾದವನು ಹೇಗೆ ನೃತ್ಯಗಾನಾದಿಗಳನ್ನು ಮಾಡುತ್ತಾನೋ ಹಾಗೆಯೇ ಈಶ್ವರನೂ ತನಗೆ ಪ್ರಯೋಜನವಿಲ್ಲದಿದ್ದರೂ ಕೇವಲ ಕ್ರೀಡಾರೂಪದಿಂದ ಸೃಷ್ಟಿ ಮಾಡುವನು.

## ೩೫) ಓಂ ಓಂ ವೈಷಮ್ಯ ನೈಘೃಣ್ಯೇನ ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ ಓಂ (ವೈಘೃಣ್ಯಾಧಿಕರಣಂ)

ಭಗವಂತನಲ್ಲಿ ಸ್ವಾತಂತ್ರ್ಯವಿದ್ದು ಜೀವರಿಗೆ ಫಲ ಕೊಡುವುದಕ್ಕೆ ಅವರವರ ಕರ್ಮಾನುಸಾರವಾಗಿ ಕೊಡುವನೇ ವಿನಃ ನಿರ್ನಿಮಿತ್ತವಾಗಿಯೇ ಫಲ ಕೊಡುವನು ಯಾಕೆಂದರೇ 'ವೈಷಮ್ಯನೈಘೃಣ್ಯೇಃ' - ವ್ಯತ್ಯಾಸ ಹಾಗೂ ನಿರ್ದಯತನಗಳು ಅವನಲಿಲ್ಲ. ಯಾಕೆಂದರೆ 'ಸಾಪೇಕ್ಷತ್ವಾತ್' ದೇವರು -ಜೀವಿಗಳು ಮಾಡುವ ಕರ್ಮ ಪ್ರಕಾರ ಫಲ ಕೊಡುತ್ತಾನೆ. ಅದು ಹೇಗೆಂದರೆ 'ಹಿ' ನಿಶ್ಚಿತವಾಗಿಯೂ 'ಪುಣ್ಯೇನಪುಣ್ಯಂ' - ಇತ್ಯಾದಿ ಶೃತಿಗಳಿಂದ 'ತಥಾದರ್ಶಯತಿ' - ಹಾಗೆ ವರ್ಣನೆ ಮಾಡುತ್ತದೆ ವೇದವು ಎಂಬ ಅರ್ಥ ತೋರುತ್ತದೆ.

## ೩೬) ಓಂ ಓಂ ನ ಕರ್ಮಾವಿಭಾಗಾದಿತಿಚೇನಾದ್ಗಿತ್ವಾತ್ ಓಂ

ದೇವರಲ್ಲಿ ವೈಷ್ಮಮ್ಯಾದಿಗಳಿಲ್ಲವೆಂಬುದನ್ನು ಹೀಗೆ ವಿಶದೀಕರಿಸುತ್ತಾರೆ. ದೇವರಿಗೆ ಅಪೇಕ್ಷಿತ ಕರ್ಮಜೀವನಲ್ಲಿಲ್ಲದಿರಬಹುದೆಂದು ವಿಶಿಷ್ಟವಾಗಿ ನಿಷೇಧಿಸಿದರೆ, ಅದು 'ಅವಿಭಾಗಾತ್' - ಆ ಕರ್ಮಗಳನ್ನು ಅಸ್ವತಂತ್ರವಸ್ತುಗಳಿಂದ ವಿಭಾಗ ಮಾಡದಿರುವುದರಿಂದ ಮತ್ತು ಅವು ಅಸ್ವತಂತ್ರವಾಗಿರುವುದರಿಂದಲೂ ಮತ್ತು ತನ್ನ ಅಧೀನವಾದ ಕರ್ಮಗಳಕಿಂತಲೂ ವೈಷಮ್ಯಾದಿಗಳು ಅಪರಿಹಾರವಾಗಿರುವುದರಿಂದಲೂ ಬೇರೆ ಎಂದರೇ 'ಇತಿಚೇನ್ನ' ಯಾಕೆಂದರೆ 'ಅನಾದಿತ್ವಾತ್' - ಕರ್ಮಪಾರಂಪರ್ಯ ಅನಾದಿಯಾಗಿರುವುದರಿಂದಲೂ ಕೂಡ

ಎಂದರ್ಥ. ಮತ್ತು ಈಶ್ವರನು ಜೀವಿಗಳ ಮೊದಲಿನ ಕರ್ಮಗಳನ್ನು ನೋಡಿ ಮುಂದಿನ ಕರ್ಮಗಳನ್ನು ಅವರ (ಜೀವಿಗಳ) ಕಡೆಯಿಂದ ಮಾಡಿಸುತ್ತಾನೆ. ಇದರಿಂದ ಕರ್ಮಪ್ರಕಾರವಾಗಿಯೇ ಫಲವನ್ನು ಕೊಡುವನೆಂದರೆ ವೈಷಮ್ಯಾದಿದೋಷಗಳು ಪರಮೇಶ್ವರನಲ್ಲಿ ಬರುವುದಿಲ್ಲ.

## ೩೭) ಓಂ ಓಂ ಉಪಪದ್ಯತೇಚಾಪ್ಯುಪಲಭ್ಯತೇ ಚ ಓಂ

ದೇವರು ಫಲ ಕೊಡಲು ಜೀವಿಗಳ ಕರ್ಮಾನುಸಾರವೇ ಎಂಬುದು ಕೂಡುತ್ತದೆ. 'ಉಪಪದ್ಯತೇ' - ಜೀವಕರ್ಮಗಳು ಈಶ್ವರಾಧೀನವೇ ಮತ್ತು ಕೂಡ ತನ್ನ ಅಧೀನವಾದ ಕರ್ಮಾದಿಗಳಲ್ಲಿ ಅಪೇಕ್ಷಾನುಸಾರವೆಂದರೆ ವೈಷಮ್ಯಾದಿಗಳು ಬಂದಂತಾಗುತ್ತದೆ ಎಂದರೆ ಹೇಳಿದರು 'ಉಪಲಭ್ಯತೇ ಚ' ನಾರಾಯಣನು 'ಸ ಕಾರಯೇತ್' ಇತ್ಯಾದಿ ವೇದವಾಕ್ಯಗಳಿಂದ ದೇವರು ತೋರಿಸುವ ಆ ವೈಷಮ್ಯಾದಿಗಳು ದೋಷವಾಗಿ ಕಾಣಿಸುವುದಿಲ್ಲ. ಆದರೆ ಅದೂ ಗುಣವಾಗಿಯೇ ತೋರುತ್ತದೆ.

## ೩೮) ಓಂ ಓಂ ಸರ್ವಧರ್ಮೋಪಪತ್ತೇಶ್ಚ ಓಂ ( ಸರ್ವಧರ್ಮೋಪಪತ್ಯಧಿಕರಣಂ)

ದೇವರಲ್ಲಿರುವ ದೋಷರಹಿತವಾದ ಗುಣಗಳು 'ಸರ್ವೇಷಾಧೇ ರ್ಮಾಣಾಂ': ಸ್ವಾತಂತ್ರ್ಯಾದಿರೂಪವಾದ ಗುಣಗಳು ಬ್ರಹ್ಮನಲ್ಲಿ ಯೋಗ್ಯ ರೀತಿ ಇರುವುದರಿಂದಲೂ ಆ ಜ್ಞಾನಾನಂದಾದಿ ಗುಣಪೂರ್ಣನಾಗಿರುವುದರಿಂದ ಆ ಪರಬ್ರಹ್ಮನಲ್ಲಿ ಯುಕ್ತಿವಿರೋಧವಿದೆ ಎಂದು ವಿಚಾರವನ್ನೂ ಮಾಡಬಾರದು ಎಂದರ್ಥವು.

ಇತಿ ಶ್ರೀಜಗನ್ನಾಥಯತಿಕೃತಾಯಾಂ ಸೂತ್ರದೀಪಿಕಾಯಾಂ ದ್ವಿತೀಯಾಧ್ಯಾಯಸ್ಯ ಪ್ರಥಮ ಪಾದಃ ಉಮರ್ಜಿ ಪ್ರಹ್ಲಾದಕೃತ ಸೂತ್ರದೀಪಿಕೆಯ ಕನ್ನಡಾನುವಾದದ ದ್ವಿತೀಯಾಧ್ಯಾಯದ ಪ್ರಥಮ ಪಾದ ಸಮಾಪ್ತಿ.

## ದ್ವಿತೀಯಾಧ್ಯಾಯಸ್ಯ ದ್ವಿತೀಯ ಪಾದಃ

### ೧) ಓಂ ಓಂ ರಚನಾನುಪಪತ್ತೇಶ್ಚ ನಾನುಮಾನಂ ಓಂ (ರಚನಾನುಪಪತ್ಯಧಿಕರಣಂ)

ಊಹೆ ಮಾಡುವುದೇ ಅನುಮಾನವು (ಅನುಮೀಯತೆ) ನಿರೀಶ್ವರ ಸಾಂಖ್ಯರು ಊಹೆ ಮಾಡುವಂತೆ ಪ್ರಧಾನವೇ (ಜಡ) ಜಗತ್‌ಕರ್ತಾ ಎಂದು ಹೇಳುವುದು ಸರಿಯಲ್ಲ. ಯಾಕೆಂದರೆ 'ರಚನಾನುಪಪತ್ತೇ' ಜಡವಾದ ಅಚೇತನಕ್ಕೆ ಸ್ವತಃ ಪ್ರವೃತ್ತಿ ಕೂಡುವುದಿಲ್ಲ. ಯಾಕೆಂದರೆ ಅಚೇತನವಸ್ತುವಿಗೆ ಸ್ವತಃ ಪ್ರವೃತ್ತಿಯ ವಿಷಯದಲ್ಲಿ ಪ್ರಾಮಾಣ್ಯವಿಲ್ಲದಿರುವುದರಿಂದ.

### ೨) ಓಂ ಓಂ ಪ್ರವೃತ್ತೇಶ್ಚ ಓಂ

ನಾನು ಮಾಡುತ್ತೇನೆ ಎಂಬ ವಿಚಾರ ಚೇತನಕ್ಕೆ ಮಾತ್ರ, 'ಪ್ರವೃತ್ತೇಃ' ವಿಚಾರ ಪ್ರವೃತ್ತನಾಗುವನೇ ವಿನಃ ಅಚೇತನವಾದ ಪ್ರಕೃತಿಯಿಂದ ಪ್ರವೃತ್ತಿ ಹುಟ್ಟಲಾಗದು.

### ೩) ಓಂ ಓಂ ಪಯೋಂಬುವಚ್ಚೇತ್ತತ್ರಾಪಿ ಓಂ

ಅಪಿ ಮತ್ತು ಚೇತನಕ್ಕೆ ಮಾತ್ರ ವಿಷಯ 'ಪಯೋಂಬುವತ್', ಅಚೇತನವಾದ ಹಾಲು-ನೀರುಗಳಲ್ಲಿ ಹೇಗೆ ಪ್ರವೃತ್ತಿ ಕಾಣುವುದೋ ಹಾಗೆಯೇ ಜಡವಾದ ಪ್ರಧಾನದಲ್ಲಿಯೂ ಇರಬಹುದೆಂದರೆ ಹಾಗಲ್ಲ ಯಾಕೆಂದರೆ 'ತತ್ರಾಪಿ' ಅದರಲ್ಲಿಯೂ ಹಾಲು ನೀರಿನಲ್ಲಿ ಒಳಗೆ ಇರುವ ಈಶ್ವರನಿಂದಲೇ ಪ್ರವೃತ್ತಿಯೇ ವಿನಃ ಅವುಗಳಲ್ಲಿ ಸ್ವತಃ ಪ್ರವೃತ್ತಿ ಇರುವುದಿಲ್ಲ.

### ೪) ಓಂ ಓಂ ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್ ಓಂ

'ವ್ಯತಿರೇಕಾನವಸ್ಥಿತೇಃ', 'ನ ಋತೇ' ಇತ್ಯಾದಿ ವೇದೋಕ್ತ ಪ್ರಕಾರ ಭಗವದ್ವ್ಯತಿರಿಕ್ತ ಕರ್ಮಕ್ಕೂ ಅಸತ್ ಎಂಬ ಭಾಸವಾಗುತ್ತದೆ. ಇದರಿಂದಲೇ

ಅಚೇತನಕ್ಕೇ ಸ್ವತಃ ಪ್ರವೃತಿಯೆಂಬ ನಿರೀಶ್ವರ ಸಾಂಖ್ಯಮತವೂ ಅಪ್ರಮಾಣವೆಂದು ತೋರುತ್ತದೆ. ಅದಕ್ಕೆ ಹೇಳಿದರು 'ಅನಪೇಕ್ಷತ್ವಾತ್' ಸಜ್ಜನರಿಂದ ಅಪ್ರಮಾಣ ವೆಂದು (ಉಪೇಕ್ಷಿಸಿ) ತ್ಯಾಗಮಾಡುವುದರಿಂದ ನಿರೀಶ್ವರಸಾಂಖ್ಯರ ಮತವು ಅಸ ಮ್ಮತ. ವಿಷ್ಣುವೇ ಜಗತ್ಕರ್ತೃವೆಂದು ಹೇಳುವುದೇ ಯೋಗ್ಯವಾದದ್ದು.

**೫) ಓಂ ಓಂ ಅನ್ಯತ್ರಾಭಾವಾಚ್ಚನತೃಣಾದಿವತ್ ಓಂ (ಅನ್ಯತ್ರಾಭಾವಾ ಧಿಕರಣಂ)**

'ತೃಣಾದಿವತ್' ಪೃಥ್ವಿಯಿಂದ ಹುಟ್ಟುವ ಹುಲ್ಲಿಗೆ ಹೇಗೆ ಮಳೆ ಅತ್ಯಾವಶ್ಯ ಕವೋ ಹಾಗೆಯೇ ಪ್ರಕೃತಿಯಿಂದ ವ್ಯಕ್ತವಾಗುವ ಮಹತ್ತತ್ವಾದಿಗಳಿಗೂ ಈಶ್ವರನ ಅನುಗ್ರಹವು ಸಹಕಾರಿ ಕಾರಣವಾಗಿರುವದೆಂದರೆ (ಹಾಗಲ್ಲ) ಸ್ವಾತಂತ್ರ್ಯ ಇಲ್ಲ ವೆಂಬ ಸೇಶ್ವರ ಸಾಂಖ್ಯರಪಕ್ಷವೂ ಸರಿಯಲ್ಲ. ಅದು ಯಾಕೆಂದರೆ ಅನ್ಯತ್ರಾಭಾ ವಾತ್ ಈಶ್ವರನಿಂದ ಭಿನ್ನವಾದದ್ದು, ಅವನ ಪ್ರೇರಣೆ ಇಲ್ಲದೇ ಜಗತ್ತೇ ಇಲ್ಲದಿರು ವುದರಿಂದಲೂ ಈಶ್ವರನಿಂದಲೇ ಪ್ರಕೃತ್ಯಾದಿಗಳಿಗೂ ಅಸ್ತಿತ್ವಪ್ರದಾನ ಮಾಡುವು ದರಿಂದಲೂ ಬೇರೆ ಜಗತ್ತಿಗೆ ಸ್ವತಂತ್ರ ಅಸ್ತಿತ್ವವೇ ಇಲ್ಲ.

**೬) ಓಂ ಓಂ ಅಭ್ಯುಪಗಮೇಽಪ್ಯರ್ಥಾಭಾವಾತ್ ಓಂ (ಅಭ್ಯುಪಗ ಮಾಧಿಕರಣಂ)**

ಚಾರ್ವಾಕಾದಿಗಳು ಸಿದ್ಧಾಂತರೂಪವಾಗಿ ಒಪ್ಪಿಕೊಂಡರೂ 'ಅಭ್ಯುಪ ಗಮೇಃ' ತಮ್ಮ ಶಾಸ್ತ್ರಕ್ಕೆ ಸೈದ್ಧಾಂತಿಕವಾಗಿ ಪ್ರಾಮಾಣ್ಯವನ್ನು ಒಪ್ಪಿದ್ದರೂ ಅದು ನಮ್ಮ ಸಿದ್ಧಾಂತಕ್ಕೆ ಇಷ್ಟವೇ (ಪ್ರಮಾಣ) ಆಗಿದೆ. ಆದರೂ 'ಅಭ್ಯುಪಗಮೇಪಿ ಅರ್ಥಾಭಾವಾತ್' ಸಿದ್ಧಾಂತ ರೀತಿಯಿಂದ ವಿಷಯಪ್ರಯೋಜನಾಧಿಗಳಿಲ್ಲದೇ ಅಸತ್ವವೆಂದು ಒಪ್ಪಿಕೊಂಡರೂ ಸ್ವವ್ಯಾಘಾತ, ಸ್ವವಚನವಿರೋಧ ಆದಿ ತೋರು ತ್ತಿದ್ದು ಚಾರ್ವಾಕರ ಮತವು ಯುಕ್ತಿರಹಿತವಾದದ್ದು.

## ೭) ಓಂ ಓಂ ಪುರುಷಾಶ್ಮವದಿತಿಚೇತ್ತತ್ರಾಪಿ ಓಂ(ಪುರುಷಾಶ್ಮಾಧಿಕರಣಂ)

'ಪುರುಷಾಶ್ಮವತ್' - ಹೇಗೆ ಪುರುಷ (ಜೀವ) ಸಂಬಂಧವಾದ ಮೇಲೆಯೇ ಅಚೇತನವಾದ ಶರೀರಕ್ಕೆ ಚಾಲನೆ ಕಂಡು ಬರುವುದೋ ಹಾಗೂ ಜಡ (ಕಲ್ಲು) ಎತ್ತಲೂ ಪ್ರವೃತ್ತನಾಗುವನೋ ಹಾಗೆಯೇ ಅಚೇತನವೂ (ಜಡ) ಚೇತನ (ಜೀವ) ಸಂಬಂಧದಿಂದ ಚಲಿಸಲೆಂದರೆ ಹಾಗೆ ಆಗುವುದಿಲ್ಲ. 'ಇತಿಚೇನ್ನ' - ಯಾಕೆಂದರೆ 'ತತ್ರಾಪಿ' - ಶರೀರಿಯಾದ ಜೀವನಿಗೆ ಅಚೇತನದ ವಿಷಯದಲ್ಲಿ ಪ್ರವೃತ್ತನಾಗಬೇಕೆಂದರೆ ಅಲ್ಲಿ ಮುಖ್ಯವಾಗಿ ಕರ್ತೃತ್ವವು ಈಶ್ವರನಲ್ಲಿಯೇ ಇರುವುದರಿಂದ ಇದಕ್ಕೆ ಉದಾಹರಣೆಯೇ ಇಲ್ಲ. ಆದರಿಂದಲೇ ಈ ವಿಷಯದಲ್ಲಿ ಉದಾಹರಣೇಯೇ ಸಿಗಲಾರದು.

## ೮) ಓಂ ಓಂ ಅಂಗಿತ್ವಾನುಪಪತ್ತೇಃ ಓಂ

ಪುರುಷನಿಗೆ ಅಂಗತ್ವವನ್ನು ಒಪ್ಪಿದರೂ ಕೂಡ 'ಅಂಗಮಂಗೀ' ಎಂಬ ವಾಕ್ಯದಿಂದ ಅಂಗಿತಾಸ್ಯ ಪ್ರಧಾನ (ಮುಖ್ಯ) ವಾದುದಕ್ಕೆ ಹೇಳಲು 'ಅನುಪಪತ್ತೇಃ' ಪುರುಷನಿಂದ ಯುಕ್ತ ಪ್ರಕೃತಿಯೇ ಕರ್ತಾ ಎಂಬ ಪಕ್ಷವೂ ದೃಷ್ಟಾಂತವಿಲ್ಲದಿರುವುದರಿಂದ ಸರಿಯಾದದ್ದಲ್ಲ.

## ೯) ಓಂ ಓಂ ಅನ್ಯಥಾನುಮಿತೌಚಜ್ಞ ಶಕ್ತಿವಿಯೋಗಾತ್ ಓಂ (ಅನ್ಯಥಾನುಮಿತ್ಯಧಿಕರಣಂ)

ಈ ಅಂಗಿತ್ವವು ಕೂಡದೇ ಇರುವುದರಿಂದಲೇ ಅನ್ಯಥಾ- ಪ್ರಾಚೀನ ಪಕ್ಷಗಳಲ್ಲಿ ಒಂದಾಗಿರುವ ಪ್ರಕೃತಿಯ ಪ್ರೇರಣೆಯಿಂದಲೇ ಪುರುಷನಿಗೆ ಕರ್ತೃತ್ವರೂಪ ಅನುಮಾನದಿಂದ (ಅನುಮಿತೌ) ಅದನ್ನು ಸಾಧನೆ ಮಾಡುವ 'ಜ್ಞಶಕ್ತಿವಿಯೋಗಾತ್' ಜ್ಞ- ಜೀವನಿಗೆ ಶರೀರ ಸಂಬಂಧ ಪ್ರವೃತ್ತಿಯು ಕೂಡುವುದಿಲ್ಲ. ಅಂಗಿತ್ವಾನುಪಪತ್ತೇಃ ಪ್ರಧಾನಭೂತ ಪುರುಷನಿಗೆ ಈ ದೃಷ್ಟಾಂತ ಕೂಡುವುದಿಲ್ಲ.

**೧೦) ಓಂ ಓಂ ವಿಪ್ರತಿಷೇಧಾಚ್ಚಾಸಮಂಜಸಂ ಓಂ**

ಈಶ್ವರನೇ ಇಲ್ಲವೆಂಬ (ನಿರೀಶ್ವರ) ಮತವು 'ವಿಪ್ರತಿಷೇಧಾತ್' ಎಲ್ಲವೇದ, ಪುರಾಣ, ಅನುಮಾನ, ಯುಕ್ತಿಗಳಿಂದ ವಿರುದ್ಧವಾಗಿರುವುದರಿಂದಲೇ 'ಅಸಮಂಜಸಂ' ಆ ಮತವು ಅಯುಕ್ತವಾದದ್ದು ಎಂದು ತಿಳಿಯಬೇಕು.

**೧೧) ಓಂ ಓಂ ಮಹದ್ದೀರ್ಘವದ್ವಾಹ್ರಸ್ವಪರಿಮಂಡಲಾಭ್ಯಾಂ ಓಂ (ವೈಶೇಷಿಕಾಧಿಕರಣಂ)**

ವೈಶೇಷಿಕರ ಮತದಲ್ಲಿ ತ್ರ್ಯಣುಕ ಮೊದಲಾದವುಗಳಲ್ಲಿಯ ಮಹತ್ವ ದೀರ್ಘತ್ವ ಇವು ಚತುರಣಕದಲ್ಲಿಯ ಅಳತೆಯನ್ನು ಹುಟ್ಟಿಸುತ್ತವೆ ಹೇಗೋ ಹಾಗೆಯೇ (ಪರಿಮಾಣ) ದ್ವ್ಯಣುಕ, ತ್ರ್ಯಣುಕಗಳಿಂದಲೂ ಹ್ರಸ್ವ ದೀರ್ಘ, ಪಾರಮಂಡಲ್ಯಾದಿಗಳೂ ದ್ವ್ಯಣುಕ, ತ್ರ್ಯಣುಕಗಳಲ್ಲಿರುವ ಪರಿಮಾಣ (ಅಳತೆ) ಜನಿಸಲಿ. ಹಾಗಿಲ್ಲದಿದ್ದರೆ, ಮಹತ್ವದೀರ್ಘತ್ವಮೊದಲಾದವುಗಳಿಂದಲೂ ಕಾರ್ಯ ಉತ್ಪನ್ನವಾಗದಂತೆ ಆಗಲಿ ಎಂಬ ಅಭಿಪ್ರಾಯದಿಂದಲೇ 'ಮಹದ್ದೀರ್ಘವದ್ವಾ'.... ಎಂಬ ಸೂತ್ರ, ಈ ಸೂತ್ರದಂತೆ ವೈಶೇಷಿಕ ಮತವು ಯುಕ್ತಿಗಳಿಂದ (ಪ್ರಮಾಣ) ರಹಿತವಾದ್ದರಿಂದ ಅದು ಸರಿಯಲ್ಲ.

**೧೨) ಓಂ ಓಂ ಉಭಯಥಾಪಿ ನ ಕರ್ಮಾಂತಸ್ತದಭಾವಃ ಓಂ**

ಯಾಕೆಂದರೆ ಉಭಯಥಾಪಿ ಈಶ್ವರ ಇಚ್ಛೆಯಂತೆ ನಿತ್ಯ-ಅನಿತ್ಯ ಎಂಬ ಎರಡೂ ಪಕ್ಷಗಳಿಂದಲೂ ಪರಮಾಣುಗಳಲ್ಲಿ ಕ್ರಿಯೆಯ ಉತ್ಪತ್ತಿ ಆಗಲಾರದು. 'ಅತಸ್ತದಭಾವಃ' - ಆ ಮಹತ್ವಾದಿಗಳಲ್ಲಿ ದ್ವ್ಯಣುಕಾದಿಗಳ ಕಾರ್ಯ (ಪರಿಮಾಣ)ಗಳೂ ಆಗದೇ ಇರಲಿ ಎಂಬ ಅರ್ಥ.

**೧೩) ಓಂ ಓಂ ಸಮವಾಯಾಭ್ಯುಪಗಮಾಚ್ಚಸಾಮ್ಯಾದನವಸ್ಥಿತಿಃ ಓಂ**

ವೈಶೇಷಿಕರು ಅವಯವ ಮತ್ತು ಅವಯವಿಗಳಲ್ಲಿ ಭಿನ್ನತ್ವವನ್ನು ತೋರಿಸುವುದಕ್ಕೆ ಸಮವಾಯವೆಂಬ ಸಂಬಂಧವನ್ನು ಒಪ್ಪಿಕೊಂಡಿದ್ದಾರೆ. 'ಸಮವಾಯಾಭ್ಯುಪಗಮಾತ್' - ಒಪ್ಪುವುದರಿಂದಲೇ 'ಸಾಮ್ಯಾತ್' - ಸಮವಾಯ ಮತ್ತು ಅಸಮವಾಯಿಗಳಲ್ಲಿಯೂ ಕೂಡ ಭಿನ್ನತ್ವರೂಪ ಸಾಮ್ಯವಿರುವುದರಿಂದ ಅದರಲ್ಲಿ ಪುನಃ ಸಮವಾಯವನ್ನು ಒಪ್ಪಿಕೊಂಡರೆ 'ಅನವಸ್ಥಿತ' - ಅನವಸ್ಥಾರೂಪ ದೋಷ ಬರುವುದರಿಂದ ಆ ವೈಶೇಷಿಕ ಮತವು ಸಮಂಜಸವಾದದ್ದಲ್ಲ.

**೧೪) ಓಂ ಓಂ ನಿತ್ಯಮೇವ ಚ ಭಾವಾತ್ ಓಂ**

'ಚ' ಮತ್ತು ಈಶ್ವರೇಚ್ಛೆಪರಿಮಾಣ, ಆದಿಗಳಿಗೆ ವೈಶೇಷಿಕರು 'ನಿತ್ಯಮೇವ' ಯಾವಾಗಲೂ (ಸರ್ವದಾ) 'ಭಾವಾತ್' - ಕಾರ್ಯೋತ್ಪತ್ತಿ ಆಗುತ್ತಲೇ ಇರುತ್ತದೆ ವಿನಃ ಯಾವುದೋ ಒಂದೊಂದು ಸಲ ಕಾರ್ಯೋತ್ಪತ್ತಿ ಆಗುವುದಿಲ್ಲ.

**೧೫) ಓಂ ಓಂ ರೂಪಾದಿಮತ್ವಾಚ್ಚ ವಿಪರ್ಯಯೋ ದರ್ಶನಾತ್ ಓಂ**

ಮತ್ತು ವೈಶೇಷಿಕಮತದಲ್ಲಿ ಭೂಮಿ, ಜಲ, ತೇಜಸ್ಸು ಮೊದಲಾದ ಪರಿಮಾಣಗಳಿಗೆ 'ರೂಪಾದಿಮತ್ವಾತ್ ವಿಪರ್ಯಯ' - ಆ ರೂಪಾದಿಗಳಿಗೆ ನಿತ್ಯತ್ವದ ಬದಲಾಗಿ ಅನಿತ್ಯತ್ವ ಬರಲಿ, ಯಾಕೆಂದರೆ 'ದರ್ಶನಾತ್' ಯಾವುದು ಕಾಣುತ್ತದೆಯೋ ಅದು ಅನಿತ್ಯವೆಂಬ ವ್ಯಾಪ್ತಿಯು ಕೊಡ ಮೊದಲಾದವುಗಳಲ್ಲಿ ಕಂಡು ಬಂದಿದೆ ಎಂಬ ಅರ್ಥ.

**೧೬) ಓಂ ಓಂ ಉಭಯಥಾ ಚ ದೋಷಾತ್ ಓಂ**

ವೈಶೇಷಿಕ ಮತದಲ್ಲಿ 'ಉಭಯಥಾ ಚ' - ಪರಮಾಣು ನಿತ್ಯವೆಂದು ಹೇಳಲಿ, ಅನಿತ್ಯವೆಂದು ಹೇಳಲಿ ಹೀಗೆ ಎರಡು ರೀತಿಯಿಂದಲೂ 'ದೋಷಾತ್'

ಅದೇ ರೀತಿ ಯಾವ ಕಾರಣವಿಲ್ಲದಿರುವುದರಿಂದ ಎಲ್ಲ ನಿಮಿತ್ತ ಕಾರಣದಿಂದ ಆ ನಿತ್ಯತ್ವ ಅನಿತ್ಯತ್ವರೂಪ ದೋಷ ಬರುವುದರಿಂದ ಆ ಮತವು ಯೋಗ್ಯವಾದದ್ದಲ್ಲ.

## ೧೭) ಓಂ ಓಂ ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ ಓಂ

ವೈಶೇಷಿಕ ಮತವು ಅಪರಿಗ್ರಹಾತ್ - ಶೃತ್ಯಾದಿಗಳನ್ನು ಗ್ರಹಿಸದಿರುವುದರಿಂದ (ಒಪ್ಪದಿರುವುದು) ಆ ವೈಶೇಷಿಕ ಮತದವು 'ಅತ್ಯಂತ ಮನಪೇಕ್ಷಾ' - ಅತ್ಯಂತ (ತ್ಯಾಜ್ಯ) ಅನಾದರಣೀಯವಾದದ್ದಾಗಿದೆ.

## ೧೮) ಓಂ ಓಂ ಸಮುದಾಯ ಉಭಯಹೇತುಕೇಪಿತದಪ್ರಾಪ್ತಿ ಓಂ (ಸಮುದಾಯಾಧಿಕರಣಂ)

ಯಾಕೆಂದರೆ 'ಸಮುದಾಯ' - ಬಹುಸಂಖ್ಯಾಯುಕ್ತ ಪರಮಾಣುಗಳಲ್ಲಿ ಅನೇಕತ್ವವನ್ನು ಒಪ್ಪಿದರೂ ಕೂಡ ಬೇರೆ ಬೇರೆ ಆದ ಆ ಪರಮಾಣುಗಳಲ್ಲಿ ವಿಭಕ್ತತ್ವವನ್ನು ಒಪ್ಪಿದರೆ ಅಥವಾ ಅನೇಕತ್ವದಲ್ಲಿ ಏಕತ್ವವನ್ನು ಒಪ್ಪಿದರೂ 'ತದಪ್ರಾಪ್ತಿ' - ಸಮುದಾಯಕ್ಕೆ ಅನೇಕ (ಬೇರೆ) ಅಂತರವಿರುವ ಕಾರಣವೆಂದರೆ ಅದು (ಅಪ್ರಾಪ್ತ) ದೊರೆಯುವದೆಂಬುದು ಕೂಡುವುದಿಲ್ಲ. ಯಾಕೆಂದರೆ ಅನ್ಯಾಶ್ರಯಾದಿ ದೋಷ ಬರುತ್ತದೆ. ಇದನ್ನೇ ಟೀಕಾಚಾರ್ಯರು ತತ್ವಪ್ರಕಾಶಿಕೆಯಲ್ಲಿ ವಿಸ್ತರಿಸಿದ್ದಾರೆ. ಇದರಿಂದ ಪರಮಾಣು ಪುಂಜವೇ ಕೊಡದ ಅವಯವ (ಕಪಾಲ)ವೆಂದು ಹೇಳುವ ಬೌದ್ಧರ ಮತವೂ ಪ್ರಾಮಾಣಿಕವಾದದ್ದಲ್ಲವೆಂಬ ಅರ್ಥ.

## ೧೯) ಓಂ ಓಂ ಇತರೇತರ ಪ್ರತ್ಯಯತ್ವಾದಿಚೇನ್ನೋತ್ಪತ್ತಿಮಾತ್ರ ನಿಮಿತ್ತತ್ವಾತ್ ಓಂ

ನಮ್ಮ ಮತದ ರೀತ್ಯಾ ಪರಮಾಣು ಪುಂಜ (ಗುಂಪು) ಯಾವಾಗಲೂ ಇದ್ದರೂ ಪ್ರಲಯಕಾಲದಲ್ಲಿ ಅದು ಇರುವುದಿಲ್ಲ. ಯಾಕೆಂದರೆ ಅದರ ಚಿವಟ್ಟುವ ಹಾರವಾದರೋ 'ಇತರೇತರ ಪ್ರತ್ಯಯತ್ವಾತ್' - ಪರಮಾಣುಗಳು ಪರಸ್ಪರವಾಗಿ

ನಾನು ಮೊದಲು ನೀನು ಮೊದಲೆಂಬ ವಿಚಾರ ಬರುವಂತೆ ಕೆಲವು ಕಾಲಕ್ಕೆ ಆ ರೀತಿ ಬುದ್ಧಿಬಾರದಿರುವುದೂ ಉಂಟು. ಆಗ್ಗೆ ಸಮುದಾಯವೆಂಬ ವ್ಯವಹಾರ ವಿಲ್ಲದ್ದರಿಂದ ಪ್ರಲಯವೇ ಬರಬಹುದೆಂದರೆ ಅದು ಸರಿಯಲ್ಲ. ಯಾಕೆಂದರೆ 'ಉತ್ಪತ್ತಿಮಾತ್ರನಿಮಿತ್ತತ್ವಾತ್' - ಪರಮಾಣುಗಳು ತನ್ನ ಸಮುದಾಯವನ್ನು ಸೃಷ್ಟಿ ಸುವದೇ ವಿನಃ ಅವುಗಳಲ್ಲಿ ಅಪೇಕ್ಷಾ ಬುದ್ದಿ ಉತ್ಪನ್ನವಾಗುವುದು ಎಂಬುದಕ್ಕೆ ಮಾತ್ರ ಶಬ್ದವನ್ನು ಇಡಲಾಯಿತು. ಆ ರೀತಿ ಪರಮಾಣು ವ್ಯವಹಾರಾದಿಗಳನ್ನು ಕ್ಷಣಿಕರ ಮತದಲ್ಲಿ ಸರ್ವಥಾ ಒಪ್ಪುವುದಿಲ್ಲವದಕ್ಕೆ ಎಂಬಾರ್ಥ.

## ೨೦) ಓಂ ಓಂ ಉತ್ತರೋತ್ಪಾದೇಚ ಪೂರ್ವನಿರೋಧಾತ್ ಓಂ

ಚ ನಿಶ್ಚತತೆ ಅಥವಾ ಒಟ್ಟಿಗೆ ಅದು ಹಿಂದೆ ಹೇಳಿದ್ದು ಸರಿಯಲ್ಲ ಯಾಕೆಂದರೆ ಅವುಗಳಲ್ಲಿ ಸಾಮರ್ಥ್ಯವಿದೆ (ಶಕ್ತಿ) ಹಾಗೂ ಕೇವಲ ಕ್ಷಣಿಕ ಮತದಲ್ಲಿ ಸಮುದಾಯ ವ್ಯವಹಾರವೇ ಕೂಡುವುದಿಲ್ಲ ಆದರೆ ಆ ಮತದಲ್ಲಿ ವಿಶೇಷ ಕಾರ್ಯೋತ್ಪತ್ತಿಯೂ ಯೋಗ್ಯವಾದದ್ದಲ್ಲ. ಯಾಕೆಂದರೆ 'ಉತ್ತರೋತ್ಪಾದೆ' - ಕಾರಣ ಸದೃಶವಾದ ಕಾರ್ಯ ಹುಟ್ಟಿಸುವ ಸಾಮರ್ಥದಿಂದ ಅದೇ ವಿಸದೃಶ (ವಿರುದ್ಧ) ಕಾರ್ಯವನ್ನು ಹುಟ್ಟಿಸುವ ಶಕ್ತಿಯುಳ್ಳದ್ದಾಗಲಿ, ಏನು ದೋಷ ಎಂದರೆ ಅದಕ್ಕೆ ಹೇಳಲಾಗಿದೆ. ಉತ್ತರ ಪರಮಾಣು ತನ್ನ ಸದೃಶವಾದ ಕೆಲಸ ಮಾಡಲು ಉದ್ಯುಕ್ತವಾಗಲು ಹೊರಟಾಗ್ಗೆಯೇ 'ಪೂರ್ವನಿರೋಧಾತ್' ಮೊದಲಿನ ಕಾರ್ಯ ನಾಶವಾಗುವುದು. ಅದಕ್ಕೆ ಪುನಃ ವಿಸದೃಶಕಾರ್ಯ ಹುಟ್ಟಿಸುವುದು ಅಸಾಧ್ಯವೇ ಎಂದು ತಿಳಯಬೇಕು.

## ೨೧) ಓಂ ಓಂ ಅಸತಿಪ್ರತಿಜ್ಞೋಪರೋಧೋಯೌ ಗಪದ್ಯಮನ್ಯಗಾ ಓಂ

ಕ್ಷಣಿಕರ ಪಕ್ಷದಲ್ಲಿ ಪ್ರತಿಕ್ಷಣದಲ್ಲಿಯೂ ಕಾರ್ಯ ಹುಟ್ಟುವುದು ಯೋಗ್ಯವಲ್ಲ. ಯಾಕೆಂದರೆ 'ಅಸತಿ' - ಕಾರಣವಿಲ್ಲದಿದ್ದರೂ ಕಾರ್ಯ ಉತ್ಪನ್ನವಾಗುತ್ತದೆಂದು

ಒಪ್ಪಿದರೂ 'ಪ್ರತಿಜ್ಞೋಪರೋಧ' - ಈ ಪರಿಮಾಣದಿಂದ ಈ ಕೆಲಸವೆಂದು ನಿಶ್ಚಯಿಸಿ ಮುಂದೆ ಸಿದ್ಧಾಂತದ ವ್ಯವಹಾರಕ್ಕೆ ಪ್ರತಿಬಂಧ ಅಥವಾ ನಾಶವಾಗಲಿ ಇಲ್ಲವಾದರೆ ಕಾರಣವಿದ್ದರೂ ಕಾರ್ಯ ಹುಟ್ಟಲಿ ಎಂದು ಒಪ್ಪಿದರೂ 'ಯೌಗ ಪದ್ಯಂ' ಕಾರ್ಯಕಾರಣಗಳು ಒಂದೇ ಕಾಲದಲ್ಲಿ ಇರುವ ಮಹಾದೋಷವೂ ಬರ ಬಹುದೆಂಬ ಅರ್ಥ ತೋರುವುದು.

**೨೨) ಓಂ ಓಂ ಪ್ರತಿಸಂಖ್ಯಾऽಪ್ರತಿಸಂಖ್ಯಾನಿರೋಧಾಪ್ರಾಪ್ತಿರವಿಛೇ ದಾತ್ ಓಂ**

ಮತ್ತು ಈ ಕ್ಷಣಿಕರ ಮತದಲ್ಲಿ 'ಪ್ರತಿಸಂಖ್ಯಾಖಪ್ರತಿಸಂಖ್ಯಾನಿರೋಧಾ ಪ್ರಾಪ್ತಿಕ' - ಪ್ರತಿಯೊಂದು ಸಂಖ್ಯೆ-ಅಸಂಖ್ಯೆಗಳ ಅಪರನಿರೋಧಕ್ಕೂ ಕ್ಷಣಕ್ಷ ಣಗಳ ನಾಶವಾಗುವ ಅದೇ ಸಮಯ ಹುಟ್ಟಿದ ಅದಕ್ಕೆ ಹಾಗೂ ಆಗುವುದು ಅದು ಕೂಡುವುದಿಲ್ಲ. ಯಾಕೆಂದರೆ 'ಅವಿಛೇದಾತ್' - ಕ್ಷಣಿಕರ ಪಕ್ಷದಲ್ಲಿ ಕಾರ್ಯ ಹುಟ್ಟು ವಾಗ್ಗ ಕಾರ್ಯವು ಹುಟ್ಟದಿರುವ ಅವಸ್ಥೆಯೂ ಹಾಗೆಯೇ ಇದ್ದೇ ಇರುತ್ತದೆ ಎಂದು ಅರ್ಥ.

**೨೩) ಓಂ ಓಂ ಉಭಯಥಾ ಚ ದೋಷಾತ್ ಓಂ**

'ಉಭಯಥಾ' ಕಾರಣದಿಂದ ಕಾರ್ಯವೆಂಬುವಾಗ್ಗ ಕಾರ್ಯವಿಲ್ಲದಿದ್ದರೂ ಕಾರಣವಿಲ್ಲವೆಂಬ ಪಕ್ಷದಲ್ಲಿಯೂ 'ದೋಷಾತ್' ಕಾರ್ಯಕಾರಣಗಳ ವಿಶೇಷ ಸನ್ನಿ ವೇಶದಲ್ಲಿ ಅದು ಇಲ್ಲವೆಂಬ ಪಕ್ಷದಲ್ಲಿಯೂ ದೋಷ ಮಾತ್ರ ಬಂದೇ ಬರುತ್ತದೆ. ಅದಕ್ಕೆ ಯಾವ ಪಕ್ಷದಲ್ಲಿಯೂ ಕ್ಷಣಿಕರ ಮತವು ದೋಷಯುಕ್ತವೇ ಆಗಿದ್ದು ಅದು ಅಯೋಗ್ಯವಾದದ್ದೇ.

**೨೪) ಓಂ ಓಂ ಅಕಾಶೇಚಾವಿಶೇಷಾತ್ ಓಂ**

ನಾನು ಮೊದಲು ನೀನು ಮೊದಲೆಂಬ ವಿಚಾರ ಬರುವಂತೆ ಕೆಲವು ಕಾಲಕ್ಕೆ ಆ ರೀತಿ ಬುದ್ಧಿಬಾರದಿರುವುದೂ ಉಂಟು. ಆಗ್ಗೆ ಸಮುದಾಯವೆಂಬ ವ್ಯವಹಾರ ವಿಲ್ಲದ್ದರಿಂದ ಪ್ರಲಯವೇ ಬರಬಹುದೆಂದರೆ ಅದು ಸರಿಯಲ್ಲ. ಯಾಕೆಂದರೆ 'ಉತ್ಪತ್ತಿಮಾತ್ರನಿಮಿತ್ತತ್ವಾತ್' - ಪರಮಾಣುಗಳು ತನ್ನ ಸಮುದಾಯವನ್ನು ಸೃಷ್ಟಿ ಸುವದೇ ವಿನಃ ಅವುಗಳಲ್ಲಿ ಅಪೇಕ್ಷಾ ಬುದ್ಧಿ ಉತ್ಪನ್ನವಾಗುವುದು ಎಂಬುದಕ್ಕೆ ಮಾತ್ರ ಶಬ್ದವನ್ನು ಇಡಲಾಯಿತು. ಆ ರೀತಿ ಪರಮಾಣು ವ್ಯವಹಾರಾದಿಗಳನ್ನು ಕ್ಷಣಿಕರ ಮತದಲ್ಲಿ ಸರ್ವಥಾ ಒಪ್ಪುವುದಿಲ್ಲವದಕ್ಕೆ ಎಂಬಾರ್ಥ.

## ೨೦) ಓಂ ಓಂ ಉತ್ತರೋತ್ಪಾದೇಚ ಪೂರ್ವನಿರೋಧಾತ್ ಓಂ

ಚ ನಿಶ್ಚತತೆ ಅಥವಾ ಒಟ್ಟಿಗೆ ಅದು ಹಿಂದೆ ಹೇಳಿದ್ದು ಸರಿಯಲ್ಲ ಯಾಕೆಂದರೆ ಅವುಗಳಲ್ಲಿ ಸಾಮರ್ಥ್ಯವಿದೆ (ಶಕ್ತಿ) ಹಾಗೂ ಕೇವಲ ಕ್ಷಣಿಕ ಮತದಲ್ಲಿ ಸಮುದಾಯ ವ್ಯವಹಾರವೇ ಕೂಡುವುದಿಲ್ಲ ಆದರೆ ಆ ಮತದಲ್ಲಿ ವಿಶೇಷ ಕಾರ್ಯೋತ್ಪತ್ತಿಯೂ ಯೋಗ್ಯವಾದದ್ದಲ್ಲ. ಯಾಕೆಂದರೆ 'ಉತ್ತರೋತ್ಪಾದೆ' - ಕಾರಣ ಸದೃಶವಾದ ಕಾರ್ಯ ಹುಟ್ಟಿಸುವ ಸಾಮರ್ಥದಿಂದ ಅದೇ ವಿಸದೃಶ (ವಿರುದ್ಧ) ಕಾರ್ಯವನ್ನು ಹುಟ್ಟಿಸುವ ಶಕ್ತಿಯುಳ್ಳದ್ದಾಗಲಿ, ಏನು ದೋಷ ಎಂದರೆ ಅದಕ್ಕೆ ಹೇಳಲಾಗಿದೆ. ಉತ್ತರ ಪರಮಾಣು ತನ್ನ ಸದೃಶವಾದ ಕೆಲಸ ಮಾಡಲು ಉದ್ಯುಕ್ತವಾಗಲು ಹೊರಟಾಗ್ಗೆಯೇ 'ಪೂರ್ವನಿರೋಧಾತ್' ಮೊದಲಿನ ಕಾರ್ಯ ನಾಶವಾಗುವುದು. ಅದಕ್ಕೆ ಪುನಃ ವಿಸದೃಶಕಾರ್ಯ ಹುಟ್ಟಿಸುವುದು ಅಸಾಧ್ಯವೇ ಎಂದು ತಿಳಯಬೇಕು.

## ೨೧) ಓಂ ಓಂ ಅಸತಿಪ್ರತಿಜ್ಞೋಪರೋಧೋಯೌ ಗಪದ್ಯಮನ್ಯಗಾ ಓಂ

ಕ್ಷಣಿಕರ ಪಕ್ಷದಲ್ಲಿ ಪ್ರತಿಕ್ಷಣದಲ್ಲಿಯೂ ಕಾರ್ಯ ಹುಟ್ಟುವುದು ಯೋಗ್ಯವಲ್ಲ. ಯಾಕೆಂದರೆ 'ಅಸತಿ' - ಕಾರಣವಿಲ್ಲದಿದ್ದರೂ ಕಾರ್ಯ ಉತ್ಪನ್ನವಾಗುತ್ತದೆಂದು

ಒಪ್ಪಿದರೂ 'ಪ್ರತಿಜ್ಞೋಪರೋಧ' - ಈ ಪರಿಮಾಣದಿಂದ ಈ ಕೆಲಸವೆಂದು ನಿಶ್ಚಯಿಸಿ ಮುಂದೆ ಸಿದ್ಧಾಂತದ ವ್ಯವಹಾರಕ್ಕೆ ಪ್ರತಿಬಂಧ ಅಥವಾ ನಾಶವಾಗಲಿ ಇಲ್ಲವಾದರೆ ಕಾರಣವಿದ್ದರೂ ಕಾರ್ಯ ಹುಟ್ಟಲಿ ಎಂದು ಒಪ್ಪಿದರೂ 'ಯೌಗ ಪದ್ಯಂ' ಕಾರ್ಯಕಾರಣಗಳು ಒಂದೇ ಕಾಲದಲ್ಲಿ ಇರುವ ಮಹಾದೋಷವೂ ಬರ ಬಹುದೆಂಬ ಅರ್ಥ ತೋರುವುದು.

**೨೨) ಓಂ ಓಂ ಪ್ರತಿಸಂಖ್ಯಾಽಪ್ರತಿಸಂಖ್ಯಾನಿರೋಧಾಪ್ರಾಪ್ತಿರವಿಛೇದಾತ್ ಓಂ**

ಮತ್ತು ಈ ಕ್ಷಣಿಕರ ಮತದಲ್ಲಿ 'ಪ್ರತಿಸಂಖ್ಯಾಖಪ್ರತಿಸಂಖ್ಯಾನಿರೋಧಾ ಪ್ರಾಪ್ತಿಕ' - ಪ್ರತಿಯೊಂದು ಸಂಖ್ಯೆ-ಅಸಂಖ್ಯೆಗಳ ಅಪರನಿರೋಧಕ್ಕೂ ಕ್ಷಣಕ್ಷ ಣಗಳ ನಾಶವಾಗುವ ಅದೇ ಸಮಯ ಹುಟ್ಟಿದ ಅದಕ್ಕೆ ಹಾಗೂ ಆಗುವುದು ಅದು ಕೂಡುವುದಿಲ್ಲ. ಯಾಕೆಂದರೆ 'ಅವಿಛೇದಾತ್' - ಕ್ಷಣಿಕರ ಪಕ್ಷದಲ್ಲಿ ಕಾರ್ಯ ಹುಟ್ಟು ವಾಗ್ಗೆ ಕಾರ್ಯವು ಹುಟ್ಟದಿರುವ ಅವಸ್ಥೆಯೂ ಹಾಗೆಯೇ ಇದ್ದೇ ಇರುತ್ತದೆ ಎಂದು ಅರ್ಥ.

**೨೩) ಓಂ ಓಂ ಉಭಯಥಾ ಚ ದೋಷಾತ್ ಓಂ**

'ಉಭಯಥಾ' ಕಾರಣದಿಂದ ಕಾರ್ಯವೆಂಬುವಾಗ್ಗೆ ಕಾರ್ಯವಿಲ್ಲದಿದ್ದರೂ ಕಾರಣವಿಲ್ಲವೆಂಬ ಪಕ್ಷದಲ್ಲಿಯೂ 'ದೋಷಾತ್' ಕಾರ್ಯಕಾರಣಗಳ ವಿಶೇಷ ಸನ್ನಿ ವೇಶದಲ್ಲಿ ಅದು ಇಲ್ಲವೆಂಬ ಪಕ್ಷದಲ್ಲಿಯೂ ದೋಷ ಮಾತ್ರ ಬಂದೇ ಬರುತ್ತದೆ. ಅದಕ್ಕೆ ಯಾವ ಪಕ್ಷದಲ್ಲಿಯೂ ಕ್ಷಣಿಕರ ಮತವು ದೋಷಯುಕ್ತವೇ ಆಗಿದ್ದು ಅದು ಅಯೋಗ್ಯವಾದದ್ದೇ.

**೨೪) ಓಂ ಓಂ ಅಕಾಶೇಚಾವಿಶೇಷಾತ್ ಓಂ**

ಆದರೂ ಕ್ಷಣಿಕರು ದೀಪದ ಉದಾಹರಣೆ ಕೊಟ್ಟರು. ಒಂದು ದೀಪ ದಿಂದ ಮತ್ತೊಂದು ದೀಪ ಬೆಳಗಿದರೂ ಕಾರ್ಯನಾಶ ಇಲ್ಲ ಹಾಗೂ 'ಆಕಾಶೇಚಾ ವಿಶೇಷಾತ್' ದೃಷ್ಟಾಂತವು ಸಾಧ್ಯದಿಂದ ವಿಕಲಿತವಾಗುತ್ತದೆಂದರೂ ಆ ಪಕ್ಷದಲ್ಲಿ ವಿಶೇಷವಾಗಿ ಪರಮಾಣುಗಳಲ್ಲಿಯ ವಿಶೇಷ ಕಾಣದಿರುವುದರಿಂದ ಹೇತುವಿನಲ್ಲಿ 'ಸತ್‌ಪ್ರತಿಪಕ್ಷರೂಪದೋಷ' ಬರುವುದರಿಂದ ಕ್ಷಣಿಕತ್ವದ ಸಿದ್ಧಿ (ಪಕ್ಷ) ಆಗುವುದಿಲ್ಲವೆಂಬ ಅಭಿಪ್ರಾಯ.

### ೨೫) ಓಂ ಓಂ ಅನುಸ್ಮೃತೇಶ್ಚ ಓಂ

ಅದೇ ಈ ಪದಾರ್ಥವೆಂದು ಸ್ಮರಣೆ ಬರುತ್ತಿದ್ದು ಅದಕ್ಕೆ ವಿರೋಧವಾದದ್ದು ಕಂಡು ಬಂದರೆ ಪ್ರಾಮಾಣಿಕ (ಸತ್ವ) ವಾಗಿರುವುದರಿಂದ ಇಂತಹುದರಲ್ಲಿ ಆ ಕ್ಷಣಿ ಕತ್ವ ಸಾಧಕ ಪಕ್ಷವು ಆಯುಕ್ತವೆನಿಸುತ್ತದೆ.

### ೨೬) ಓಂ ಓಂ ನಾಸತೋದೃಷ್ಟತ್ವಾತ್ ಓಂ (ಅಸದಧಿಕರಣಂ)

'ಅಸತಿ' - ಶೂನ್ಯವಾದ ವಸ್ತುವಿನಿಂದ ಜಗತ್ತಿನ ಉತ್ಪತ್ತಿಯು 'ನ' ಆಗಜುವುದಿಲ್ಲ. ಯಾಕೆಂದರೆ ಅಪ್ರಾಮಾಣಿಕವಾದ್ದರಿಂದ ಪ್ರಮಾಣವಿಲ್ಲದಿದ್ದ ರೇನಾಯಿತು ಎಂದರೆ 'ಅದೃಷ್ಟತ್ವಾತ್' ಎಲ್ಲಿಯೂ (ಶೂನ್ಯ) ಅಸತ್ತಿನಿಂದ ಉತ್ಪ ತ್ತಿಯು ಕಂಡು ಬರುವುದಿಲ್ಲ. ಆದರಿಂದಲೇ ಅನುಮಾನ ಆಗಮಗಳಿಂದಲೂ ಆ ಸದುತ್ಪತ್ತಿಮತವು ಕೂಡುವುದಿಲ್ಲ.

### ೨೭) ಓಂ ಓಂ ಉದಾಸೀನಾನಾಮಪಿ ಚೈವಂ ಸಿದ್ಧಿಃ ಓಂ

ಒಂದು ವೇಳೆ ಅಸತ್ತಿನಿಂದ ಕಾರ್ಯ ಹುಟ್ಟುವುದೆಂದು ಒಪ್ಪಿದರೂ 'ಉದಾಸೀನಾನಾಂ' ಇದ್ದು ಬಿಡುವ ಇದು ಸ್ವೀಕರಿಸು ಎಂಬ ಬುದ್ಧಿಗೆ ನಿಲುಕದ ವಿಷಯಗಳಾದ ಆಕಾಶಪುಷ್ಪ ಮೊದಲಾದವುಗಳಿಂದ ವಾಸನೆ ಬರುವುದೆಂಬ ಕಾರ್ಯ

ಸಿದ್ಧಿ ಆಗಲಿ. ಹಾಗೆ ಅದರಿಂದ ಆಗುವುದಿಲ್ಲವೆಂದರೆ ಆಸತ್ತಿನಿಂದಲೂ ಆಗದೇ ಇರಲೆಂದರ್ಥ.

**೨೮) ಓಂ ಓಂ ನಾಭಾವೋಽಪಲಬ್ಧೇಃ ಓಂ**

ಜಗತ್ತು 'ಅಭಾವ' - ಸನತ ಅಲ್ಲ, ಯಾಕೆಂದರೆ 'ಉಪಲಬ್ಧೇಃ' - ಸತ್ ಎಂದು ತೋರುತ್ತಿರುವುದರಿಂದ ಎಂಬ ಅರ್ಥ.

**೨೯) ಓಂ ಓಂ ವೈಧರ್ಮ್ಯಾಚ್ಚನಸ್ವಪ್ನಾದಿವತ್ ಓಂ**

ಜಗತ್ತು 'ಸ್ವಪ್ನಾದಿವತ್' - ಸ್ವಪ್ನವಸ್ತುಗಳಲ್ಲಿ ಎಚ್ಚರದ ವಸ್ತುಗಳಂತೆ ಅಸತ್ತು ಅಲ್ಲ. ಯಾಕೆಂದರೆ 'ವೈಧರ್ಮ್ಯಾತ್' - ಸ್ವಪ್ನವಸ್ತುವಿಗೆ ಪ್ರತಿಬಂಧಕರೂಪ ವಿಲಕ್ಷಣಧರ್ಮರೂಪ ವ್ಯತ್ಯಾಸವಿರುವುದರಿಂದ ಆದರೆ ಜಗತ್ತಿನಲ್ಲಿ ಅಂತಹ ವ್ಯತ್ಯಾಸವು ಕಾಣದಿರುವುದರಿಂದ ಎಂಬ ಅರ್ಥ.

**೩೦) ಓಂ ಓಂ ನಭಾವೋಽನುಪಲಬ್ಧೇಃ ಓಂ (ಅನುಪಲಬ್ಧ್ಯಧಿಕರಣಂ)**

ಈ ಜಗತ್ತು 'ಭಾವಃ ನ' ಜ್ಞಾನರೂಪವಾಗಿಯೂ ಇಲ್ಲ. ಯಾಕೆಂದರೆ 'ಅನುಪಲಬ್ಧೇಃ' ಜ್ಞಾನಕ್ಕೂ ತಿಳಿಯುವ (ಜ್ಞಾನದಿಂದ) ವಸ್ತುವಿಗೂ ಅಭೇದವೆಂಬುದು ಯಾರಿಗೂ ಯಾವಾಗ್ಲೂ ಅನುಭವಕ್ಕೆ ಬಾರದಿರುವುದರಿಂದ (ಸಿಗುವುದರಿಂದ) ಎಂಬ ಅರ್ಥ.

**೩೧) ಓಂ ಓಂ ಕ್ಷಣಿಕತ್ವಾಚ್ಚ ಓಂ**

ಜ್ಞಾನವು ಒಂದು ಕ್ಷಣದಲ್ಲಿ ಹುಟ್ಟಿನಷ್ಟವಾಗುತ್ತಿದ್ದು(ವಸ್ತು) ಜಗತ್ತು ಮಾತ್ರ ಸ್ಥಿರ ( ಸ್ಥಾಯಿ)ವಾದ್ದರಿಂದ ಆ ಜ್ಞಾನಜ್ಞೇಯಗಳಿಗೆ ಐಕ್ಯತೆ ಕೂಡುವುದಿಲ್ಲವೆಂದರ್ಥ.

## ೩೨) ಓಂ ಓಂ ಸರ್ವಥಾನುಪಪತ್ತೇಶ್ಚ ಓಂ

'ಸರ್ವಥಾನುಪಪತ್ತೇಃ ಚ' - ಏನೇ ಹೇಳಲು ಹೋದರೂ ಬೌದ್ಧಮತದಲ್ಲಿ ಯುಕ್ತಿಗಳಿಲ್ಲದ ( ಶೂನ್ಯ) ಕಾರಣ ಮತ್ತು ಸಮಸ್ತ ಯುಕ್ತಿಗಳಿಂದ ವಿರುದ್ಧವಾಗಿರುವುದರಿಂದಲೂ ಬೌದ್ಧಮತವು ಸರ್ವಥಾ ಗ್ರಹಿಸಲು ಯೋಗ್ಯವಲ್ಲ.

## ೩೩) ಓಂ ಓಂ ನೈಕಸ್ಮಿನ್ನಸಂಭವಾತ್ ಓಂ (ನೈಕಸ್ಮಿನ್ನಧಿಕರಣಂ)

ಜೈನರಿಂದ ಹೇಳಲ್ಪಟ್ಟ ಏಳು ಪ್ರಕಾರಗಳು 'ಏಕಸ್ಮಿನ್ ನ' ಒಂದರಲ್ಲಿಯೇ ಕೂಡಲಾರವು. ಯಾಕೆಂದರೆ 'ಅಸಂಭವಾತ್' - ಅಪ್ರಾಮಾಣಿಕವಾದ ಆ ಎಲ್ಲ ಒಂದೆಡೆ ಕೂಡುವುದಧ್ಯವಾಗಿರುವುದರಿಂದ ಎಂಬರ್ಥ. ಆ ಏಳು ಪ್ರಕಾರಗಳಾವವೆಂದರೆ - ಸತ್ವ 'ಅಸತ್ವ ಸದಸದ್ವಿಲಕ್ಷಣ', ಸತ್ವೇಸತಿ-ಸದಸದ್ವಿಲಕ್ಷಣ, 'ಅಸತ್ವೇಸತಿ-ಸದಸದ್ವಿಲಕ್ಷಣ', ಸದಸತ್ವೇಸತಿ, ಸದಸದ್ವಿಲಕ್ಷಣ ಈ ರೀತಿಯಾದ ಜೈನರಿಂದ ವರ್ಣಿತವಾಗುವ ಏಳು ಪ್ರಕಾರಗಳು ಎಂದು ತಿಳಿಯಬೇಕು.

## ೩೪) ಓಂ ಓಂ ಏವಂ ಚಾತ್ಮಾಕಾರ್ತ್ಸ್ನ್ಯಮ್ ಓಂ

ಈ ರೀತಿ ಆತ್ಮನಿಗೆ ಶರೀರದ ಪರಿಮಾಣವನ್ನು ಒಪ್ಪಿದರೆ ಮಾತ್ರ ಜೀವಿ (ಆತ್ಮ)ಗೆ ಮೊದಲು ಇರುವೆ ದೇಹ ಬಂದಾಗ ಆ ಶರೀರ ಪರಿಮಿತ ನಾನಾ ಜೀವನಿಗೆ ಸ್ಥೂಲತೆ (ಅಕಾರ್ತ್ಸ್ನ್ಯತ್ವ) ಅಂದರೆ ಜೀವಿಗೆ ಆನೆ, ಕತ್ತೆ ಮೊದಲಾದ ಶರೀರ ಬಂದಾಗ್ಗೆ ಪೂರ್ಣತೆ ಬಾರದಿರಲಿ ಹಾಗೂ ಆನೆಯಾದವನು ಇರುವೆಯಾದಾಗ್ಗೆ ಅವನಿಗೆ ಅಧಿಕತೆ ( ಅಕಾರ್ತ್ಸ್ನ್ಯತೆ) ಬರುವಂತೆ ಕೂಡ ಆಗಲಿ ಎಂಬುದನ್ನು ತಿಳಿಯಬೇಕು.

## ೩೫) ಓಂ ಓಂ ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ ಓಂ

'ಪರ್ಯಾಯಾತ್' ಕ್ರಮವಾಗಿ ಆಯಾ ಶರೀರಗಳ ಅಳತೆಯನ್ನು ಒಪ್ಪಿದರೂ ಕೂಡ 'ಅವಿರೋಧಃ' ನೀವು ಹೇಳಿದ ದೋಷ ಬರಲಾರದೆಂದು

ತಿಳಿಯಬೇಡಿರಿ. ಯಾಕೆಂದರೆ ಆ ದೋಷಕ್ಕೆ ಬೇರೆ (ಉಪಾಯ) ಪರ್ಯಾಯವೇ ಇಲ್ಲ. ಆದಾದರೂ ಏಕೆಂದರೆ 'ವಿಕಾರಾದಿಭ್ಯಃ' ಹಾಗೆಂದರೆ ಆಯಾ ಕಾಲದ ಅಳತೆಯ ವ್ಯತ್ಯಾಸದಂತೆ ವಸ್ತುಗಳ ವ್ಯತ್ಯಾಸ ಇದೆ ಎನ್ನಬೇಕು. ಹಾಗೆ ಹೇಳಿದರೆ ಆತ್ಮನಿಗೆ ವಿಕಾರವಿಲ್ಲವೆಂದು ಹೇಳಬೇಕು. ಹಾಗೆ ಹೇಳಿದರೆ ಅನಿತ್ಯನಾದ ಆತ್ಮನಿಗೆ ಮೋಕ್ಷಬಾರದೇ ಇರಲಿ ಹಾಗೂ ಅನೇಕ ಅನಿತ್ಯತ್ವವೆಂಬ ದೋಷ ಬರಬಹುದೆಂಬ ಅರ್ಥ.

**೩೬) ಓಂ ಓಂ ಅಂತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಾತ್ ಓಂ**

ಅನಿತ್ಯವಾದಿ ದೋಷಗಳು ಬರಲೆಂದರೆ ಅಂತ್ಯಾವಸ್ಥಿತೇಃ - ನಿಶ್ಚಯವಾಗಿಯೂ ಗಜ-ಇರುವೆ ಮೊದಲಾದ ಶರೀರದ ಪರಿಮಾಣ (ಅಳತೆ)ಯಿಂದ ಭಿನ್ನನಾದ ಆತ್ಮನಿಗೆ ಸತ್‌ಭೂತ ಮೋಕ್ಷದಲ್ಲಿಯೂ ಶರೀರಪ್ರಾಪ್ತಿ ಆಗಲಿ ಹಾಗೆ ಒಪ್ಪಿದರೆ 'ಅಂತ್ಯಾವಸ್ಥಿತೇಃ ಚ' ಮುಕ್ತಿ ಪಡೆಯುವ ಅವಸ್ಥೆಯಲ್ಲಿಯೂ 'ಅಳತೆ'ಯನ್ನು ಒಪ್ಪಿದರೆ (ಶರೀರ)ಯುಕ್ತವಾದ ಶರೀರದ ಜತೆಗೆ ಅದರ ಜತೆ (ಅವಿಚ್ಛೇದ್ಯ) ಇರುವ ಪರಿಮಾಣ ಇದ್ದೇ ಇರಬಹುದೆಂಬ ಅಭಿಪ್ರಾಯ. ಪರಮಾಣ ಯಾಕೆ ಇರಬೇಕೆದರೆ ಅದಕ್ಕೆ ಹೇಳುತ್ತಾರೆ. 'ಅಂತ್ಯೇತಿ (ಮೌಕ್ತಿಕ)' ಮುಕ್ತಿಯ ಅವಸ್ಥೆಯಲ್ಲಿ ಆತ್ಮಸ್ವರೂಪದ ಮುಕ್ತಾವಸ್ಥೆಯಲ್ಲಿಯ ಸ್ವರೂಪಸತ್ವದ ಅಳತೆ ಇಲ್ಲದೇ ಕೂಡಲಾಗದು ಎಂಬ ಅಭಿಪ್ರಾಯ. ಮೋಕ್ಷದಲ್ಲಿಯು ಶರೀರವಿದೆಯೆಂದು ಒಪ್ಪಿದರೆ ಏನಾಗುತ್ತದೆಂದರೆ ಹೇಳುತ್ತಾರೆ. 'ಉಭಯನಿತ್ಯತ್ವಾತ್' ಹಾಗಾದರೆ ಮುಕ್ತಿಯ ಕಾಲದಲ್ಲಿರುವ ಶರೀರ ಮತ್ತು ಆತ್ಮನಿಗೆ ನಿತ್ಯತ್ವ ಬರುವ ಪ್ರಸಂಗ ಬರಬಹುದೆಂದರೆ ಹಾಗೇ ಆಗಲಿ ಎಂದರೇ ಸರ್ವಪದಾರ್ಥಗಳಿಗೂ ನಿತ್ಯತ್ವವನ್ನು ಒಪ್ಪಬೇಕಾಗುತ್ತದೆ. ಯಾಕೆ? ಏನು ದೋಷವೆಂದರೆ ಈಗಿರುವ (ಮೋಕ್ಷದವಸ್ಥೆಯ ಮೊದಲಿನ) ಶರೀರಗಳಿಗೂ ನಿತ್ಯತ್ವವನ್ನು ಒಪ್ಪಬೇಕಾಗುತ್ತದೆ ಎಂದರೆ ಅದಕ್ಕೆ ಹೇಳಿದರು 'ಅವಿಶೇಷಾತ್' ಮುಕ್ತಿಕಾಲದಲ್ಲಿಯ ಈಗಿನ ಕಾಲದಲ್ಲಿರುವ ಶರೀರ

ಹಾಗೂ ಈ ಎರಡಕ್ಕೂ ಶರೀರತ್ವರೂಪ ವಿಶೇಷತೆ ಇದೆ ಎಂದರೆ ಇರುವುದಿಲ್ಲ. ಆದಕ್ಕೆ ಶರೀರದ ಪರಿಮಾಣಗಳ ಮೇಲೆ ಆತ್ಮನ ನಿತ್ಯತ್ವವನ್ನು ಸಾಧಿಸುವುದು ಯುಕ್ತ ವಾದದ್ದಲ್ಲ ಎಂಬ ಅಭಿಪ್ರಾಯ.

## ೩೭) ಓಂ ಓಂ ಪತ್ಯುರಸಾಮಂಜಸ್ಯಾತ್ ಓಂ (ಪತ್ಯುರಧಿಕರಣಂ)

'ಪತ್ಯುಃ' ಪಶುಪತಿಯಾದ ರುದ್ರನಿಗೆ ಜಗತ್ಕಾರಣನೆಂಬುವುದು ಯೋಗ್ಯವಾದದ್ದಲ್ಲ. ಯಾಕೆಂದರೆ, 'ಅಸಾಮಂಜಸ್ಯಾತ್' ಪಾರತಂತ್ರ್ಯ, ಉತ್ಪತ್ತಿ ಮೊದಲಾದ ದೋಷಗಳಿಂದ ಯುಕ್ತನಾಗಿರುವುದರಿಂದ ಜಗತ್ತಿಗೆ ಅವನು ಕಾರ ಣನೆಂಬುದೇ ಯೋಗ್ಯವಲ್ಲ.

## ೩೮) ಓಂ ಓಂ ಸಂಬಂಧಾನುಪಪತ್ತೇಃ ಓಂ

ಶಿವನು ಅಶರೀರಿಯಾಗಿದ್ದು ಅವನ ಸಂಬಂಧವಾದ ಜಗತ್ತಿಗೆ 'ಸಂಬಂಧಾ ನುಪಪತ್ತೇಃ' - ಅವನಲ್ಲಿ ಸಂಬಂಧ ಕೂಡದಿರುವುದರಿಂದ ಕರ್ತೃತ್ವವನ್ನು ಅವನಿಗೆ ಹೇಳುವುದು ಸರಿಯಲ್ಲ.

## ೩೯) ಓಂ ಓಂ ಅಧಿಷ್ಠಾನುಪಪತ್ತೇಃ ಓಂ

ಪ್ರಲಯಕಾಲದಲ್ಲಿ ಎಲ್ಲವೂ (ಎಲ್ಲರೂ) ನಾಶ ಹೊಂದುತ್ತಿದ್ದು ಮತ್ತೆ ಸೃಷ್ಟಿ ಕಾಲದಲ್ಲಿ ಪಶುಪತಿಯಾಗಲೀ ಹಾಗೂ ಎಲ್ಲವೂ ಪಂಚಭೂತಗಳ ಆಶ್ರಯತ್ವವಿಲ್ಲದಿದ್ದರಿಂದ ಜಗದಂತ್ತಪಾತಿಯಾದ ಈಶ್ವರ ನಿ(ಪಶುಪತಿ)ಗೆ ಜಗತಂಕರ್ತೃತ್ವವು ಕೂಡುವುದಿಲ್ಲ.

## ೪೦) ಓಂ ಓಂ ಕರಣವಚ್ಚೇನ್ನಭೋಗಾದಿಭ್ಯಃ ಓಂ

ಜಗತ್ಕಾರಣಭೂತವಾದ ಪಶುಪತಿಯ ಶರೀರದ ಹಾಗೆ 'ಕರಣವತ್' - ಶರೀರಕ್ಕೆ ಸದೃಶ ಅಧಿಷ್ಠಾನ ಅದಕ್ಕೆ ಸಮವಾದ ಶರೀರ ಎಂದು ಹೇಳುವುದರಿಂದ

ದೋಷಬಾರದೆಂದರೆ ದೋಷ ಬಂದೇ ಬರುತ್ತದೆ. ಯಾಕೆಂದರೆ, 'ಭೋಗಾದಿಭ್ಯಃ' ಶರೀರಜನ್ಯವಾದ ಸುಖ-ದುಃಖ ಭೋಗವೂ ಆಗಿ ಅದಕ್ಕೆ ಸಂಬಂಧಪಟ್ಟ ಮರಣಾದಿ ದೋಷಗಳೂ ಬರುವುದರಿಂದ ಪಶುಪತಿ ಜಗತ್‌ಕರ್ತಾ ಆಗಲು ಸಾಧ್ಯವಿಲ್ಲ ಎಂಬರ್ಥ.

## ೪೧) ಓಂ ಓಂ ಅಂತವತ್ವಮಸರ್ವಜ್ಞತಾ ಓಂ

ಯಾವುದರಿಂದ ಶಿವ ದೇಹವುಳ್ಳವನಾಗಿರುವನೋ ಅದರಿಂದಲೇ ಅಂತ (ನಾಶ) ಅವನಲ್ಲಿ ಇದೆ. ಯಾವನಿಗೆ ನಾಶವಿದೆಯೋ ಅವನಲ್ಲಿ ಸರ್ವಜ್ಞತೆ ಇರಲಾರದು 'ಅಸರ್ವಜ್ಞತಾ' - ಅದಕ್ಕೆ ಈಶ ಜಗತ್ಕರ್ತಾ ಅಲ್ಲ.

## ೪೨) ಓಂ ಓಂ ಉತ್ಪತ್ತ್ಯಸಂಭವಾತ್ ಓಂ (ಉತ್ಪತ್ತ್ಯಧಿಕರಣಂ)

ಕೇವಲ ಶಕ್ತಿ (ಒಬ್ಬ) ಸ್ತ್ರೀ ಜಗತ್ತಿಗೆ ಕಾರಣಳೆನ್ನಲು ಸಾಧ್ಯವಿಲ್ಲ. ಯಾಕೆಂದರೆ 'ಉತ್ಪತ್ತ್ಯಸಂಭವಾತ್' - ಶಕ್ತಿ ಹೆಸರಿನಿಂದ ಯುಕ್ತಳಾದ ಸ್ತ್ರೀಯಿಂದ ಸಂತಾನೋತ್ಪತ್ತಿ ಆಗುವುದು ಸಾಧ್ಯವೇ ಇಲ್ಲ. ಅದಕ್ಕೆ ಶಕ್ತಿ ಕಾರಣಳಲ್ಲ.

## ೪೩) ಓಂ ಓಂ ನ ಚ ಕರ್ತುಃ ಕರಣಂ ಓಂ

ಯಾಕೆಂದರೆ 'ಕರ್ತುಃ' ಶಕ್ತಿಗೆ ಅನುಗ್ರಹ ಮಾಡುವ ಶಿವನಿಗೆ 'ಕರಣಂ' ಜ್ಞಾನಾದಿ ಸಾಧನಗಳಿಲ್ಲ. ಅದಕ್ಕೆ ಪಶುಪತಿಗೆ ಶಕ್ತಿಗೆ ಅನುಗ್ರಹ ಮಾಡುವ ಯೋಗ್ಯತೆ ಇಲ್ಲ ಎಂಬರ್ಥ.

## ೪೪) ಓಂ ಓಂ ವಿಜ್ಞಾನಾದಿ ಭಾವೇವಾ ತದಪ್ರತಿಷೇದಃ ಓಂ

'ವಿಜ್ಞಾನಾದಿ ಭಾವೆ' - ಶಿವನಿಗೆ ಜ್ಞಾನ, ಇಚ್ಛಾ, ಶಕ್ತಿ ಆದಿ ಒಪ್ಪಿದರೂ 'ತದಪ್ರತಿಷೇಧಃ' ಆ ಶೈವ ಪಕ್ಷದ ನಿರಾಕರಣ ಮಾಡದಿರುವುದರಿಂದ (ಹಾಗೂ ಮಾಡುವುದರಿಂದ) ಆ ಸಿದ್ಧಾಂತವು ದೋಷಿತವಾದದ್ದೇ ಆಗಿದೆ ಎಂಬ ಅರ್ಥವು.

**೪೫) ಓಂ ಓಂ ವಿಪ್ರತಿಷೇಧಾಚ್ಚ ಓಂ**

ಎಲ್ಲ ಶ್ರುತಿ-ಸ್ಮೃತಿಗಳಿಂದ ವಿರುದ್ಧವಾಗಿರುವುದರಿಂದ ಶಕ್ತಿ ಜಗತ್ಕಾರಣವೆಂಬ ಸಿದ್ಧಾಂತವು (ಅಸಮಂಜಸ) ಅಯುಕ್ತವಾಗಿದೆ ಎಂಬರ್ಥ.

**ಇತಿ ಶ್ರೀಜಗನ್ನಾಥಯತಿಕೃತಾಯಾಂ ಸೂತ್ರದೀಪಿಕಾಯಾಂ**
**ದ್ವಿತೀಯಾಧ್ಯಾಯಸ್ಯ ದ್ವಿತೀಯಪಾದಃ ಸಂಪೂರ್ಣಂ**

## ದ್ವಿತೀಯಾಧ್ಯಾಯಸ್ಯ ತೃತೀಯಃ ಪಾದಃ ಪ್ರಾರಂಭಃ

### ೧) ಓಂ ಓಂ ನ ವಿಯದ ಶ್ರುತೇಃ ಓಂ (ವಿಯದಧಿಕರಣಂ)

'ವಿಯತ್' - ಆಕಾಶಾದಿಗಳು ಹುಟ್ಟದೇ ಇರುವುದೆಂದು ಹೇಳಲು ಬರುವುದಿಲ್ಲ. ಯಾಕೆಂದರೆ, 'ಅಶ್ರುತೇಃ' ಅಕಾಶಾದಿಗಳು ಹುಟ್ಟದಿರುವುದಕ್ಕೆ ಯಾವ ವೇದವೂ ಪ್ರಮಾಣವಾಗಿಲ್ಲ ಎಂಬ ಅರ್ಥ.

### ೨) ಓಂ ಓಂ ಆಸ್ತಿ ತು ಓಂ

ಆಕಾಶ ಹುಟ್ಟಿದೆ ಎನ್ನಲು 'ಆತ್ಮನಃ ಆಕಾಶಃ' ಇತ್ಯಾದಿ ಶೃತಿಪ್ರಮಾಣವಾಗಿ ಇರುವುದೆಂದು ಅರ್ಥ.

### ೩) ಓಂ ಓಂ ಗೌಣ್ಯಸಂಭವಾತ್ ಓಂ

'ಅನಾದಿರ್ವಾಯಮಾಕಾಶಃ' ಈ ವೇದ ವಾಕ್ಯವು ಅಮುಖ್ಯ (ಗೌಣ) ವಾದದ್ದು ಅನಾದಿತ್ವಪರವಾದದ್ದು, ಯಾಕೆಂದರೆ 'ಅಸಂಭವಾತ್' - ಆ ಶೃತಿಗೆ ಮುಖ್ಯಾರ್ಥ ಪ್ರತಿಪಾದನೆ ಮಾಡುವುದಕ್ಕೆ ಅನೇಕ ಉತ್ಪತ್ತಿ ಶೃತಿಗಳು ಸಿಗದಿರು ವುದರಿಂದ ಎಂಬ ಅರ್ಥ.

### ೪) ಓಂ ಓಂ ಶಬ್ದಾಚ್ಚ ಓಂ

'ಅಥ ಹವಾವನಿತ್ಯಾನಿ' - ಎಂಬ ಶೃತಿಬಲದಿಂದ ಶೃತಿಗೆ ಅನಾದಿತ್ವವು ಇದ್ದರೂ ಅರ್ಥ ಮಾತ್ರ ಗೌಣಾರ್ಥ ಪ್ರತಿಪಾದಕವೆನ್ನಬೇಕಂದರ್ಥ.

### ೫) ಓಂ ಓಂ ಸ್ಯಚ್ಚೈಕಸ್ಯಬ್ರಹ್ಮಶಬ್ದವತ್ ಓಂ

ಚ ಮತ್ತು (ನಿಶ್ಚಿತವಾಗಿಯೂ) 'ಬ್ರಹ್ಮಶಬ್ದವತ್' - ಹೇಗೆ ಒಂದೇ ಬ್ರಹ್ಮ ಶಬ್ದಕ್ಕೆ ಮುಖ್ಯತ್ವ ವಿಷ್ಣುವಿನಲ್ಲಿ ಅಮುಖ್ಯತ್ವ (ಗೌಣ) ಜೀವನಲ್ಲಿ ಇದೆಯೋ

ಹಾಗೆಯೇ ಒಂದು ವಿಯದಾದಿ ಶಬ್ದಕ್ಕೆ ನಿತ್ಯತ್ವವನ್ನು ಹೇಳಿದರೆ ಬ್ರಹ್ಮನಲ್ಲಿ ಮುಖ್ಯಾರ್ಥತೆ ಇದೆಯೆಂದು ತಿಳಿಯಬೇಕು.

**೬) ಓಂ ಓಂ ಪ್ರತಿಜ್ಞಾಹಾನಿರವ್ಯತಿರೇಕಾಚ್ಛಬ್ದೇಭ್ಯಃ ಓಂ**

ಮುಖ್ಯವಾದ ಆಕಾಶಕ್ಕೆ ಉತ್ಪತ್ತಿ ಇಲ್ಲವೆಂದರೆ 'ಪ್ರತಿಜ್ಞಾಹಾನಿಃ ಸ ಇದಂ ಸರ್ವಮಸೃಜತ್' ಎಂದು ವಿಷ್ಣುವಿನಲ್ಲಿ ಸೃಷ್ಟುತ್ವರೂಪ ಪ್ರತಿಜ್ಞೆಗೆ ಬಾಧಕ (ಬರುತ್ತದೆ) ಬರಲಿ. ಯಾಕೆಂದರೆ 'ಅವ್ಯತಿರೇಕಾತ್' ಆಕಾಶವರ್ಣಿತವೇದ ವಾಕ್ಯ ಸರ್ವವೇದವಾಕ್ಯಗಳಿಂದ ಬೇರೆಯಾಗಿಲ್ಲ ಮತ್ತು ಯಾವುದರಿಂದ (ವೇದ) 'ಆತ್ಮಾವಾ ಇದಂ' ಇತ್ಯಾದಿ ಸ್ಪಷ್ಟವಾದ ಶೃತಿಗಳಿಂದ ವರ್ಣನೆಮಾಡು ವುದರಿಂದ ಬ್ರಹ್ಮನಲ್ಲಿಯೇ ಮುಖ್ಯತ್ವ ಕೂಡದಿರುವುದು. ಆದರೆ ಬೇರೆಯೆಂದು ಹೇಳಲೇಬೇಕಾಗುತ್ತಿದೆ. ಅದಕ್ಕೆ ಹೇಳಿರುವ ವಾಕ್ಯ ಯುಕ್ತಿಯುಕ್ತವಾಗಿದೆ.

**೭) ಓಂ ಓಂ ಯಾವದ್ವಿಕಾರಂ ತು ವಿಭಾಗೋಲೋಕವತ್ ಓಂ**

ಎಲ್ಲಿಯವರೆಗೆ ವಿಭಾಗವಾಗುವುದಿಲ್ಲವೋ ಅಲ್ಲಿಯವರೆಗೆ ವಿಕಾರವನ್ನು ಹೊಂದುವುದಿಲ್ಲ. ವಿಕಾರಮುಕ್ತವಾದದ್ದೇ ವಿಭಕ್ತವಾಗುತ್ತದೆ. ಹಾಗೇ ಇದ್ದಾಗ್ಗೆ ವಿಯದಾ (ಆಕಾಶ)ದಿಗಳು ವಿಭಾಗ ಕೊಡ, ಕುಂಟೆ, ಆದಿಗಳಿಂದ ಬೇರೆ (ವಿಭಕ್ತ)ವಾಗುವ ವಿಕಾರಯುಕ್ತವಾಗಿಯೇ ಇದೆ. 'ಲೋಕವತ್' ಜಗತ್ತಿನಲ್ಲಿ ಯ ಈ ರೂಢಿಯಂತೆ ಇದರಿಂದ ಆಕಾಶಾದಿಗಳಿಗೆ ಸಾದಿತ್ವವೇ ಸಿದ್ಧವಾಗುತ್ತದೆ ಎಂಬ ಅರ್ಥ.

**೮) ಓಂ ಓಂ ಏತೇನ ಮಾತರಿಶ್ವಾವ್ಯಾಖ್ಯಾತಃ ಓಂ(ಮಾತರಿಶ್ವಾಧಿಕರಣಂ)**

ಏತೇನ ಈ ವಿಯದಾದಿಗಳಲ್ಲಿ ಸಾದಿತ್ವವನ್ನು ಹೇಳುವುದರಿಂದ 'ಮಾತರಿಶ್ವಾ'-ಮುಖ್ಯವಾಯುವಿನಲ್ಲಿಯೂ ಸಾದಿತ್ವ-ಜನನಾದಿಗಳಿರುವುದ

ರಿಂದ ಅವರೂ ನಿತ್ಯರಲ್ಲವೆಂದು 'ವ್ಯಾಖ್ಯಾತಃ ಉತ್ಪತ್ತಿಮಾನ್' ಎಂದು ಹೇಳಲ್ಪಡುತ್ತದೆ ಎಂಬ ಅರ್ಥ.

**೯) ಓಂ ಓಂ ಅಸಂಭವಸ್ತುಸತೋಽನುಪಪತ್ತೇಃ ಓಂ (ಅಸಂಭವಾಧಿಕರಣಂ)**

'ತು' - ನಿಶ್ಚಿತವಾಗಿಯೂ 'ಸತಃ' ವಿಷ್ಣುವಿಗೆ ಉತ್ಪತ್ತಿಯಾದಿಗಳು 'ಅಸಂಭವಃ' ಹುಟ್ಟು ಇಲ್ಲವೇ ಇಲ್ಲ. ಹಾಗೂ 'ಅಸತಃ ಸದಜಾಯತ' ಈ ವೇದದಿಂದ ಅಸದ್ಭೂತವಾದ ಆಕಾಶದಿಂದ ಉತ್ಪತ್ತಿ ಹೇಳಬಹುದೆಂದರೆ 'ಅನುಪಪತ್ತೇಃ' - ಉತ್ಪತ್ತಿ ಅಸತ್ತಿಗೆ ವಿಷ್ಣುವಿನಿಂದ ಸರ್ವಥಾ ಉತ್ಪತ್ತಿ ಇಲ್ಲವೇ ಇಲ್ಲವಂದರ್ಥ.

**೧೦) ಓಂ ಓಂ ತೇಜೋಽತಸ್ತಥಾಹ್ಯಾಹ ಓಂ (ತೇಜೋಽಧಿಕರಣಂ)**

'ತೇಜೋ' - ತೇಜಸ್ಸಿನಿಂದ ತೇಜಸಿನ ಉತ್ಪತ್ತಿ 'ಅತಃ' ಬ್ರಹ್ಮನಿಂದಲೇ ಉತ್ಪತ್ತಿ ಆಗುತ್ತದೆಯೇ ವಿನಃ ಬೇರೆಯವರಿಂದ ಇಲ್ಲ. ಯಾಕೆಂದರೆ ಬ್ರಹ್ಮೈವೇದಂ ಸರ್ವಂ ಎಂಬ ಶೃತಿಯು ಹಾಗೆ ಹೇಳಿರುವುದರಿಂದ.

**೧೨) ಓಂ ಓಂ ಪೃಥಿವ್ಯಧಿಕಾರರೂಪಶಬ್ದಾಂತರಾದಿಭ್ಯಃ ಓಂ (ಪೃಥಿವ್ಯಧಿಕರಣಂ)**

ಭೂಮಿಯಿಂದಲೇ 'ತಾಅನ್ನಮಸೃಜತ್' ಎಂಬ ಶೃತಿಯಿಂದ ಅನ್ನ ಶಬ್ದದಿಂದ ವರ್ಣಿತವಾಗಿದ್ದರೂ ಪ್ರಸಿದ್ಧಾನ್ನವಲ್ಲ. ಯಾಕೆಂದರೆ 'ಅಧಿಕಾರರೂಪ ಶಬ್ದಾಂತರಾದಿಭ್ಯಃ' ಅಧಿಕಾರ ಶಬ್ದಭೂತಪ್ರಕರಣದಲ್ಲಿ ಹಾಗೂ ರೂಪಶಬ್ದದಿಂದ ಹೇಳಿದ ಕೃಷ್ಣರೂಪವೂ ಕೇಳುತ್ತದೆ. 'ಶಬ್ದಾಂತರ' ವಿಶೇಷ ಶಬ್ದ ಪೃಥಿವಿ 'ವಾ ಅನ್ನಂ' ಈ ಶೃತಿಯ ವಿಶೇಷತೆ ಎಂಬಾರ್ಥ. 'ವೇದವಾಕ್ಯ ಅಪೌರುಷೇ

ಯವಾದ್ದರಿಂದ ಆ ವೇದವಾಕ್ಯಕ್ಕೆ ಅಪ್ರಾಮಾಣ್ಯತೆ ಇರುವುದಿಲ್ಲ. ಅದಕ್ಕೆ ಯುಕ್ತಿ ವಾಕ್ಯಾರ್ಥವೆಂದೇ ಶಬ್ದಾರ್ಥವನ್ನು ಮಾಡಬೇಕು.

## ೧೩) ಓಂ ಓಂ ತದಭಿಧ್ಯಾನಾದೇವತುತಲ್ಲಿಂಗಾತ್ ಸಃ ಓಂ (ತದಭಿಧ್ಯಾನಾಧಿಕರಣಂ)

ನಿಶ್ಚಿತವಾಗಿಯೂ ಅಭಿಧ್ಯಾನಾತ್ ತತ್ ಆ ವಿಷ್ಣುವಿನ ಧ್ಯಾನದಿಂದ ಆ ವಿಷ್ಣುವೇ ಸಂಹಾರಕನು ರುದ್ರನಲ್ಲ. ಯಾಕೆ ರುದ್ರನಲ್ಲವೆಂದರೆ 'ತದಭಿಧ್ಯಾನಾತ್' ಶೃತಿಯಲ್ಲಿ ಹೇಳಿರುವುದರಿಂದ ಆ ವಿಷ್ಣುವಿಗೆ ಧ್ಯಾನರೂಪದಿಂದ ತಿಳಿಯಲ್ಪಡುವುದರಿಂದ ನಾಶಕನಾಗಿರುವುದರಿಂದಲೂ 'ತಲ್ಲಿಂಗಾತ್' ಸಾದಿಯಾದ ಜಗತ್ತಿನ ಸಂಹಾರಕರ್ತೃತ್ವರೂಪಸಾಧಕತೆ ಇರುವುದರಿಂದರೆಂಬರ್ಥ. 'ಏವ' ಶಬ್ದವು ಭಾಷ್ಯರೀತ್ಯಾಸಂಹಾರಕರ್ತೃವೇ ಸೃಷ್ಟಿಕರ್ತಾವೆಂಬುದು ಕೈಮುತ್ತಿನ್ಯಾಯದಿಂದ ಸಿದ್ಧವಾಗುತ್ತದೆ.

## ೧೪) ಓಂ ಓಂ ವಿಪರ್ಯಯೇಣ ತು ಕ್ರಮೋತ ಉಪಪದ್ಯತೇ ಚ ಓಂ (ವಿಪರ್ಯಯಾಧಿಕರಣಂ)

ನಿಶ್ಚಿತವಾಗಿಯೂ ಯಾವುದರಿಂದ ಹುಟ್ಟು(ಟ್ಟಿ)ಸುವ ಕ್ರಮದಿಂದ 'ವಿಪರ್ಯಯೇಣ' ವಿರುದ್ಧವಾಗಿ 'ಕ್ರಮಃ' ನಾಶ(ಲಯ)ದ ಕ್ರಮವೇ ವಿನಃ ಹುಟ್ಟುವ ಕ್ರಮವಲ್ಲ. ಯಾಕೆಂದರೆ 'ಅತಮೇವ' (ವಿರುದ್ಧ) ವ್ಯುತ್ಕ್ರಮಶೃತಿಯಿಂದಲೇ ಕೂಡುತ್ತದೆ. 'ಉಪಪದ್ಯತೇ' ಆಮೇಲೆ ಹುಟ್ಟಿದವುಗಳಿಗೆ ಅಧಿಕ ಸಾಮರ್ಥ್ಯವಿರುವಂತೆ ಹೆಚ್ಚಿನ ಬಾಳ್ಕೆಯೂ ಇದೆ ಎಂಬುದು ಯೋಗ್ಯವೆಂದರ್ಥ.

## ೧೫) ಓಂ ಓಂ ಅಂತರಾವಿಜ್ಞಾನ ಮನಸಿ ಕ್ರಮೇಣ ತಲ್ಲಿಂಗಾದಿತಿನ್ನೇವಿಶೇಷಾತ್ ಓಂ (ಅಂತರಾಧಿಕರಣಂ)

ವಿಜ್ಞಾನಮನಸಿ ಅಂತರಾ ವಿಜ್ಞಾನ ಮನಸ್ತತ್ವಗಲ್ಲಿದಿರುವುದರಿಂದ ಬೇರೆಡೆ ವಿಪರೀತ ಲಯ, ಸಕ್ರಮಲಯ ಹೇಳಿದ್ದರಿಂದ ಯಾಕೆಂದರೆ? 'ಮನಸಶ್ಚವಿಜ್ಞಾನಂ'

ಎಂಬಲ್ಲಿ ವಿಜ್ಞಾನದಕಿಂತ ಮೊದಲು ಹುಟ್ಟಿದ ಮನಸ್ಸಿಗೂ ಮೊದಲೇ ನಾಶದಕ್ರಮರೂಪಸಾಧಕದರ್ಶನದಿಂದ ಎಂದಜು ಹೇಳಲೂಬಾರದು. ಯಾಕೆಂದರೆ ವಿಶೇಷತೆ ಇಲ್ಲದಿರುವುದರಿಂದ ಹಾಗೂ ವಿಜ್ಞಾನ ಮನಸ್ಸಿಗೂ ಹೇಗೆ ಹುಟ್ಟು-ಸಾವುಗಳಿವೆಯೋ ಹಾಗೆಯೇ ವಿಜ್ಞಾನಮನಸ್ಸುಗಳೆಲ್ಲ ಮೊದಲಾದವುದೆಂಬುದಕ್ಕೆ ಪ್ರಮಾಣವಿಲ್ಲ.

೧೬) ಓಂ ಓಂ ಚರಾಚರವ್ಯಪಾಶ್ರಯಸ್ತುಸ್ಯಾತ್ ತದ್ವ್ಯಪದೇಶೋಭಾಕ್ತಸ್ತದ್ಭಾವಭಾವಿತ್ವಾತ್ ಓಂ

'ಚರಾಚರವ್ಯಪಾಶ್ರಮಃ' ಈ ಶಬ್ದದಿಂದ ಕರೆಯಿಸಿಕೊಳ್ಳುವ ಇಂದ್ರಿಯಗಳು ಅವುಗಳಿಗೆ ಆಶ್ರಿತಜ್ಞಾನ, ವಿಷಯಗಳೆಂದು ಸಾಮಾನ್ಯ 'ತದ್ವ್ಯಪದೇಶಸ್ತು' ಆದರಿಂದ ಪ್ರೇರಿತ (ಹೇಳಿಸಿಕೊಂಡ) 'ಮನಸಚ್ಚವಿಜ್ಞಾನಂ' ಇದೇ ಮೊದಲಾದ ಶ್ರೋತ್ರೀಯ (ಯೋಗ್ಯರ) ವ್ಯವಹಾರದಿಂದಲೂ 'ಭಾಕ್ತಃ' ವಿಭಾಗ (ಒಂದು ಭಾಗ) ಮನ, ವಿಜ್ಞಾನ ಶಬ್ದಗಳೆಂದು ಭಾಗರೂಪವಾದ ಇಂದ್ರಿಯವೃತ್ತಿಜ್ಞಾನ ವಿಷಯರೂಪವಾದ ಒಂದು ಮಾತ್ರ ಆದರೆ ತತ್ವವಿಷಯಕವಾದದ್ದಲ್ಲ. ಯಾವ ಕಾರಣದಿಂದೆಂದರೇ 'ತದ್ಭಾವಭಾವಿತ್ವಾತ್' ಆಚರಾಚರ ಶಬ್ದದಿಂದ ಪ್ರತಿಪಾದ್ಯ ಚೇತನಾಖಚೇತನ ವಿಷಯ (ಮನೋಭಾವದಿಂದ) ಆಲೋಚನೆಯಿಂದ ಅಭಿವ್ಯಕ್ತ (ಉತ್ಪತ್ತಿ) ಯಾಗುವುದರಿಂದ ಅದರಿಂದಲೇ ಹಿಂದಕ್ಕೆ ಹೇಳಿರುವ (ಹೇತು) ಕಾರಣಗಳಿಂದ ಯಾವ ವಿಧವಾದ (ಬಾಧಕ) ತೊಂದರೆಗಳು ಬರುವುದಿಲ್ಲ ಎಂಬ ಅರ್ಥ.

೧೭) ಓಂ ಓಂ ನಾತ್ಮಾಶ್ರುತೇಃ ನಿತ್ಯತ್ವಾಚ್ಚತಾಭ್ಯಃ ಓಂ (ಆತ್ಮಾಧಿಕರಣಂ)

'ಆತ್ಮಾ' ಪರಮೇಶ್ವರನು ನಾಶ ಹೊಂದುವುದಿಲ್ಲ. 'ಅಶ್ರುತಃ' ಈಶ್ವರನಾಶ ಹೊಂದುವನೆಂದು ಯಾವವೇದವೂ ಹೇಳದೇ ಇರುವುದರಿಂದ ಅಷ್ಟೇ ಅಲ್ಲದೇ

ಆ ಪರಬ್ರಹ್ಮನು 'ಸ ನಿತ್ಯೋ ನಿರ್ಗುಣಃ' ಇತ್ಯಾದಿ ಶೃತಿಗಳಿಂದ ವಿಷ್ಣುವಿನಲ್ಲಿ ನಿತ್ಯತ್ವ ಸಾಧಿಸುವ ವೇದದಿಂದ ತಿಳಿಯುವುದರಿಂದ ಅವನಿಗೆ ಸರ್ವಥಾನಾಶವಿಲ್ಲ ವೆಂಬಾರ್ಥ.

೧೮) ಓಂ ಓಂ ಜ್ಞೋ ತ ಏವ ಓಂ ( ಜ್ಞಾಧಿಕರಣಂ)

ತಿಳಿಯಲ್ಪಡುವನೆಂದು ಜೀವನಿಗೆ ಜ್ಞ ಎಂದು ಹೇಳುವರು ಜೀವನು ಪರ ಮಾತ್ಮನಿಂದ ಅತ್ಪನ್ನನಾಗುವನೆಂದು ತಿಳಿಯುತ್ತಾನೆ. ಯಾಕೆಂದರೆ ನಾಶ ಹೊಂದಿ ದವನಿಗೆ ಹುಟ್ಟು ಎಂಬ ಶೃತಿಯಿಂದ 'ಅವಿನಷ್ಟಾ ಏವೋತ್ಪದ್ಯಂತೇ' ಶೃತಿ.

೧೯) ಓಂ ಓಂ ಯುಕ್ತೇಶ್ಚ ಓಂ

ಅನಾಧಿನಿತ್ಯನಾಗಿರುವ ಜೀವನು ಈಶ್ವರಾಧೀನನಾಗಿ ದೇಹಾದಿರೂಪ ಹುಟ್ಟು ಎಂಬ ಯುಕ್ತಿಯಿಂದಲೂ ಜೀವನು ಹುಟ್ಟು-ಸಾವುಗಳಿಂದ ಯುಕ್ತನಾ ದವನೆಂಬಾರ್ಥ.

೨೦) ಓಂ ಓಂ ಉತ್ಕ್ರಾಂತಿಗತ್ಯಾಗತೀನಾಂ ಓಂ (ಉತ್ಕ್ರಾಂತ್ಯಧಿಕರಣಂ)

'ಸೋಸ್ಮಾ....' ಇತ್ಯಾದಿ ವೇದವಾಕ್ಯದಂತೆ ದೇಹದಿಂದ ಉತ್ಕ್ರಮಣವು ಅನ್ಯಲೋಕಗಳಿಗೆ ಹೋಗುವುದು ಇವೇ ಮೊದಲಾದ ಕಾರಣಗಳಿಂದ ಜೀವ ಅಣುವಾಗಿಯೇ ಇರುವನೇ ವಿನಃ(ವಿಭು) ಯಜಮಾನ ವಿಸ್ತಾರರೂಪಿಯಲ್ಲಿ ಎಂಬಾರ್ಥ.

೨೧) ಓಂ ಓಂ ಸ್ವಾತ್ಮನಾಚೋತ್ತರಯೋಃ ಓಂ

ನಿಶ್ಚಿತವಾಗಿಯೂ ಜೀವನು 'ಸ್ವಾತ್ಮನಾ' ತನ್ನಲ್ಲಿರುವ ಪರಮಾತ್ಮನಿಂದಲೇ ಅವನ ಪ್ರೇರಣೇಯಿಂದಲೇ ಬೇರೆ ಲೋಕಕ್ಕೆ ಹೋಗುವುದು ಹಾರುವುದು

ಆಗುತ್ತದೆಯೇ ವಿನಃ ಸ್ವತಃ ಸಾಮರ್ಥ್ಯವಿಲ್ಲ. ಯಾಕೆಂದರೆ 'ಯೇತೇನ್ಯೇವಸ್ವಾತ್ಮನಾ' ಇತ್ಯಾದಿ ಉತ್ತರವಾಕ್ಯಗಳಿಂದ ಹಾಗೂ 'ಏಷಹ್ಯೇನಂ ಜೀವಂ' ಈ ವಾಕ್ಯ ಬಲದಿಂದ ಪರಮಾತ್ಮನಿಂದಲೇ ಎಲ್ಲ ಜೀವಿಗಳು ಪ್ರೇರಿತರಾಗುವರೆಂಬ ಅರ್ಥ.

## ೨೨) ಓಂ ಓಂ ನಾಣುರತಚ್ಛ್ರುತೇರಿತಿಚೇನ್ನೇತರಾಧಿಕರಣಾತ್ ಓಂ

ಆದರೂ ಜೀವನು ಸೂಕ್ಷ್ಮನೇ ಯಾಕೆಂದರೆ 'ಅತಚ್ಛ್ರುತೇಃ' - 'ವ್ಯಾತ್ವಾ ಹ್ಯಾತ್ಮಾನಃ' ಇತ್ಯಾದಿ ವೇದದಿಂದ ವಾಪ್ತತ್ವವನ್ನು ಹೇಳುತ್ತಿದ್ದು, ಪರಸ್ಪರ ವಿರುದ್ಧವಾಗಿ ಹೇಳುತ್ತದೆ ಎಂದರೆ ಹಾಗಲ್ಲ ಯಾಕೆಂದರೆ ಇತರಾಧಿಕಾರಾತ್ ವ್ಯಾಪ್ತತ್ವಶೃತಿಪರಮಾತ್ಮ ಪ್ರಕರಣವಾಗಿದ್ದು ಹೀಗೆ ವಿರುದ್ಧವಾಗಿ ತೋರಿದರೂ ದೋಷವಿಲ್ಲ ಎಂಬ ಅರ್ಥ.

## ೨೩) ಓಂ ಓಂ ಸ್ವಶಬ್ದೋನ್ಮಾನಾಭ್ಯಾಂ ಚ ಓಂ

ಒಟ್ಟುಸಾಮಾನ್ಯವಾಗಿ ಪ್ರಕರಣ (ವಿಭಾಗ) ದಿಂದ ವ್ಯಾಪ್ತತ್ವಶೃತಿಯು ವಿಷ್ಣು ಪರವೆಂದಲ್ಲ ಆದರೆ 'ಏಷ್ಯೇಹ್ಯಾತ್ಮಾಧ್ಯುದ್ಗತೋಮಾನಶಕ್ತೇಃ' ಈ ವಾಕ್ಯದಲ್ಲಿಯ 'ಸ್ವ' ಶಬ್ದದಿಂದ ಗ್ರಹಣ ಮಾಡುವ ಬ್ರಹ್ಮನನ್ನು ವರ್ಣಿಸುವ ಆತ್ಮ ಶಬ್ದದಿಂದ ಹಾಗೂ ಉನ್ಮಾನ ಶಬ್ದಯುಕ್ತ ಪರಿಮಿತ ಇತ್ಯಾದಿ ಕಾರಣಗಳಿಂದ ವ್ಯಾಪ್ತತ್ವ ಶೃತಿಯೂ ವಿಷ್ಣು ಪರವಾಗಿಯೇ ಇದೆ ವಿನಃ ಜೀವಪರವಾಗಿಲ್ಲವೆಂಬಾರ್ಥ.

## ೨೪) ಓಂ ಓಂ ಅವಿರೋಧಶ್ಚಂದನವತ್ ಓಂ

'ಚಂದನವತ್' ಯಾವ ರೀತಿ ಶ್ರೀಗಂಧರಸವು ಶರೀರದವೆಂದು ಭಾಗದಲ್ಲಿ ಬಿದ್ದರೂ ಎಲ್ಲ ಕಡೆ ವ್ಯಾಪಿಸುವಂತೆ ಜೀವನು ಅಣುವಾಗಿದ್ದರೂ ಶರೀರವನ್ನು ವ್ಯಾಪಿಸಿಕೊಂಡು ಇರುವನೆಂದು ಹೇಳಿದರೆ 'ಅವಿರೋಧಃ' ಯಾವ ವಿಧವಾದ ವಿರೋಧ ಬರಲಾರದೆಂಬ ಅರ್ಥ.

## ೨೫) ಓಂ ಓಂ ಅವಸ್ಥಿತಿವೈಶೇಷ್ಯಾದಿತಿಚೇನ್ನಾಭ್ಯುಪಗಮಾದ್ಧೃದಿಹಿ ಓಂ

ಶ್ರೀಗಂಧಕ್ಕೆ ಎಲ್ಲ ಕಡೆ ಹರಡುವುದು ಯೋಗ್ಯವೇ. ಯಾಕೆಂದರೆ 'ಅವಸ್ಥಿತಿ ವೈಶೇಷ್ಯಾತ್' ಕೆಲವು ಸ್ಥಾನದಲ್ಲಿ ದೇಹದಲ್ಲಿ ಇರುವುದರಿಂದ ಆದರೇ ಜೀವನಿಗೆ ಆ ರೀತಿ ಅವಸ್ಥಾನವಿಲ್ಲದಿರುವುದರಿಂದ ಎಂದರೆ ಯಾಕೆ ಇಲ್ಲಿ ಇದ್ದೇ ಇದೆ. 'ಹೃದಿಹ್ಯೇಷ ಆತ್ಮಾ' ಈ ಶೃತಿಯಿಂದ ಜೀವನೂ ಹೃದಯದಲ್ಲಿ ಸರಿಯಾಗಿ ಇರುವನೆಂದ ಬೇರೆ ಅವಯವಗಳಲ್ಲಿ ಇಲ್ಲದಿರುವುದರಿಂದ ಹರಿಚಂದ ಸೋದಾಹರಣೇ ಜೀವಿಗೆ ಸರಿಯಾಗಿ ಕೂಡುತ್ತದೆ.

## ೨೬) ಓಂ ಓಂ ಗುಣಾದ್ವಾಲೋಕವತ್ ಓಂ

ಮತ್ತು 'ಅಲೋಕವತ್' ಪ್ರಕಾಶಮಾನ ದೀಪವು ಒಂದು ಕಡೆಯಲ್ಲಿದ್ದರೂ ಬೆಳಕಿನರೂಪದಿಂದ ವ್ಯಾಪ್ತವಾದಂತೆ ಜೀವನೂ ಅಣುವಾಗಿದ್ದರೂ 'ಅವಿರೋಧ...' ಎಂಬ ಸೂತ್ರದಲ್ಲಿ ಹೇಳಿದ ಅಂಶದಿಂದಲೂ ಹಾಗೂ 'ಗುಣಾದ್ವಾ..' ಎಂಬ ಶೃತಿ 'ತಥಾದರ್ಶಯತಿ' ಅದಕ್ಕೆ ಎಂಬ ಅರ್ಥ. ಜೀವನಲ್ಲಿ ಈಶಾನುಗ್ರಹದಿಂದ ಅಂಶತ್ವ ಕೂಡುತ್ತದೆ.

## ೨೮) ಓಂ ಓಂ ಪೃಥಗುಪದೇಶಾತ್ ಓಂ (ಪೃಥಗಧಿಕರಣಂ)

ಜೀವನು ವಿಷ್ಣುವಿನಿಂದ 'ಪೃಥಕ್' ಬೇರೆಯಾಗಿದ್ದಾನೆ. ಯಾಕೆಂದರೆ 'ಉಪದೇಶಾತ್', 'ಭಿನ್ನೋಽಚಿಂತ್ಯಃ' ಇತ್ಯಾದಿ ವೇದದಿಂದ ವರ್ಣಿತನಾದ್ದರಿಂದ ಈಶ್ವರನಿಂದ ಜೀವನು ಭಿನ್ನನೇ ಆಗಿದ್ದಾನೆ.

## ೨೯) ಓಂ ಓಂ ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್ ಓಂ

'ಪ್ರಾಜ್ಞವತ್ ಬ್ರಹ್ಮನಂತೆ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ವೇದದಿಂದ ಈಶ್ವರನಿಗೂ ಜಗತ್ತಿಗೂ ಅಭೇದ ಹೇಳುವುದರಿಂದ ಮತ್ತು ಜೀವನಿಗೆ ತತ್ವಮಸಿ

ಇತ್ಯಾದಿ ಶ್ರುತಿಯಿಂದ ಬ್ರಹ್ಮೈಕ್ಯ ಹೇಳುವುದು ಸರಿಯೆಂದು ತೋರುತ್ತದೆ. ಯಾಕೆಂದರೆ, 'ತದ್ಗುಣಸಾರಿತ್ವಾತ್' ಜೀವನಲ್ಲಿ ಬ್ರಹ್ಮಗುಣಗಳಿಗೆ ಸಮಾನವಾದ ಜ್ಞಾನಾನಂದಾದಿ ಗುಣ ಸ್ವರೂಪವಾದ ಗುಣನಿಮಿತ್ತಸಾಮ್ಯತ್ವ ಹೇಳಿದೆ ಎಂಬರ್ಥ.

**೩೦) ಓಂ ಓಂ ಯಾವದಾತ್ಮ ಭಾವಿತ್ವಾಚ್ಚನದೋಷಸ್ತದ್ದರ್ಶನಾತ್ ಓಂ (ಯಾವದಧಿಕರಣಂ)**

'ಯಾವದದಾತ್ಮಭಾವಿತ್ವಾಚ್ಚ' ಜೀವನಲ್ಲಿ ಎಲ್ಲಿಯವರೆಗೆ ಪರಮಾತ್ಮಸತ್ ಮತ್ತು ನಿತ್ಯವಾಗಿರುವವರೆಗೆ 'ನ ದೋಷಃ, ಸೋನಾದಿನಾ' ಈ ರೀತಿ ಪುಣ್ಯ-ಪಾಪಾದಿಗಳ ತಿಳಿಸುವ ಶ್ರುತಿಗಳಿಗೆ ಅಪ್ರಾಮಾಣ್ಯದೋಷವಿಲ್ಲ. ಯಾಕೆಂದರೆ 'ತದ್ದರ್ಶನಾತ್' ಆಯೆಲ್ಲ ಶ್ರುತಿಗಳಿಗೂ 'ನಿತ್ಯೋಜೀವಃ' ಇತ್ಯಾದಿ ಶ್ರುತಿಯಲ್ಲಿ ಹೇಳಿದ ಕಾರಣ ಹಾಗೂ 'ಆತ್ಮಾನಿತ್ಯಜೀವ' ಇತ್ಯಾದಿ ಎರಡು ಸ್ಮೃತಿಗಳಿಂದಲೂ ಜೀವನಿತ್ಯತ್ವವನ್ನು ವರ್ಣಿಸಲ್ಪಟ್ಟಿದೆ.

**೩೧) ಓಂ ಓಂ ಪುಂಸ್ತ್ವಾದಿವತ್ತ್ವಸ್ಯಸತೋಭಿವ್ಯಕ್ತಿಯೋಗಾತ್ ಓಂ (ಪುಂಸ್ತ್ವಾಧಿಕರಣಂ)**

ನಿಶ್ಚಿತವಾಗಿಯೂ 'ಪುಂಸ್ತ್ವಾದಿಮತ್' ಪುರುಷ-ಸ್ತ್ರೀಯರಿಗೆ ಸಂತಾನೋತ್ಪತ್ತಿಶಕ್ತಿ ಸ್ವಾಭಾವಿಕವಾಗಿದ್ದರೂ ಯೌವನದಲ್ಲಿ ಮಾತ್ರ ಅದು ಅಭಿವ್ಯಕ್ತವಾಗುವ ಹಾಗೆ 'ಸತಃ' ಜೀವಸ್ವರೂಪಭೂತವಾದ ಯುಕ್ತಿಯ ಪೂರ್ವದಲ್ಲಿಯೂ ಇದ್ದೇ ಇರುವ ಈ ಜ್ಞಾನಾನಂದಾದಿಗಳಿಗೆ 'ಅಭಿವ್ಯಕ್ತಿಯೋಗಾತ್' ಮುಕ್ತಿಯ (ಪ್ರಾಪ್ತಿ) ಅಭಿವ್ಯಕ್ತಿ ನಿಮಿತ್ತವಾದ ಉಪಾಯದಿಂದ (ಯೋಗಾತ್) 'ಆನಂದೀ ಭವತಿ' ಈ ಶ್ರುತಿಯು ಕೂಡುತ್ತಿದ್ದು ಜೀವನಲ್ಲಿಯ ಆನಂದಾದಿರೂಪಿಯಾಗಿಯೇ ಇದ್ದನೆಂಬರ್ಥ.

## ೩೨) ಓಂ ಓಂ ನಿತ್ಯೋಪಲಬ್ಧ್ಯನುಪಲಬ್ಧಪ್ರಸಂಗೋ ಅನತರನಿಯ ಮೊವಾನ್ಯಥಾ ಓಂ

ಹಾಗ ಆನಂದಾದಿ ವಿಶಿಷ್ಟ ಜೀವಬ್ರಹ್ಮರಲ್ಲಿಯ ವ್ಯವಸ್ಥಿತ ವಿಭಾಗದ ಅರ್ಥ ತೋರಿಸುವ ಅನುಭವದಿಂದ ಕಾಣುವುದು 'ಉಪಲಬ್ಧಿಃ' ಅನ್ಯಥಾ ಜೀವನಿಗೆ ಆನಂದಾದಿರೂಪ ಒಪ್ಪಿ ಮತ್ತೆ ಆವರಣ ಒಪ್ಪದಿದ್ದರೆ ಉಪಲಬ್ಧ (ಸಿಗುವ ಸಿಗದಿರುವ) ಅನುಪಲಬ್ಧ ಬರಬಹುದು. ಕಾರಣ ಯಥಾಯೋಗ್ಯ ಸಂಬಂಧ ಹಚ್ಚಬೇಕು. ಮುಕ್ತಿಯೋಗ್ಯರಿಗೆ ನಿತ್ಯದಲ್ಲಿಯೂ ಆನಂದಾನುಭವವಾಗಲಿ. ಹಾಗೂ ತಮೋಯೋಗ್ಯ ನಿತ್ಯದುಃಖಾನುಭವ ವಿಸ್ರಮತಿಗಳಿಗೆ ನಿತ್ಯ ಸುಖ-ದುಃಖಾನುಭವ (ಮಿಶ್ರ) ಸಮಾನವಾಗಿಯೇ ಆಗಲಿ ಎಂದರೆ ಅದಕ್ಕೆ ಪ್ರತಿಬಂಧಕರೂಪ ಆವರಣ ಹೋದ ಮೇಲೆ ಎಂಬ ಅರ್ಥ. ಅದಕ್ಕೆ ಜೀವನಿಗೆ ಆವರಣವನ್ನು ಒಪ್ಪಲೇಬೇಕು ಎಂಬ ಅಭಿಪ್ರಾಯ.

## ೩೩) ಓಂ ಓಂ ಕರ್ತಾಶಾಸ್ತ್ರಾರ್ಥವತ್ವಾತ್ ಓಂ (ಕರ್ತೃತ್ವಾಧಿಕರಣಂ)

ಜೀವನೂ ಕೂಡ ಕರ್ತಾ ಆಗಿದ್ದಾನೆ. ಯಾಕೆಂದರೆ ಹಾಗಿದ್ದಾಗಲೇ 'ಶಾಸ್ತ್ರಾರ್ಥವತ್ವಾತ್' ವಿಧಿನಿಷೇಧರೂಪಶಾಸ್ತ್ರದ ಪ್ರಯೋಜನ ನಿಮಿತ್ತ ಹಾಗಿಲ್ಲದಿದ್ದರೆ ಶಾಸ್ತ್ರಕ್ಕೆ ವ್ಯರ್ಥತೆ ಬರಬಹುದಾಗಿದೆ.

## ೩೪) ಓಂ ಓಂ ವಿಹಾರೋಪದೇಶಾತ್ ಓಂ

ಜಕ್ಷನ್ ಕ್ರೀಡನ್ ಇತ್ಯಾದಿ ವೇದವಾಕ್ಯದಿಂದ (ಜೀವ) ಮುಕ್ತನಾದವನಿಗೆ ವಿಹಾರಮಾಡುವುದು ಕೂಡುತ್ತದೆ. ಇದರಿಂದ ಜೀವನಲ್ಲಿ ಪಾರಮಾರ್ಥಿಕ ಕರ್ತೃತ್ವ ಕೂಡುತ್ತದೆ. ಕಾಲ್ಪನಿಕತೆ ಇರುವುದಿಲ್ಲವೆಂಬ ಅರ್ಥ.

**೩೫) ಓಂ ಓಂ ಉಪಾದಾನಾತ್ ಓಂ**

ಮೋಕ್ಷದ ಸಲುವಾಗಿ ಜೀವನಿಗೆ ಸಾಧನಾದಿ ಅನುಷ್ಠಾನ ಕಂಡು ಬರುವುದರಿಂದ ಅದರಿಂದ ಫಲವೂ ಕಾಣುತ್ತಿದ್ದು ಜೀವಸಂಸಾರದಲ್ಲಿಯೂ ಕೂಡ ಜೀವನ ಕರ್ತೃತ್ವ ಕಾಲ್ಪನಿಕವೆಂದು ತಿಳಿಯಬೇಕೆಂದರ್ಥ.

**೩೬) ಓಂ ಓಂ ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇ ನಿರ್ದೇಶ ವಿಪರ್ಯಯಃ ಓಂ.**

'ಕ್ರಿಯಾಯಾಂ ಆತ್ಮಾನಮೇವಲೋಕಮುಪಾಸೀತ' ಈ ರೀತಿ ಹೇಳಿದ ಉಪಾಸನಾ ರೂಪಕ್ರಿಯೆಯಲ್ಲಿ ಜೀವನಿಗೆ ಕರ್ತೃತ್ವವನ್ನು ಹೇಳಲ್ಪಟ್ಟಿದ. 'ವ್ಯಪದೇಶಾತ್' - ಕರ್ತಾ ಜೀವನಾಗದಿದ್ದರೆ ಅವನಲ್ಲಿ ಕರ್ತೃತ್ವ ಕೂಡದಿರಬಹುದು. 'ನಿರ್ದೇಶ ವಿಪರ್ಯಯ' (ವೈಪರೀತ್ಯ) ಬರಲಿಯೆಂದು ಕಾಣುತ್ತದೆ. 'ಆತ್ಮೈವೋಪಾಸೀತ' ಈ ಮೊದಲಾದ ವಾಕ್ಯಕ್ಕೆ ವಿಪರ್ಯಯತೆ ತೋರುವುದು.

**೩೭) ಓಂ ಓಂ ಉಪಲಬ್ಧಿವದನಿಯಮಃ ಓಂ**

'ಉಪಲಬ್ಧಿವತ್' ಪಡೆಯುವ ಹಾಗೇ (ಜ್ಞಾನವನ್ನು) ಜ್ಞಾನಕ್ಕೆ 'ಆ ನಿಯಮ' ಸ್ವೇಚ್ಛೆಯಿಂದ ಪ್ರವರ್ತನಾದರೇ ಜ್ಞಾನ ಅವನಿಗೆ ಸಿಗಲಾರದು. ಹಾಗೂ ಕಾರ್ಯದಲ್ಲಿಯೂ ಯೋಗ್ಯಫಲ ಸಿಗದಿರುವುದು ಯೋಗ್ಯವೇ.

**೩೮) ಓಂ ಓಂ ಶಕ್ತಿವಿಪರ್ಯಯಾತ್ ಓಂ**

ಜೀವ ಮತ್ತು ಈಶ್ವರರಲ್ಲಿ 'ಶಕ್ತಿವಿಪರ್ಯಯಾತ್' ಪೂರ್ಣ. ಅಪೂರ್ಣ ಎಂಬ ಭೇದ (ವಿಭಾಗ) ದಂತೆ ಕರ್ತೃತ್ವದಲ್ಲಿಯೂ ಕೂಡ ಸ್ವತಂತ್ರ-ಪರತಂತ್ರ ಎಂಬ ರೀತಿಯಿಂದ ಪರಸ್ಪರವಾಗಿ ಭಿನ್ನವಾಗಿರುವುದೆಂಬ ಅರ್ಥ. ಅಥವಾ ಜೀವನಲ್ಲಿ

ಪೂರ್ಣಶಕ್ತಿ ಇಲ್ಲದಿರುವುದರಿಂದ ಅವನಲ್ಲಿ ಸ್ವತಂತ್ರ ಕರ್ತೃತ್ವ ಎನ್ನುವುದು ಸರ್ವಥಾ ಇರುವುದಿಲ್ಲ.

**೩೯) ಓಂ ಓಂ ಸಮಾಧ್ಯಭಾವಾಚ್ಚ ಓಂ**

'ಸಮಾಧಿ' ಸಾಕು ಎಂಬ ಬುದ್ಧಿ ಅದು ಜೀವನಲ್ಲಿ ಇಲ್ಲದಿರುವಾದರಿಂದ ಜೀವನಲ್ಲಿ ಸ್ವತಂತ್ರಕರ್ತೃತ್ವ ಇಲ್ಲದೇ ಪರತಂತ್ರಕರ್ತೃತ್ವವೇ ಇರುತ್ತದೆ.

**೪೦) ಓಂ ಓಂ ಯಥಾ ಚ ತಕ್ಷೋಭಯಥಾ ಓಂ**

'ಯಥಾ ತಕ್ಷಾ: (ಸ್ಥಪತಿ)' ಬಡಿಗನು ಮನೆಯನ್ನು ಕಟ್ಟಿಸುವ ಹಾಗೂ ಕಟ್ಟುವುದಕ್ಕೆ ಆದೇಶ ಮಾಡುವನೋ ಹಾಗೆಯೇ ಪರಮಾತ್ಮನ ಅಧೀನನಾದ ಜೀವಿಯೂ ಕರ್ತಾ ಎಂದು ಹೇಳಿಸಿಕೊಳ್ಳುವುದು ಸಾಧ್ಯವಿದೆ ಎಂಬ ಅರ್ಥ.

**೪೧) ಓಂ ಓಂ ಪರಾತ್ತು ತಚ್ಛ್ರುತೇಃ ಓಂ**

ಒಟ್ಟು ಜೀವನಲ್ಲಿರುವ ಕರ್ತೃತ್ವಾದಿ ಶಕ್ತಿಗಳು 'ಪರಾತ್ತು' ಪರಮಾತ್ಮನ ಅಧೀನವಾಗಿಯೇ ಇರುತ್ತದೆ. ಯಾಕೆಂದರೆ 'ಕರ್ತೃತ್ವಂ ಕರಣತ್ವಂ' ಹೀಗೆ ಜೀವನ ಕರ್ತೃತ್ವವು ಈಶ್ವರಾಧೀನವಾಗಿಯೇ ಇದೆ ಎಂದು ಕೇಳಿದ ಕಾರಣ ತದಧೀನವೇ ಆಗಿದೆ ಎಂಬ ಅರ್ಥ.

**೪೨) ಓಂ ಓಂ ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷೇಧಾವೈಯರ್ಥ್ಯಾದಿಭ್ಯಃ ಓಂ**

ನಿಶ್ಚಿತವಾಗಿಯೂ ಯಾವ ಪರಬ್ರಹ್ಮನು ವಿಹಿತ ಪ್ರತಿಷೇಧಾವೈಯರ್ಥ್ಯಾದಿಭ್ಯಃ ವಿಧಿನಿಷೇಧರೂಪಶಾಸ್ತ್ರಕ್ಕೆ ವೈಯರ್ಥ್ಯ ಬರಬಾರದೆಂದೇ ಈಶ್ವರನು ತನ್ನಲ್ಲಿ ವೈಷಮ್ಯ ನೈರ್ಘೃಣ್ಯ ಪರಿಹಾರದಕೋಸ್ಕರವಾಗಿಯಾದರೂ 'ಕೃತಪ್ರಯತ್ನಾಪೇಕ್ಷಃ' ಜೀವರ ಕರ್ಮ, ಪ್ರಯತ್ನ ಯೋಗ್ಯತೆಗಳನ್ನು ತಿಳಿದು ಅವರ

ಅಪೇಕ್ಷೆಯಂತೆ ಜೀವನನ್ನು ಪ್ರೇರಿಸುತ್ತಾನೆ. ಈ ಎಲ್ಲ ಅಪೇಕ್ಷೆ ಇಲ್ಲದೇ ಮಾಡುವುದಿಲ್ಲ. ಅದಕ್ಕೆ ಜೀವನ ಎಲ್ಲ ಶಕ್ತಿ ವಿಷ್ಣ್ವಾಧೀನವಾಗಿದ್ದರೂ ಅವನ (ಜೀವನ) ಅಪೇಕ್ಷಿತವಾದ ಕಾರ್ಯ ಮಾಡುವುದು ಅವನಲ್ಲಿ ಇದ್ದೇ ಇದೆ ಎಂಬ ಅರ್ಥ.

**೪೩) ಓಂ ಓಂ ಅಂಶೋನಾನಾವ್ಯಪದೇಶಾದನ್ಯಥಾಚಾಪಿ ದಾಶಕಿತವಾದಿತ್ವಮಧೀಯತ ಏಕೇ ಓಂ (ಅಂಶಾಧಿಕರಣಂ)**

ಜೀವನು ಪರಮಾತ್ಮನ ಅಂಶನಾಗಿಯೇ ಇರುವನು. ಕೇವಲ -ತಂದೆ-ಮಗ ಆದಿ ಸಂಬಂಧದಿಂದ ಅಲ್ಲಿ ಉಪಜೀವಕ ಸಂಬಂಧಾಂಶತ್ವವಿದ್ದರೆ ಪರಮೇಶ್ವರನಲ್ಲಿ ಉಪಜೀವ್ಯರೂಪಸಂಬಂಧವಿದೆ. ಯಾಕೆಂದರೆ, 'ನಾನಾವ್ಯಪದೇಶಾತ್' 'ಮೂಮಾಂರಕ್ಷತು' ಈ ಪ್ರಕರಣದಲ್ಲಿ ತಂದೆ, ತಮ್ಮ, ಅಣ್ಣ ಆದಿ ಅನೇಕ ಪ್ರಕಾರವಾಗಿ ಜೀವ-ಈಶ್ವರರಲ್ಲಿ ಸಂಬಂಧ ಹೇಳಲ್ಪಟ್ಟಿದೆ. ಕೆಲವು ಶಾಖೆಯಲ್ಲಿ 'ಅನ್ಯಃ ಪರಃ ಅನ್ಯೋ ಜೀವಃ' ಈ ಜೀವನನ್ನು ಪರಮಾತ್ಮನಿಂದ ಭಿನ್ನನೆಂದು ಪಠಣ ಮಾಡುತ್ತಾರೆ ಮತ್ತು ಬೇರೆ ಶಾಖೆ (ವಿಭಾಗ)ದಲ್ಲಿ 'ಬ್ರಹ್ಮದಾಶಾಃ' ಬ್ರಹ್ಮನಿಗೆ 'ದಾಶಕಿತವಾದಿತ್ವ' ದಾಶಕಿತ ಶಬ್ದದಿಂದ ಮುಕ್ತ ವಿಶೇಷಜೀವ ಮೊದಲಾದ ಅಭಿಪ್ರಾಯವಿದ್ದು, ಅದು ಅಭೇದವಾದಂತೇ ತೋರುತ್ತದೆ. ಆದರೆ ದಾಶಕಿತವ ಎನ್ನುವುದರಿಂದಲೇ ಜೀವನಿಗೆ ಆ ಬ್ರಹ್ಮತ್ವವನ್ನು ಹೇಳಲ್ಪಡುತ್ತದೆ. ಇದರಿಂದ ಜೀವನು ಬ್ರಹ್ಮನ ಅಂಶತ್ವರೂಪ ಅಂಶವಂತನು ಎಂಬಾರ್ಥ ವ್ಯಕ್ತವಾಗುತ್ತದೆ.

**೪೪) ಓಂ ಓಂ ಮಂತ್ರವರ್ಣಾತ್ ಓಂ**

'ಪಾದೋಽಸ್ಯ' ಈ ವೇದ (ಶೃತಿ) ದಿಂದ ಜೀವನು ಪರಮಾತ್ಮನ ಅಂಶವೆಂದು ವರ್ಣಿತವಾಗಿದೆ ಎಂಬ ಅರ್ಥ.

**೧೫) ಓಂ ಓಂ ಅಪಿಸ್ಮರ್ಯತೆ ಓಂ**

ಜೀವನ ಅಂಶತ್ವವು 'ಅಮೃತಾಂಶೋ' ಇತ್ಯಾದಿ ಕೃಷ್ಣಾದಿಗಳಿಂದ (ಅಂಶ) ಎಂದು ಸ್ಮೃತ್ಯಾದಿಗಳಿಂದ ಹೇಳಲ್ಪಡುತ್ತವೆ ಎಂಬ ಅರ್ಥ.

**೪೬) ಓಂ ಓಂ ಪ್ರಕಾಶಾದಿವನ್ನೈವಂ ಪರಃ ಓಂ**

ಜೀವನು ಪ್ರಕಾಶಾದಿಗಳಂತೆ (ದೀಪದ ಹುಳು) ಖಿಡಿಗಳೆಂಬ ಅಗ್ನಿಯ ಅಂಶಭೂತವಾಗಿರುವಂತ ಆದರೆ ಜೀವ-ಪರಮಾತ್ಮರಲ್ಲಿ ವಿಭಿನ್ನಾಂಶವಿದೆ. ಈ ಭಿನ್ನಾಂಶದಿಂದ ಭಿನ್ನವಾದ ಮತ್ಸ್ಯಾದಿರೂಪ ವಿಷ್ಣುಸ್ವಾಂಶರೂಪ. ಅವು ಜೀವರಂತೆ ವಿಭಿನ್ನಾಂಶಗಳಲ್ಲ. ಅವು ರಾಮಕೃಷ್ಣಾದಿರೂಪಗಳು 'ಕಿಂತು ಪ್ರಕಾಶಾದಿವತ್' ಕಾಲ, ಅಗ್ನಿ, ಖಿಡಿ ಮೊದಲಾದವುಗಳಲ್ಲಿರುವ ಅಗ್ನಿತೇಜಾದಿಗಳಂತೆ ಈಶನಿಂದ ಅಭಿನ್ನಅಂಶಗಳಾಗಿಯೇ ಇವೆ ಎಂಬ ಅರ್ಥ.

**೪೭) ಓಂ ಓಂ ಸ್ಮರಂತಿ ಚ ಓಂ**

ಆದರೆ ಸ್ಮೃತಿ ಪ್ರಮಾಣಜ್ಞರು 'ಏತೆ ಸ್ವಾಂಶಕಲಾಃ' ಈಶ-ಜೀವರಲ್ಲಿ ಭಿನ್ನಾಂಶ ಅಭಿನ್ನಾಂಶತ್ವರೂಪವಾಗಿ ಹೇಳುತ್ತಾ ಎಂದು ಕೂಡ ಅರ್ಥ.

**೪೮) ಓಂ ಓಂ ಅನುಜ್ಞಾಪರಿಹಾರೌದೇಹಸಂಬಂಧಾಜ್ಯೋತಿರಾದಿವತ್ ಓಂ**

ಯಾವ ಅಂಶತ್ವವು 'ಜ್ಯೋತಿರಾದಿವತ್' ಕಣ್ಣುಗುಡ್ಡೆಯಲ್ಲಿರುವ ಜಲಾಭಿಮಾನಿ ದೇವತೆಗಳಾದ (ಭ್ರಷ್ಟ) ಅವರ ದೇವತೆಗಳ 'ತತ್ತದ್ದೇಹಸಂಬಂಧಾತ್' ಸೂರ್ಯ-ವರುಣ ಮೊದಲಾದ ದೇವತೆಗಳ ಆಜ್ಞೆಯಂತೆ ಆ ದೇವತೆಗಳ ಆಜ್ಞೆಯಂತೆ ಜೀವನಿಗೂ ಆಯಾ ದೇಹಸಂಬಂಧವಿದ್ದ ಕಾರಣದಿಂದ ಅಂಶತಾ, ಅನುಜ್ಞಾಪರಿಹಾರೌ ದೇವರ ಅನುಜ್ಞೆಯಂತೆ ಪ್ರವೃತ್ತಿ ಹಾಗೂ ಪರಿಹಾರವಿದ್ದ ಅಂಶ

ದಂತಂ ಮತ್ಸ್ಯಾದ್ಯಂಶ ಹಾಗಿಲ್ಲದೇ ಸಾಂಶವಾಗಿದೆ. ಸಾಂಶವೆಂದರೆ ಸೂರ್ಯ. ಅವರ (ಪ್ರಭಾ) ಬೆಳಕು ಆ ಸೂರ್ಯಾಧೀನ ಪ್ರವೃತ್ತಿಮಾನ್ ಆದಂತೆ ಈಶಾಧೀನ ಪ್ರವೃತ್ತಿಯುಳ್ಳದ್ದಾಗಿದೆ. ಕಾರಣ, ಜೀವ ಹಾಗೂ ಪರಮಾತ್ಮರಲ್ಲಿರುವ ಅಂಶತ್ವವು ಅತ್ಯಂತ ವಿಭಿನ್ನಾಂಶವೇ ಆಗಿದೆ. ಈಶ್ವರನ ಮತ್ಸ್ಯಾದಿರೂಪಗಳಲ್ಲಿ ಅಂಶಸಾಂಶವಾಗಿಯೇ ಇದೆ ಎಂದು ಸಿದ್ಧವಾಗುತ್ತದೆ ಎಂಬ ಅರ್ಥ.

## ೪೯) ಓಂ ಓಂ ಅಸಂತತೆಶ್ಚಾವ್ಯತಿಕರಃ ಓಂ

ಜೀವನಲ್ಲಿ ಯೋಗ್ಯಶಕ್ತ್ಯಾದಿಗಳಿಲ್ಲದಿದ್ದು ಮತ್ಸ್ಯಾದಿಗಳಲ್ಲಿ ಆ ಶಕ್ತ್ಯಾದಿಗಳು ಇರುವುದರಿಂದ 'ಅವ್ಯತ್ತಿತರಃ' ಜೀವೇಶ್ವರರಲ್ಲಿ ಭಿನ್ನಾ ಅಭಿನ್ನವೆಂಶವೆಂದು ಪರಸ್ಪರ ವ್ಯತ್ಯಾಸವಿಲ್ಲದೆಂದು ಯಾವವಿಧವಾದ ವ್ಯತ್ಯಾಸವಿಲ್ಲ ಈ ರೀತಿ ಅರ್ಥ.

## ೫೦) ಓಂ ಓಂ ಆಭಾಸ ಏವ ಚ ಓಂ

ಯಾವ ಕಾರಣದಿಂದ ಜೀವನು ಪರಮೇಶ್ವರನಿಂದ ಆಭಾಸನಾಗಿರುವನೋ 'ಆಭಾಸ ಏವ ಚ' ಪ್ರತಿಬಿಂಬನೇ ಆಗಿದ್ದಾನೆ. ಆದರೆ ಮತ್ಸ್ಯಾದಿರೂಪ ಹಾಗಲ್ಲ. ಅದಕ್ಕೆ ಹೇಳಿರುವ ವಿಷಯದಲ್ಲಿ ವ್ಯತ್ಯಾಸವಿರುವುದಿಲ್ಲ ಎಂಬ ಅರ್ಥ.

## ೫೧) ಓಂ ಓಂ ಅದೃಷ್ಟಾನಿಯಮಾತ್ ಓಂ

ಅದೃಷ್ಟ ಪದದಿಂದ ತೋರುವ ವಿದ್ಯಾ, ಕರ್ಮ, ಸಂಸ್ಕಾರ ಇವುಗಳಿಂದ ನಿಯಮಿತವಿಲ್ಲದಿರುವುದು. ಯಾಕೆಂದರೆ ನಿಯಮವೆಂದರೆ ವಂದೇ ರೀತಿ ಇರುವುದು ಎಂದರ್ಥ. ಅನಿಯಮವೆಂದರೆ ಅನೇಕ ವಿಧ ಮತ್ತು ವೈಚಿತ್ರ್ಯ ಅವೈಚಿತ್ರ್ಯತೆಯಿಂದ ಪ್ರತಿಬಿಂಬ ಭೂತ ಜೀವರಿಗೂ ಕೂಡ ದೇವ, ದಾನವ, ಮಾನುಷ ಎಂಬ ಅನೇಕ ರೂಪ ವೈಚಿತ್ರ್ಯತೆ ಯೋಗ್ಯವೆನಿಸುತ್ತದೆ ಎಂಬ ಅರ್ಥ.

**೫೨) ಓಂ ಓಂ ಅಭಿಸಂಧ್ಯಾದಿಷ್ವಪಿ ಚೈವಂ ಓಂ**

ಯಾಕೆಂದರೆ 'ಅಭಿಸಂಧ್ಯಾದಿಷು' ಕಾಮಕ್ರೋಧಾದಿ ದೋಷಗಳ ನಿಮಿತ್ತವಾಗಿಯಾದರೂ ವೈಚಿತ್ರ್ಯ ತೋರಬಹುದು. ಹಾಗೂ ಅದೃಷ್ಟಾದಿ ವೈಚಿತ್ರ್ಯತೆಯಿಂದಲೂ ವೈಚಿತ್ರ್ಯವೆಂದು ಹೇಳಬಹುದು. ಅದಕ್ಕೆ ಅವಶ್ಯಕವಾದ ಅದೃಷ್ಟರೂಪ ವೈಚಿತ್ರ್ಯವೇ ಜೀವನಲ್ಲಿರುವ ವೈಚಿತ್ರ್ಯವೇ ಕಾರಣವಾಗಿರುವುದು ವಿನಃ ದೋಷಾದಿ ವೈಚಿತ್ರ್ಯವೆಂದು ಹೇಳಲು ಬರುವುದಿಲ್ಲ ಎಂಬ ಅರ್ಥ.

**೫೩) ಓಂ ಓಂ ಪ್ರದೇಶಾದಿತಿಚೇನ್ನಾಂತರ್ಭಾವಾತ್ ಓಂ**

ಯಾವ ಸ್ವರ್ಗ, ಭೂಮಿ, ನರಕ ಮೊದಲಾದ ಸ್ಥಾನ ವ್ಯತ್ಯಾಸದಿಂದಲೇ ಸುರ-ನರ ಮೊದಲಾಗಿ ಜನರ ವೈಚಿತ್ರ್ಯವಿರಲಿ ಅದೃಷ್ಟಾದಿವೈಚಿತ್ರ್ಯದಿಂದ ಆಗದಿರಲಿ ಎಂದರೆ ಹಾಗಲ್ಲ 'ಪ್ರದೇಶಾತ್' ಯಾಕೆಂದರೆ 'ಅಂತರ್ಭಾವಾತ್' ಸ್ಥಾನವೈಚಿತ್ರ್ಯತೆಗೆ ಯಾವುದು ಕಾರಣವೆಂದರೆ ಕಾರಣದಿಂದಲೇ ಆ ಕಾರಣದ ವೈಚಿತ್ರ್ಯದಿಂದಲೇ ಅದೃಷ್ಟವೈಚಿತ್ರ್ಯವು ಬರುವುದೆಂಬುದು ಮೊದಲಿನದರಲ್ಲಿಯೇ ಸಮಾವೇಶ (ಅಂತರ್ಭೂತ)ಗೊಳ್ಳುತ್ತದೆ. ಅದಕ್ಕೆ ಪರಮ ಅವಶ್ಯಕವಾದ್ದರಿಂದ ಅದೃಷ್ಟವೈಚಿತ್ರ್ಯವೇ ಸುರನರಾದಿ ವೈಚಿತ್ರ್ಯತೆಗೆ ನಿಯಾಮಕವಾದದ್ದೆಂದೇ ತಿಳಿಯಬೇಕೆಂದರ್ಥ.

**ಇತಿ ಶ್ರೀಜಗನ್ನಾಥಯತಿವಿರಚಿತಾಯಾಂ ಸೂತ್ರದೀಪಿಕಾಯಾಂ ದ್ವಿತೀಯಾಧ್ಯಾಯಸ್ಯ ತೃತೀಯಃ ಪಾದಃ**

ಸೂತ್ರದೀಪಿಕಾ ಕನ್ನಡಾನುವಾದ ಉಮರ್ಜಿ ಪ್ರಹ್ಲಾದನಿಂದ ರಚಿತವಾದದ್ದರಲ್ಲಿ

ಎರಡನೇ ಅಧ್ಯಾಯದ ಮೂರನೇ ಪಾದ ಸಮಾಪ್ತಿ

## ದ್ವಿತೀಯಾಧ್ಯಾಯಸ್ಯ ಚತುರ್ಥಃ ಪಾದಃ ಪ್ರಾರಂಭಃ

### ೧) ಓಂ ಓಂ ತಥಾಪ್ರಾಣಾಃ ಓಂ (ಪ್ರಾಣೋತ್ಪತ್ತ್ಯಧಿಕರಣಂ)

ಯಾವ ರೀತಿ ಆಕಾಶಾದಿಗಳು ವಿಷ್ಣುವಿನಿಂದ (ಉತ್ಪನ್ನ) ಸೃಷ್ಟವಾಗುವವೋ ಹಾಗೆಯೇ ಪ್ರಾಣಗಳಾಗಲೀ ಅಥವಾ ಇಂದ್ರಿಯಾದಿಗಳಾಗಲೀ ಬ್ರಹ್ಮನಿಂದಲೇ ಹುಟ್ಟುತ್ತವೆ ವಿನಃ ಅವು ಯಾವುವೂ ಹುಟ್ಟದೇ ಇರುವಂಥವುಗಳಲ್ಲ ಎಂಬ ಅರ್ಥ.

### ೨) ಓಂ ಓಂ ಗೌಣ್ಯಸಂಭವಾತ್ ಓಂ

'ಪ್ರಾಣಾ ಏವಾನಾದಯಃ' ಈ ಅನಾದಿತ್ವವನ್ನು ವರ್ಣಿಸುವ ಶ್ರುತಿ 'ಗೌಣೀ' ಅಮುಖ್ಯವಾದದ್ದು ಅಂದರೆ ಸೂಕ್ಷ್ಮರೂಪದಿಂದ ಹುಟ್ಟು ಇಲ್ಲದವುಗಳೆಂದು ತಿಳಿಯಬೇಕು. ಯಾಕೆಂದರೆ 'ಅಸಂಭವಾತ್' ಇಂದ್ರಿಯಗಳಿಗೆ ಪ್ರಾಧಾನ್ಯವಾಗಿ ಅನಾದಿತ್ವವು ಸರ್ವಥಾ ಕೂಡುವುದಿಲ್ಲ. 'ಏತಸ್ಮಾತ್' ಇತ್ಯಾದಿ ಶ್ರುತಿಗೆ ಹೊಂದಾಣಿಕೆ (ಅಯೋಗಾತ್) ಆಗುವುದಿರುವುದರಿಂದ ಎಂಬ ಅರ್ಥ.

### ೩) ಓಂ ಓಂ ಪ್ರತಿಜ್ಞಾನುಪರೋಧಾಚ್ಚ ಓಂ

'ಸ ಇದಂ ಸರ್ವಮಸೃಜತ್' ಎಂಬ ಪ್ರತಿಜ್ಞಾ ಶ್ರುತಿಯ ಪ್ರತಿಜ್ಞಾನುಸಾರವಾಗಿಯೂ 'ಪ್ರತಿಜ್ಞಾನುಪರೋಧಾತ್' ಪ್ರಾಣಗಳಿಗೆ ಉತ್ಪತ್ತಿತ್ವವನ್ನು ಒಪ್ಪಲೇಬೇಕು.

### ೪) ಓಂ ಓಂ ತತ್ಪ್ರಾಕ್ ಶ್ರುತೇಶ್ಚ ಓಂ (ತತ್ಪ್ರಾಗಧಿಕರಣಂ)

ಅದು ಹುಟ್ಟದಿರುವ (ಅವರ್ಣಿತ) ಸ್ಮೃತಿಸಮೂಹಗಳ ನಿಮಿತ್ತವಾಗಿ 'ಚ' ಶಬ್ದವಿರುವುದು. ಅದಕ್ಕೆ ಮನಸ್ಸು ಅವುಗಳಿಂದ ಭಿನ್ನವಾದ ಇಂದ್ರಿಯಗಳಕಿಂತಲೂ ಮೊದಲು ಹುಟ್ಟಿರುವುದಿಂದ ಅದನ್ನೇ 'ಮನಃ ಸರ್ವೇಂದ್ರಿಯಾಣಿ

ಚ' ಎಂಬ ವೇದದಿಂದ ಶ್ರುತವಾಗಿದೆ. ಇದರಿಂದ ಮನಸ್ಸಿಗೆ ಉತ್ಪತ್ತಿಯಿದೆಯೇ ವಿನಃ ಹುಟ್ಟಿಲ್ಲವೆಂದಲ್ಲ.

## ೫) ಓಂ ಓಂ ತತ್ಪೂರ್ವಕತ್ವಾದ್ವಾಚಃ ಓಂ (ತತ್ಪೂರ್ವಕತ್ವಾಧಿಕರಣಂ)

'ವಾಚಃ' ವಾಗಿಂದ್ರಿಯಕ್ಕೆ ತತ್ಪೂರ್ವಕತ್ವಾತ್ ಮನ ಏವ ಪೂರ್ವರೂಪಂ ಮನಸ್ಸಿಗೆ ಕಾರಣತ್ವವನ್ನು ಹೇಳಿರುವುದರಿಂದ ವಾಗಿಂದ್ರಿಯ ಹುಟ್ಟಿದಂತೆ (ಮನಸ್ಸೂ ಉತ್ಪತ್ತಿಮಾನ್) ಆಗಿದೆ. ವಾಕ್ ಹುಟ್ಟು ಉಳ್ಳದ್ದು ಎಂಬ ಅರ್ಥ.

## ೬) ಓಂ ಓಂ ಸಪ್ತಗತೇರ್ವಿಶೇಷಿತತ್ವಾಚ್ಚ ಓಂ (ಸಪ್ತಗತ್ಯಧಿಕರಣಂ)

'ಚ' ಒಟ್ಟಾಗಿ (ಏಳು ಪ್ರಾಣ, ಐದು ಪ್ರಾಣ ಇತ್ಯಾದಿ ಪ್ರಮಾಣ ಸಮೂಹದಿಂದ) ಜಾನಕ್ಕೆ ಚಾಲನೆ ಕೊಡುವ ಇಂದ್ರಿಯ (ಜ್ಞಾನೇಂದ್ರಿಯ) ಗಳು ಏಳು ಸಂಖ್ಯೆಯಿಂದ ಯುಕ್ತವಾದವುಗಳು ಎಂಬುದು ನಿರ್ಣಿತವಾದದ್ದೆ ಆಗಿಲ್ಲ ವೆಂದು ಹೇಳಲಾಗದು. ಯಾಕೆಂದರೆ, 'ವಿಶೇಷಿತತ್ವಾತ್', 'ಸಪ್ತಪ್ರಾಣಾಃ' ಎಂದು ಶೃತಿಯಲ್ಲಿ ಗುಹಾಶಯಾ 'ನಿಹಿತ ಸಪ್ತ ಸಪ್ತ' ಎಂದು ಬುದ್ಧಿ ಜ್ಞಾಪನಾರ್ಥ 'ನಿಹಿತ' ಎಂದೂ ಜ್ಞಾನೇಂದ್ರಿಯಗಳ ಸಹಕಾರಿಯನ್ನಲ್ಲ ಹೇಳಿಲ್ಲ. ಅದು ಪ್ರಮಾಣತ್ವೇನ ಹೇಳಿದ ಈ ಎಲ್ಲ ಕಾರಣಗಳಿಂದ ಅದರಲ್ಲಿ (ಸಪ್ತತೆ) ಏಳು ಪ್ರಾಣವೆಂದು ಸಿದ್ಧವಾಯಿತೆಂದರ್ಥ.

## ೭) ಓಂ ಓಂ ಹಸ್ತಾದಯಸ್ತು ಸ್ಥಿತೇऽತೋನೈವಂ ಓಂ

'ತು' ಅದರಲ್ಲಿಯ ವಿಲಕ್ಷಣತೆಯ ಪ್ರಕಾಶಕ, ಯಾಕೆಂದರೆ 'ಹಸ್ತಾದ ಯಸ್ತು' ಕೈ ಮೊದಲಾದ ಇಂದ್ರಿಯಗಳೂ ಕೂಡ 'ಸ್ಥಿತೇ' ಅವುಗಳ ಕಾರ್ಯಗಳಲ್ಲಿ 'ತಾದರ್ಥ್ಯಸಪ್ತಮಿ' ಅಂದರೆ, ಕಾರ್ಯನಿಮಿತ್ತ. 'ಅತಃ' ಅದಕ್ಕೆ ನಮ್ಮ ವೈಲಕ್ಷಣ್ಯ ದಿಂದ ಸಂಪಾದಿತವಾದ ಎಂದು. ಹೀಗೆ ಜ್ಞಾನೇಂದ್ರಿಯ ಸಹಾಯದಿಂದ ಜ್ಞಾಪ

ಕವಾದವುಗಳು. ಅದರಿಂದ ಅವುಗಳಲ್ಲಿಯಾದರೂ (ಏಳು) ಸಪ್ತತಾ ಸಿದ್ಧವಾಯಿತೆಂದರ್ಥ.

**೮) ಓಂ ಓಂ ಅಣವಶ್ಚ ಓಂ (ಅಣ್ವಧಿಕರಣಂ)**

ಪ್ರಾಣ-ಇಂದ್ರಿಯಾದಿಗಳು ಸ್ವಾಭಾವಿಕವಾಗಿ (ಅಣು) ಸೂಕ್ಷ್ಮವಾಗಿವೆ. ಕೇವಲ ಸೂಕ್ಷ್ಮವಾಗದೇ ತೇಜೋರೂಪದಿಂದ ವ್ಯಾಪ್ತವಾಗಿಯೂ ಇವೆ ಎಂದರ್ಥ.

**೯) ಓಂ ಓಂ ಶ್ರೇಷ್ಠಶ್ಚ ಓಂ (ಶ್ರೇಷ್ಠಾಧಿಕರಣಂ)**

ಯಾವ ರೀತಿ ಈ ಇಂದ್ರಿಯ ಪ್ರಾಣಾದಿಗಳು ಹುಟ್ಟುತ್ತವೆಯೋ ಹಾಗೆಯೇ 'ಶ್ರೇಷ್ಠಃ' ಉತ್ತಮರಾದ ಮುಖ್ಯಪ್ರಾಣದೇವರೂ ವಿಷ್ಣುವಿನಿಂದ ಹುಟ್ಟುತ್ತಾರೆ. ಅವರಲ್ಲಿಯೂ ಹುಟ್ಟಿಲ್ಲವೆನ್ನಲು ಸಾಧ್ಯವಿಲ್ಲವೆಂಬ ಅರ್ಥ.

**೧೦) ಓಂ ಓಂ ನವಾಯುಕ್ರಿಯೇಪೃಥಗುಪದೇಶಾತ್ ಓಂ**

ಬಾಹ್ಯವಾಯುವಿನ ಚೇಷ್ಟಾದಿ ಕೆಲಸದಲ್ಲಿ ಹಾಗೆ ಆಗದು. ಯಾಕೆಂದರೆ 'ಏತಸ್ಮಾತ್' ಈ ರೀತಿ ಪ್ರಾಣನ ಉತ್ಪತ್ತಿಯ ವೇದ ಪ್ರತಿಪಾದನೆಗೆಂದ ಆಗಿಲ್ಲ. ಆದರೆ ಮುಖ್ಯಪ್ರಾಣನೇ ಆ ಶೃತಿ ಪ್ರತಿಪಾದ್ಯನಾಗಿದ್ದಾನೆ. ಯಾಕೆಂದರೇ 'ಪೃಥಗುಪದೇಶಾತ್' ಇಲ್ಲಿ 'ಸಪ್ರಾಣಮಸೃಜತ್' ಇತ್ಯಾದಿಗಳಲ್ಲಿ ಮುಖ್ಯವಾಯುವಿನ ಹುಟ್ಟಿನ ಹಾಗೂ ವಾಯು ಕ್ರಿಯಾ ಉತ್ಪತ್ತಿಯಿಂದ ಬೇರೆ ಎಂದು ಹೇಳಿದೆ ಎಂದು ಅರ್ಥ.

**೧೧) ಓಂ ಓಂ ಚಕ್ಷುರಾದಿವತ್ತು ತತ್ಸಹ ಶಿಷ್ಟ್ಯಾದಿಭ್ಯಃ ಓಂ (ಚಕ್ಷುರಾದ್ಯಧಿಕರಣಂ)**

ಮತ್ತು (ಹಾಗೂ) ಮುಖ್ಯಪ್ರಾಣನೂ ಚಕ್ಷುರಾದಿಗಳಂತೆ ಪರಮಾತ್ಮನ ಅಧೀನವೇ ವಿನಃ ಸ್ವತಂತ್ರನಲ್ಲ. ಯಾಕೆಂದರೆ, 'ತತ್ಸಹಶಿಷ್ಟಾದಿಭ್ಯಃ'. ಆ ಕಣ್ಣು

ಮೊದಲಾದವರ ಜೊತೆ ಮುಖ್ಯಪ್ರಾಣದೇವರೂ 'ಸರ್ವಂ ಹ್ಯೈವೈತತ್' ಇತ್ಯಾದಿ ಶೃತಿಗಳಿಂದ ಪರಾಧೀನವೆಂದು ಹೇಳಿರುವುದರಿಂದ ಮತ್ತು 'ಸರ್ವಕರ್ತಾ' ಇವೇ ಮೊದಲಾದ ವಚನಗಳಲ್ಲಿಯ ಯುಕ್ತಿಗಳಿಂದಲೂ ಮುಖ್ಯ ಪ್ರಾಣನೂ ಈಶಾಧೀನನೇ.

## ೧೨) ಓಂ ಓಂ ಅಕರಣತ್ವಾಚ್ಚನ ದೋಷಸ್ತಥಾಹಿ ದರ್ಶಯತಿ ಓಂ

ಮುಖ್ಯಪ್ರಾಣನಿಗೆ (ಕರಣ) ಇಂದ್ರಿಯಗಳಿವೆ. ಕರ್ತೃವಿನಿಂದ ಪ್ರಯೋಜಿಸಲು ಯೋಗ್ಯ ಇಂದ್ರಿಯಗಳಿಂದ ಅಭಿನ್ನನಾದ್ದರಿಂದಲೂ ಕಣ್ಣು ಮೊದಲಾದವು (ತದ್ರೂಪವಾಗಿದ್ದು) ಅದರಂತೆ ಕಾಣುತ್ತಿದ್ದು. ಈ ರೀತಿ ವಿಲಕ್ಷಣತ್ವ ಮುಖ್ಯವಾಯುವಿನಲ್ಲಿ ಇದ್ದುದ್ದರಿಂದಲೇ ಬೇರೆಯವರಿಕಿಂತಲೂ ಉತ್ತಮನೆಂದು ಸಿದ್ಧವಾಗುತ್ತದೆ. 'ನ ದೋಷಃ' - ಮುಖ್ಯ ಪ್ರಾಣನಿಗೆ ಸ್ವತಂತ್ರನೆಂದು ಹೇಳುವ ಶೃತಿಗಳಿಗೆ (ಅವಾಂತರ) ಒಳಗಿನಿಂದ ಈಶ್ವರಪರ ಅಲ್ಲವೆಂದರೂ ದೋಷವಿಲ್ಲ. ಯಾಕೆ ಈ ರೀತಿಯಾದ ಕಲ್ಪನೆ ಎಂದರೆ 'ಹಿ' ಯಾಕೆ 'ತಾನಿ ಹವಾ' ಈ ಶೃತಿಯಲ್ಲಿಯೂ ಹಾಗೆಯೇ 'ವ್ಯಪದಿಶ್ಯತೇ' ವರ್ಣಿತವಾಗುತ್ತದೆ. ಅದಕ್ಕೆ ಪಂಚವೃತ್ತಿತ್ವವು ಮುಖ್ಯ ಪ್ರಾಣನಲ್ಲಿದೆ ಎಂಬಾರ್ಥ.

## ೧೪) ಓಂ ಓಂ ಅಣುಶ್ಚ ಓಂ (ಅಣ್ವಾಧಿಕರಣಂ)

ಮುಖ್ಯಪ್ರಾಣರು ಪ್ರಾಣರೂಪದಿಂದ ಅಣುವಾಗಿಯೂ ವಾಯುರೂಪದಿಂದ ವ್ಯಾಪ್ತರೂ ಆಗಿದ್ದಾನೆ ಎಂದೂ ಕೂಡ ಅರ್ಥವಾಗುತ್ತದೆ.

## ೧೫) ಓಂ ಓಂ ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ಓಂ (ಜ್ಯೋತಿರಾದ್ಯಧಿಕರಣಂ)

'ಜ್ಯೋತಿರಾದ್ಯಧಿಷ್ಠಾನಂ' ಪುನಃ ಹೇಳಲ್ಪಡುತ್ತದೆ. 'ತತ್' ಆ ಅನುಷ್ಠಾನವೆಂದು ಸಂಬಂಧ ಮತ್ತು ಅಗ್ನಿ ಮೊದಲಾದ ದೇವತೆ ಪ್ರೇರಕನಾದವನು ಹಾಗೂ

ಸರ್ವತ್ರ ವ್ಯಾಪ್ತನಾದವನು ಬ್ರಹ್ಮನೇ ಹಾಗೂ ಜ್ಯೋತಿರಾದ್ಯಧಿಷ್ಠಾನನೂ ಚಕ್ಷು ರಾದಿ ಇಂದ್ರಿಯಪ್ರೇರಕನೂ ಜೀವನು ಅಲ್ಲ. ಯಾಕೆಂದರೆ, 'ತದಾಮನನಾತ್' 'ಯಚ್ಚಕ್ಷುಷಿ ತಿಷ್ಠನ್' ಇತ್ಯಾದಿ ವೇದದಿಂದ ಹಾಗೆ ವರ್ಣನೆ ಮಾಡಿಸಿಕೊಂಡಿರು ವುದರಂದ ಎಂಬ ಅರ್ಥ.

## ೧೬) ಓಂ ಓಂ ಪ್ರಾಣವತಾಶಬ್ದಾತ್ ಓಂ

ಪರಬ್ರಹ್ಮನು ತನ್ನ ಪ್ರಯೋಜ್ಯರಾದ ಚಕ್ಷುರಾದಿ ಇಂದ್ರಿಯಗಳಿಂದ 'ಪ್ರಾಣವತಾ' ಜೀವನಿಂದ ಕರ್ತೃ ಎಂಬ ರೀತಿಯಿಂದ ದರ್ಶನಾದಿಗಳನ್ನು ಮಾಡಿ ಸುವನು. ಅದು ಜೀವ ಪ್ರಯೋಜನನಲ್ಲ. ಯಾಕೆಂದರೆ, 'ಶಬ್ದಾತ್' 'ಏಷಹ್ಯೇನೇನ' ಇತ್ಯಾದಿ ಶೃತಿಯಿಂದ ತೋರುವುದೆಂಬರ್ಥ.

## ೧೭) ಓಂ ಓಂ ತಸ್ಯಚನಿತ್ಯತ್ವಾತ್ ಓಂ

ಕಣ್ಣು ಮೊದಲಾದವು ಬ್ರಹ್ಮ ( ಕರಣ) ರಚಿತೇಂದ್ರಿಯಗಳಾದರೂ ಆ ಇಂದ್ರಿಯಗಳಿಗೆ ಆ ಜೀವ-ಇಂದ್ರಿಯ ಸಂಬಂಧ ನಿತ್ಯವಾಗಿರುವುದರಿಂದ 'ನಿತ್ಯತ್ವಾತ್' ಜೀವ ವಿವಕ್ಷೆಯಿಂದ ಜೀವನೇ ಕರ್ತಾ ಎಂಬ ಶೃತಿಯು (ಕೂಡು) ಕೊಡುತ್ತವೆ ಎಂದು ಅರ್ಥ.

## ೧೮) ಓಂ ಓಂ ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರಶ್ರೇಷ್ಠಾತ್ ಓಂ (ಇಂದ್ರಿಯಾಧಿಕರಣಂ)

'ಶ್ರೇಷ್ಠಾತ್' ಮುಖ್ಯ ಪ್ರಾಣನಿಂದ 'ಅನ್ಯತ್ರ' ಯಾವಪ್ರಾಣಗಳೋ ಅವೇಯೇ ಇಂದ್ರಿಯಳೇ ಹೊರತಾಗಿ ಮುಖ್ಯ ಪ್ರಾಣನಲ್ಲ. ಯಾಕೆಂದರೇ 'ತದ್ವ್ಯಪದೇಶಾತ್' 'ದ್ವಾದಶೈವೇಂದ್ರಿಯಾಣ್ಯಾಹುಃ' ಈ ಶೃತಿಯಲ್ಲಿ ಆ ರೀತಿಯಾಗಿ ಹೇಳಲ್ಪಡಲಾಗಿದೆ ಎಂಬ ಅರ್ಥ.

## ೧೯) ಓಂ ಓಂ ಭೇದಶ್ರುತೇಃ ಓಂ

ಮುಖ್ಯಪ್ರಾಣದೇವರಿಗೆ ಸರ್ವಕರ್ತೃತ್ವಕಾರಯಿತೃತ್ವರೂಪಭೇದ ತೋರುವ ಧರ್ಮವಿರುತ್ತಿದ್ದು ಬೇರೆಯವರಲ್ಲಿ ಅದು ಇಲ್ಲದಿರುವುದರಿಂದ 'ಸ್ಥಿತ ಏವ ಹಿ' ಈ ಶೃತಿಯಲ್ಲಿ ಹೇಳಿರುವುದರಿಂದ ಅವನಲ್ಲಿ ಚಕ್ಷುರಾದ್ಯವಿಶೇಷತ್ವ ಇರುವುದಿಲ್ಲ ವಂದರ್ಥ.

## ೨೦) ಓಂ ಓಂ ವೈಲಕ್ಷಣ್ಯಾಚ್ಚ ಓಂ

ಮುಖ್ಯಪ್ರಾಣ ಹಾಗೂ ಇತರ ಪ್ರಾಣಿಗಳಲ್ಲಿ ಮುಖ್ಯಪ್ರಾಣ ಕೇವಲ ಈಶ್ವರಾಧೀನನಾದರೆ ಇತರರು ಮುಖ್ಯಪ್ರಾಣ ಹಾಗೂ ಈಶ್ವರಾಧೀನರೆಂಬ ವೈಲಕ್ಷಣ್ಯವು ಇರುವುದರಿಂದ ಪ್ರಾಣನಿಗೆ ಇಂದ್ರಿಯತ್ವವಿಲ್ಲದೇ ಚಕ್ಷುರಾದಿಗಳಿಗೆ ಮಾತ್ರವೆಂಬರ್ಥ.

## ೨೧) ಓಂ ಓಂ ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್ ಓಂ (ಸಂಜ್ಞಾಧಿಕರಣಂ)

'ತಂ' ನಿಶ್ಚಿತವಾಗಿ 'ಸಂಜ್ಞಾಮೂರ್ತಿಕ್ಲೃಪ್ತಿ' ಎಂಬ ಹೆಸರಿನ ದೇಹ-ಇಂದ್ರಿಯಾದಿಗಳಿಂದ ಯುಕ್ತವಾದ ಪ್ರಪಂಚದ ಉತ್ಪತ್ತಿಯ ತ್ರಿವೃತ್‌ಕುರ್ವತಃ' ಪೃಥಿವೀ, ಜಲ, ತೇಜಸ್ಸಿನ ಸಂಮಿಶ್ರಣವನ್ನು ಮಾಡುವುದು ಪರಮೇಶ್ವರ ಪ್ರಸಾದದಿಂದಲೇ ಆಗುತ್ತದೆ. ಆದರೆ, ಚತುರ್ಮುಖ ಬ್ರಹ್ಮನಿಂದ ಆಗುವುದಿಲ್ಲ. ಯಾಕೆಂದರೆ, 'ಉಪದೇಶಾತ್', 'ಸರ್ವಾಣಿರೂಪಾಣಿ ವಿಚಿತ್ಯಧೀರಃ' ಇತ್ಯಾದಿ ಶೃತಿಯಿಂದ ವೇದ್ಯನೆಂಬರ್ಥ.

## ೨೨) ಓಂ ಓಂ ಮಾಂಸಾಧಿಭೌಮಂ ಯಥಾ ಶಬ್ದಮಿತರಯೋಶ್ಚ ಓಂ (ಮಾಂಸಾಧಿಕರಣಂ)

ಕಠಿಣವಾದದ್ದಾವುದೋ ಅದು ಪೃಥ್ವೀಸಂಬಂಧಿಯಾದದ್ದು, ಯಾವ ಶರೀರದಲ್ಲಿ (ಬಿರುಸಾದ) ಕಠಿಣವಾದ ಮಾಂಸ, ಅಸ್ತಿ ಆದಿ ಪೃಥ್ವಿಯೇ ವಿನಃ ಸರ್ವ ಶರೀರವಲ್ಲ. ಹಾಗಾದರೇ ಯಾವ ಶಬ್ದದಿಂದ 'ಯತ್ಕಠಿಣಂ ಸಾ ಪೃಥಿವೀ' ಎಂಬ ಶೃತಿಗನುಸಾರವಾಗಿ ಶರೀರದಲ್ಲಿ ಇತರೆ ಜಲತೇಜದ ಕಾರ್ಯವಂದರೆ ರಕ್ತ ಮಜ್ಜಾದಿರೂಪವೆಂದು (ತಿಳಿದು) ಒಪ್ಪಬೇಕು. ಹೇಗೆ ಮಾಂಸಾದಿಗಳಿಂದ ಕಠಿಣ ಪೃಥವೀ ಕಾರ್ಯವೇ. ಹಾಗಾದರೆ ಭೂಮಿಯ ಕೆಲಸ ಎಲ್ಲ ಆದರೆ ಜಲ, ತೇಜಸ್ಸಿನ ಕಾರ್ಯ ಯಾವರೀತಿಯನ್ನಲು ಶೃತಿಯನ್ನು ಒಪ್ಪಬೇಕೆಂದರ್ಥ.

## ೨೩) ಓಂ ಓಂ ವೈಶೇಷ್ಯಾತ್ತು ತದ್ವಾದಸ್ತದ್ವಾದಃ ಓಂ

ಪೃಥಿವಿಯ, ಜಲದ, ತೇಜಸ್ಸಿನದೆಂದು ವಿಶೇಷೋಕ್ತಿಯನ್ನೇ 'ವೈಶೇಷ್ಯಾತ್' ಪೃಥಿವ್ಯಾದಿ ಪ್ರಾಣಿಗಳಿಗೆ ಆಯಾ ಶರೀರ ವಿಶೇಷ ಸಂಬಂಧಾನುಸಾರ ಯೋಗ್ಯವೇ. ಅದಕ್ಕೆ ಆ ಶೃತಿಯ ವಿರೋಧವಿಲ್ಲ ಎಂಬ ಅರ್ಥ. ಈ ಅಧ್ಯಾಯ ದಲ್ಲಿ ಹೇಳಿದೆ. ಎಲ್ಲ ಅರ್ಥಕ್ಕೆ ನಿಶ್ಚಿತತೆಯನ್ನು ತೋರಿಸಲೆಂದೇ ಅಧ್ಯಾಯಾಂತ ದಲ್ಲಿ ದ್ವಿರುಕ್ತಿ ಹೇಳಲಾಗಿದೆ.

**ಇತಿ ಶ್ರೀಜಗನ್ನಾಥಯತಿ ವಿರಚಿತಾಯಾಂ ಸೂತ್ರದೀಪಿಕಾಯಾಂ ದ್ವಿತೀಯಾಧ್ಯಾಯಸ್ಯ ಚತುರ್ಥಪಾದಃ ಸಮಾಪ್ತಃ ಉಮರ್ಜಿ ಪ್ರಹ್ಲಾದಕೃತ ಕನ್ನಡಾನುವಾದದಲ್ಲಿ ಎರಡನೇ ಅಧ್ಯಾಯ ಸಂಪೂರ್ಣಂ**

**|| ಶ್ರೀಕೃಷ್ಣಾರ್ಪಣಮಸ್ತು ||**

## ಸೂತ್ರದೀಪಿಕಾಯಾಂ ತೃತೀಯಾಧ್ಯಾಯಃ ಪ್ರಾರಂಭಃ

### ೧) ಓಂ ಓಂ ತದಂತರಪ್ರತಿಪತ್ತೌ ರಂಹತಿಸಂಪರಿಷ್ವಕ್ತ ಪ್ರಶ್ನನಿರೂಪಣಾಭ್ಯಾಂ ಓಂ (ತದಂತರಾಧಿಕರಣಂ)

'ತದಂತರಪ್ರತಿಪತ್ತೌ' ಬೇರೆ ಶರೀರ ಬರಬೇಕೆಂದರೆ ಜೀವನು 'ಸಂಪರಿಷ್ವಕ್ತಃ' ಪೃಥಿವ್ಯಾದಿಭೂತಗಳಿಂದ ಯುಕ್ತನಾಗಿ 'ರಂಹತಿ' ಈ ಶರೀರ ಬಿಟ್ಟು ಬೇರೆ ಲೋಕಕ್ಕೆ ಹೋಗುವನೆಂದು ತಿಳಿಯುತ್ತದೆ. ಯಾಕೆಂದರೆ, 'ಪ್ರಶ್ನನಿರೂಪಣಾಭ್ಯಾಂ' 'ವೇಥಮಥಾ' ಎಂದು ಶ್ವೇತಕೇತು ಋಷಿಗಳನ್ನು ಕುರಿತು ಪ್ರಬರ್ಹಣ ಎಂಬ ರಾಜನ ಪ್ರಶ್ನೆಯಿಂದ. ಮತ್ತು 'ಇತಿ ತು' ಎಂದು ಪ್ರವಾಹಣನಿಂದ ಹೇಳಿದ ಪರಿಹಾರದಿಂದೆಂದರ್ಥ.

### ೨) ಓಂ ಓಂ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ (ತ್ರ್ಯಾತ್ಮಕತ್ವಾಧಿಕರಣಂ)

ಜೀವನು ಸರ್ವಭೂತ (ಯುಕ್ತ) ಪರಿಷ್ವಕ್ತನಾಗಿ ಹೋಗುತ್ತಾನೆ. ಆದರೆ ಜಲವಿಲ್ಲದೇ 'ಅಪಃ' ಎಂಬ ವಿಶೇಷೋಕ್ತಿಯಾದರೂ 'ತ್ರ್ಯಾತ್ಮಕತ್ವಾತ್' ನೀರು, ಭೂಮಿ, ಅಗ್ನಿರೂಪ ಜಲಾತ್ಮಕನಾದ್ದರಿಂಂದ ಅದರಲ್ಲಿಯೂ (ಜಲ) ಅಪ್ಪುಗೆ 'ಭೂಯಸ್ತ್ವಾತ್ ಆಧಿಕ್ಯ' ಹೆಚ್ಚಿನತೆ ಇರುವುದರಿಂದ ವಿರೋಧವಿಲ್ಲ ಎಂಬಾರ್ಥ.

### ೩) ಓಂ ಓಂ ಪ್ರಾಣಗತೇಶ್ಚ ಓಂ (ಪ್ರಾಣಗತ್ಯಧಿಕರಣಂ)

ಭೂತಗಳಿಂದ ವ್ಯಾಪ್ತವಾದ ಪ್ರಾಣ ಶಬ್ದದಿಂದ ತೋರುವ ಇಂದ್ರಿಯಗಳಿಗೆ ಜೀವನಿಂದ ಯುಕ್ತನಾಗಿ ಹೋಗುವನೆಂದದ್ದರಿಂದ ಜೀವನು ಭೂತಗಳಿಂದ ಅವೃತ (ಸಂಪರಿಷ್ವಕ್ತ) ನಾಗಿಯೇ ಹೋಗುವನೆಂಬಾರ್ಥ.

**೪) ಓಂ ಓಂ ಅಗ್ನ್ಯಾದಿಗತಿಶೃತೇರಿತಿಚೇನ್ನಭಾತ್ತತ್ವಾತ್ ಓಂ (ಅಗ್ನ್ಯಾದ್ಯ ಧಿಕರಣಂ)**

'ಅಗ್ನ್ಯಾದಿಗತಿಶೃತೇಃ' ಯಲ್ಲಿ ಪ್ರಾಣಾದಿಗಳೋ ಅಲ್ಲಿ ಅಗ್ನ್ಯಾದಿಗಳ ಜತೆ ಹೋಗುವುದೆಂದು ಹೇಳಿಕೆ ಜೀವರ ಜತೆ ಗಮನವೆಂದು ಹೇಳಿದಂತಾಗಲಿ ಲ್ಲವೆಂದಲ್ಲ. ಯಾಕೆಂದರೆ, 'ಭಾಕ್ತತ್ವಾತ್ ಯತ್ರ' ಎಂಬ ವೇದವು ಪ್ರಾಣ(ದ)ನ ವಿಭಾಗದ ವಿಷಯಕವಾಗಿದೆ ಎಂಬ ಅರ್ಥ.

**೫) ಓಂ ಓಂ ಪ್ರಥಮೇಽಶ್ರವಣಾದಿತಿಚೇನ್ನತಾ ಏವಹ್ಯುಪಪತ್ತೇಃ ಓಂ (ಪ್ರಥಮಾಧಿಕರಣಂ)**

'ಪ್ರಥಮೇ' ಅದರಲ್ಲಿ ಎಂಬ ಪ್ರಾರಂಭಿಕವಾದದ್ದು ನಾಮಕ ವಸು ಪ್ರಥಮಾಗ್ನಿಹೋಮ ಮಾಡಬೇಕೆಂದು ಹೇಳಿದ್ದರಿಂದ ಪ್ರಾಣಗಳಲ್ಲಿ ಜೀವವಿಲ್ಲ ವೆಂದು ಕೇಳಿಸದಿರುವುದರಿಂದ ಜೀವನು (ಭೂತ) ಶರೀರ ಜತೆ ಹೋಗುತ್ತಾ ನೆಂದರೆ ಸರಿಯಲ್ಲ. ಯಾಕೆಂದರೆ ನಿಶ್ಚಿತವಾಗಿ 'ತಾ ಏವ ಪ್ರಸ್ತುತಾ ಆಪ' ಎಂಬ ಉಪಕ್ರಮದಿಂದ (ಹೋದ) ವ್ಯಕ್ತವಾದ ಶ್ರದ್ಧಾ ಶಬ್ಧದಿಂದ ಹೇಳಲ್ಪಡುತ್ತವೆ. ಅದಕ್ಕೆ ಅದು ಹೇಗೆ ಎಂದರೆ 'ಉಪಪತ್ತೇ' 'ಆಪಃ' ಪುರುಷ ವಚಸೋಭಿವಂತಿ' ಎಂಬ ಉಪಸಂಹಾರ ವಾಕ್ಯವು ಕೂಡುತ್ತದೆ ಎಂದು ಅರ್ಥ.

**೬) ಓಂ ಓಂ ಅಶ್ರುತತ್ವಾದಿತಿಚೇನ್ನೇಷ್ಟಾಧಿಕಾರಿಣಾಂ ಪ್ರತೀತೇಃ ಓಂ (ಅಶ್ರುತತ್ವಾಧಿಕರಣಂ)**

'ಅಶ್ರುತತ್ವಾತ್' ಭೂತಗಳಿಗೆ ಜಲ-ವನ ಜತೆ ಹೋಗುವುದೆಂದರೆ 'ಅಗ್ನಿಂವಾಗಪ್ಯೇತಿ' ಎನ್ನುವ ಹಾಗೆ ಪ್ರತ್ಯಕ್ಷವಾಗಿ ಕೇಳದಿರುವುದರಿಂದ ಎಂದರೆ ಅದು ಸರಿಯಲ್ಲ. ಯಾಕೆಂದರೆ, 'ಅಥೈನಂ' ಎಂಬ ಶೃತಿಯಿಂದ 'ಇಷ್ಟಾಧಿಕಾ ರಿಣಾಂ' ಯಜ್ಞಯಾಗ ಮಾಡುವವರಿಗೆ ಕೂಡುತ್ತದೆ. 'ಪ್ರತೀತೇಃ' ಪ್ರತ್ಯಕ್ಷವಾ

## ಸೂತ್ರದೀಪಿಕಾಯಾಂ ತೃತೀಯಾಧ್ಯಾಯಃ ಪ್ರಾರಂಭಃ

### ೧) ಓಂ ಓಂ ತದಂತರಪ್ರತಿಪತ್ತೌ ರಂಹತಿಸಂಪರಿಷ್ವಕ್ತ ಪ್ರಶ್ನನಿರೂಪಣಾಭ್ಯಾಂ ಓಂ (ತದಂತರಾಧಿಕರಣಂ)

'ತದಂತರಪ್ರತಿಪತ್ತೌ' ಬೇರೆ ಶರೀರ ಬರಬೇಕೆಂದರೆ ಜೀವನು 'ಸಂಪರಿಷ್ವಕ್ತಃ' ಪೃಥಿವ್ಯಾದಿಭೂತಗಳಿಂದ ಯುಕ್ತನಾಗಿ 'ರಂಹತಿ' ಈ ಶರೀರ ಬಿಟ್ಟು ಬೇರೆ ಲೋಕಕ್ಕೆ ಹೋಗುವನೆಂದು ತಿಳಿಯುತ್ತದೆ. ಯಾಕೆಂದರೆ, 'ಪ್ರಶ್ನನಿರೂಪಣಾಭ್ಯಾಂ' 'ವೇಥಮಥಾ' ಎಂದು ಶ್ವೇತಕೇತು ಋಷಿಗಳನ್ನು ಕುರಿತು ಪ್ರಬರ್ಹಣ ಎಂಬ ರಾಜನ ಪ್ರಶ್ನೆಯಿಂದ. ಮತ್ತು 'ಇತಿ ತು' ಎಂದು ಪ್ರವಾಹಣನಿಂದ ಹೇಳಿದ ಪರಿಹಾರದಿಂದೆಂದರ್ಥ.

### ೨) ಓಂ ಓಂ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ (ತ್ರ್ಯಾತ್ಮಕತ್ವಾಧಿಕರಣಂ)

ಜೀವನು ಸರ್ವಭೂತ (ಯುಕ್ತ) ಪರಿಷ್ವಕ್ತನಾಗಿ ಹೋಗುತ್ತಾನೆ. ಆದರೆ ಜಲವಿಲ್ಲದೇ 'ಅಪಃ' ಎಂಬ ವಿಶೇಷೋಕ್ತಿಯಾದರೂ 'ತ್ರ್ಯಾತ್ಮಕತ್ವಾತ್' ನೀರು, ಭೂಮಿ, ಅಗ್ನಿರೂಪ ಜಲಾತ್ಮಕನಾದ್ದರಿಂದ ಅದರಲ್ಲಿಯೂ (ಜಲ) ಅಪ್ಪುಗೆ 'ಭೂಯಸ್ತ್ವಾತ್ ಆಧಿಕ್ಯ' ಹೆಚ್ಚಿನತೆ ಇರುವುದರಿಂದ ವಿರೋಧವಿಲ್ಲ ಎಂಬಾರ್ಥ.

### ೩) ಓಂ ಓಂ ಪ್ರಾಣಗತೇಶ್ಚ ಓಂ (ಪ್ರಾಣಗತ್ಯಧಿಕರಣಂ)

ಭೂತಗಳಿಂದ ವ್ಯಾಪ್ತವಾದ ಪ್ರಾಣ ಶಬ್ದದಿಂದ ತೋರುವ ಇಂದ್ರಿಯಗಳಿಗೆ ಜೀವನಿಂದ ಯುಕ್ತನಾಗಿ ಹೋಗುವನೆಂದದ್ದರಿಂದ ಜೀವನು ಭೂತಗಳಿಂದ ಅವೃತ (ಸಂಪರಿಷ್ವಕ್ತ) ನಾಗಿಯೇ ಹೋಗುವನೆಂಬಾರ್ಥ.

**೪) ಓಂ ಓಂ ಅಗ್ನ್ಯಾದಿಗತಿಶ್ರುತೇರಿತಿಚೇನ್ನಭಾಕ್ತತ್ವಾತ್ ಓಂ (ಅಗ್ನ್ಯಾದ್ಯಧಿಕರಣಂ)**

'ಅಗ್ನ್ಯಾದಿಗತಿಶ್ರುತೇಃ' ಯಲ್ಲಿ ಪ್ರಾಣಾದಿಗಳೋ ಅಲ್ಲಿ ಅಗ್ನ್ಯಾದಿಗಳ ಜತೆ ಹೋಗುವುದೆಂದು ಹೇಳಿಕೆ ಜೀವರ ಜತೆ ಗಮನವೆಂದು ಹೇಳಿದಂತಾಗಲಿಲ್ಲವೆಂದಲ್ಲ. ಯಾಕೆಂದರೆ, 'ಭಾಕ್ತತ್ವಾತ್ ಯತ್ರ' ಎಂಬ ವೇದವು ಪ್ರಾಣ(ದ)ನ ವಿಭಾಗದ ವಿಷಯಕವಾಗಿದೆ ಎಂಬ ಅರ್ಥ.

**೫) ಓಂ ಓಂ ಪ್ರಥಮೇಽಶ್ರವಣಾದಿತಿಚೇನ್ನತಾ ಏವಹ್ಯುಪಪತ್ತೇಃ ಓಂ (ಪ್ರಥಮಾಧಿಕರಣಂ)**

'ಪ್ರಥಮೇ' ಅದರಲ್ಲಿ ಎಂಬ ಪ್ರಾರಂಭಿಕವಾದದ್ದು ನಾಮಕ ವಸು ಪ್ರಥಮಾಗ್ನಿಹೋಮ ಮಾಡಬೇಕೆಂದು ಹೇಳಿದ್ದರಿಂದ ಪ್ರಾಣಗಳಲ್ಲಿ ಜೀವವಿಲ್ಲವೆಂದು ಕೇಳಿಸದಿರುವುದರಿಂದ ಜೀವನು (ಭೂತ) ಶರೀರ ಜತೆ ಹೋಗುತ್ತಾನೆಂದರೆ ಸರಿಯಲ್ಲ. ಯಾಕೆಂದರೆ ನಿಶ್ಚಿತವಾಗಿ 'ತಾ ಏವ ಪ್ರಸ್ತುತಾ ಆಪ' ಎಂಬ ಉಪಕ್ರಮದಿಂದ (ಹೋದ) ವ್ಯಕ್ತವಾದ ಶ್ರದ್ಧಾ ಶಬ್ದದಿಂದ ಹೇಳಲ್ಪಡುತ್ತವೆ. ಅದಕ್ಕೆ ಅದು ಹೇಗೆ ಎಂದರೆ 'ಉಪಪತ್ತೇ' 'ಆಪಃ' ಪುರುಷ ವಚಸೋಭಿವಂತಿ' ಎಂಬ ಉಪಸಂಹಾರ ವಾಕ್ಯವು ಕೂಡುತ್ತದೆ ಎಂದು ಅರ್ಥ.

**೬) ಓಂ ಓಂ ಅಶ್ರುತತ್ವಾದಿತಿಚೇನ್ನೇಷ್ಟಾಧಿಕಾರಿಣಾಂ ಪ್ರತೀತೇಃ ಓಂ (ಅಶ್ರುತತ್ವಾಧಿಕರಣಂ)**

'ಅಶ್ರುತತ್ವಾತ್' ಭೂತಗಳಿಗೆ ಜಲ-ವನ ಜತೆ ಹೋಗುವುದೆಂದರೆ 'ಅಗ್ನಿಂವಾಗಪ್ಯೇತಿ' ಎನ್ನುವ ಹಾಗೆ ಪ್ರತ್ಯಕ್ಷವಾಗಿ ಕೇಳದಿರುವುದರಿಂದ ಎಂದರೆ ಅದು ಸರಿಯಲ್ಲ. ಯಾಕೆಂದರೆ, 'ಅಥೈನಂ' ಎಂಬ ಶ್ರುತಿಯಿಂದ 'ಇಷ್ಟಾಧಿಕಾರಿಣಾಂ' ಯಜ್ಞಯಾಗ ಮಾಡುವವರಿಗೆ ಕೂಡುತ್ತದೆ. 'ಪ್ರತೀತೇಃ' ಪ್ರತ್ಯಕ್ಷವಾ

ಗಿಯೇ ಭೂತವಿಯೋಗ ಸಂಯೋಗ ಸಹಯೋಗ ಆದಿಗಳು ತಿಳಿಯುವುದರಿಂದ ಎಂಬ ಅರ್ಥ.

## ೭) ಓಂ ಓಂ ಭಾಕ್ತಂವಾನಾತ್ಮವಿತ್ವಾತ್ತಥಾ ಹಿ ದರ್ಶಯತಿ ಓಂ (ಭಾಕ್ತಾಧಿಕರಣಂ)

ಕಾಮ್ಯಕರ್ಮಿಗಳಿಗೆ ಹೇಳಿದ ಅಮೃತತ್ವವೆಂದರೆ ಅಮುಖ್ಯ ಯಾಕೆಂದರೆ, 'ಆತ್ಮವಿತ್ವಾತ್' ಅವರಿಗೆ ಬ್ರಹ್ಮಜ್ಞಾನವಿಲ್ಲದ್ದರಿಂದ ವಾಯತ್ತು ಜಿಜ್ಞಾಸಿತ ಜ್ಞಾನಿಯಿಂದ ಮಾಡಿದ ಕಾಮ್ಯಕರ್ಮದಿಂದ ಹುಟ್ಟಿದ ಸುಖವೂ ಕೂಡ ಸಂಸಾರನಿವೃತ್ತಿಗೆ ಕಾರಣವಾಗುವುದಿಲ್ಲ. ಅದು ಮುಖ್ಯ ಅಮೃತತ್ವಕ್ಕೆ ಸಹಾಯಕವಲ್ಲ. ಆದರೆ ಶುದ್ಧಾಂತಕರಣದಿಂದ ಹುಟ್ಟಿದ ಆನಂದಾತಿಶಯರೂಪ ನಿರತಿಶಯ ಪರಮಮುಖ್ಯ ಎಂದು ಎರಡು ಪಕ್ಷವೂ ಸೂಚಿಸಿದೆ. ಯಾಕೆ ಇದಾದರೂ ಎಂದರೆ 'ಅಮೃತೋವಾ' ಎಂದು 'ಸ ಏನಮಿತಿ', 'ಕರ್ಮಣಾ', 'ಆತ್ಮಾನಂ' ಈ ಇವೇ ಮೊದಲಾದ ಶೃತಿಗಳಿಂದ ಸರಿಯಾದ ಅರ್ಥವನ್ನೇ 'ದರ್ಶಯತಿ' ವರ್ಣನೆ ಮಾಡಲ್ಪಡಲಾಗುತ್ತದೆ ಅದಕ್ಕೆ ಎಂಬಾರ್ಥ.

## ೮) ಓಂ ಓಂ ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಓಂ (ಕೃತಾತ್ಯಯಾಧಿಕರಣಂ)

'ಕೃತಾತ್ಯಯೇ' ತಾವು ಮಾಡಿದ ಕರ್ಮದಿಂದ ಪಡೆದ ಸ್ವರ್ಗಾದಿ ಭೋಗದ ಸಮಾಪ್ತಿ(ಕ್ಷಯ) ಆದಮೇಲೆ 'ಪುನರನುಶವಾನ್' ಉಪಯೋಗ ಮಾಡಿ ಉಳಿದ ನಂತರವೇ ಈ ಲೋಕಕ್ಕೆ ಪುನಃ ಬರುವನೆಂದು ತಿಳಿಯುತ್ತದೆ. ಯಾಕೆಂದರೆ, ದೃಷ್ಟಸ್ಮೃತಿಭ್ಯಾಂ 'ತತಃ ಶೇಷೇಣ' ಈ ರೀತಿ ಕಂಡ ಶಬ್ದವೆಂಬ ವೇದ 'ಭೂಕ್ತ ಶೇಷ' ಇದೇ ಮೊದಲಾದ ಸ್ಮೃತಿಗಳಿಂದಲೇ ಎಂಬರ್ಥ.

## ೯) ಓಂ ಓಂ ಯಥೇತಮನೇವಂ ಚ ಓಂ (ಯಥೈತಾಧಿಕರಣಂ)

ಜೀವನಿಂದ ಯಾವ ಮಾರ್ಗದಿಂದ ಸ್ವರ್ಗಾದಿಗಳೋ 'ಇತಂ' ಲಭಿಸಿದ ತಥಾ ಅದರಿಂದಲೇ 'ಅನೇವಂ' ಬೇರೆ ಮಾರ್ಗದಿಂದಲೂ ಜೀವ ಈ ಲೋಕಕ್ಕೆ ಬರುತ್ತಾನೆ.

## ೧೦) ಓಂ ಓಂ ಚರಣಾದಿತಿಚೇನ್ನತದುಪಲಕ್ಷಮಾರ್ಥೇತಿಕಾರ್ಷ್ಣಾಜಿನಿಃ ಓಂ (ಚರಣಾಧಿಕರಣಂ)

ಹೋಗ-ಬರುವುದು ಯಜ್ಞಾದಿಗಳಿಂದ ಆಗುತ್ತದೆ. ಆದರೆ ಯಜ್ಞಾಂಗ ಭೂತ ಆಚಾರದಿಂದಲೇ (ಚರಣಾತ್) 'ಚರಣಾಚಾರ' ಎಂಬ ಶೃತಿಯಿಂದ ಎಂದರೆ ಅಲ್ಲ. ಯಾಕೆಂದರೆ ವೇದವು 'ತದುಪಲಕ್ಷಣಾರ್ಥ ಜಹಲ್ಲಕ್ಷಣಾ ಸ್ವಾರ್ಥಲಕ್ಷಣೇ' ಇಂದ ಯಜ್ಞ, ಆಚಾರ ಹೀಗೆ ಎರಡನ್ನೂ ವರ್ಣನೆ ಮಾಡುವುದೆನ್ನಲು 'ಕಾರ್ಷ್ಣಾಜಿನಿ' ಎಂಬ ಆಚಾರ್ಯರ ಅಭಿಪ್ರಾಯ ಅದಕ್ಕೆ ಎಂದರ್ಥ.

## ೧೧) ಓಂ ಓಂ ಆನರ್ಥಕ್ಯಮಿತಿಚೇನ್ನತಮಪೇಕ್ಷತ್ವಾತ್ ಓಂ

ಉಪಲಕ್ಷಣಾನಿಮಿತ್ತಚರಣ ಎಂಬ ಶಬ್ದಕ್ಕೆ 'ಆನರ್ಥಕ್ಯ'ವು ಯಾಕೆಂದರೆ ರಮಣೀಯ ಕಪೂರ ಎಂಬ ಪದಗಳಿಂದಲೇ ಕರ್ಮಸಂಬಂಧಿಲಕ್ಷಣಾ ಕೊಡುತ್ತಿದೆ ಎಂದರೆ ಸರಿಯಲ್ಲ ಯಾಕೆಂದರೆ 'ತದುಪೇಕ್ಷತ್ವಾತ್' ಅದರಲ್ಲಿಯೇ ಯೋಗ್ಯಾಯೋಗ್ಯ ಯಜ್ಞಾದಿಗಳು ಆಚಾರಾದಿಗಳು ಎರಡನ್ನೂ (ಪ್ರತಿ) ವರ್ಣಿಸುತ್ತವೆ ಎಂದು ಆಚಾರಾದಿಗಳ ಅವಶ್ಯಕತೆ ಎನ್ನುತ್ತಾರೆ ಮತ್ತು ಅದರ ತಿಳುವಳಿಕೆಗೆ ತತ್ ಎಂಬ ಪದಕ್ಕೆ ಸಾರ್ಥಕತೆ ಯೋಗ್ಯವೆನಿಸುತ್ತದೆ ಎಂಬ ಅರ್ಥ.

**೧೨) ಓಂ ಓಂ ಸುಕೃತದುಷ್ಕೃತ ಏವೇತಿ ಬಾದರಿಃ ಓಂ**

'ಸುಕೃತದುಷ್ಕೃತೆ' ಯೋಗ್ಯಯೋಗ್ಯಕರ್ಮಗಳಲ್ಲಿ ಮಾತ್ರ ವೇದಪ್ರತಿಪಾದ್ಯ ಆಚರಣೆ (ವೇದದಲ್ಲಿ ಹೇಳಿದಂತೆ)ಯನ್ನು ಮಾಡಬೇಕೆಂದು ಬಾದರಾಚಾರ್ಯರ ಅಭಿಪ್ರಾಯ. 'ತು' ಎಂಬುವುದರಿಂದ 'ಸ್ವ' ಶಬ್ದದಿಂದಲೂ ಇದು ನಮ್ಮ ಅಭಿಪ್ರಾಯವೂ ಆಗಿದೆ ಎಂದು ಬಾದರಾಯಣರು ಹೇಳುವುದನ್ನೂ ತೋರಿಸುತ್ತಾರೆ.

**೧೩) ಓಂ ಓಂ ಅನಿಷ್ಟಾಧಿಕಾರಿಣಾಮಪಿ ಚ ಶೃತಂ ಓಂ (ಅನಿಷ್ಟಾಧಿಕರಣಂ)**

'ಚ' ಒಟ್ಟು ದುಃಖಗಳ ಅನುಭವದಲ್ಲಿಯೂ ಅಂದರೆ ಕೇವಲ ಅಪೇಕ್ಷಿತ ವಾದ ಫಲಕ್ಕೆ ಮಾತ್ರ ಕಾರಣವಲ್ಲ. ಅನಿಷ್ಟವಾದ ಯಾಗಾದಿ ಕರ್ಮಗಳ ವಿರುದ್ಧ ವಾದ ಪಾಪಾದಿ ಕರ್ಮ ಮಾಡುವುದರಿಂದಲೂ ಯಾಕೆಂದರೆ 'ಶೃತಂ' ತದ್ಯ, ಇಹ ಇತ್ಯಾದಿ ವೇದಗಳಿಂದ ಇದು ಸ್ಪಷ್ಟವಾಗಿ ಹೇಳಿದೆ. ಅದಕ್ಕೆ ಎಂಬ ಅರ್ಥ.

**೧೪) ಓಂ ಓಂ ಸಂಯಮನೇತ್ವನುಭೂಮೇತರೇಷಾಮಾರೋಹಾವರೋಹೌತದ್ಗತಿದರ್ಶನಾತ್ ಓಂ**

ನಿಶ್ಚಿತವಾಗಿಯೂ ನರಕದಲ್ಲಿದ್ದು ಎಂದು ಸಪ್ತಮಿಪ್ರಯೋಗ 'ಸಂಯಮನ', ನರಕದಲ್ಲಿದ್ದು ಸರಿಯಾಗಿ ಯಮನ ಆಜ್ಞೆಯಂತೆ ದುಃಖಾನುಭವ ಮಾಡಿರುವ 'ಇತರೇಷಾಂ', ಇಷಾಧಿಕಾರಿಗಳು ಮತ್ತು ಬೇರೆಯವರಾದ ಅನಿಷ್ಟಾಧಿಕಾರಿಗಳಿಗೆ ಅವರಲ್ಲಿ 'ಆರೋಹಾವರೋಹೌ' ಕೆಲವರಿಗೆ ನರಕದಿಂದ ಮೇಲೆ ಬರುವುದು ಇನ್ನು ಕೆಲವರಿಗೆ ಇನ್ನೂ ಕೆಳಗಿರುವ ನಿತ್ಯನರಗಳಿಗೆ ಪ್ರವೇಶ ವಾಗುತ್ತದೆ. ಯಾಕೆಂದರೆ 'ತದ್ಗತಿದರ್ಶನಾತ್' ಆ ಅನಿಷ್ಟಕಾರಿಯಾದ ನರಕಗಳಿಗೆ ಹೋಗುವ ವಿಷಯದಲ್ಲಿ 'ಸರ್ವೇ' ಇತ್ಯಾದಿ ಶೃತಿಯಲ್ಲಿ ಕಾಣುತ್ತಿರುವುದರಿಂದ ಎಂಬ ಅರ್ಥ.

### ೧೫) ಓಂ ಓಂ ಸ್ಮರಂತಿ ಚ ಓಂ

ಸ್ಮೃತಿಕಾರರೂ ಕೂಡ ಹಿಂದಕ್ಕೆ ಹೇಳಿರುವ ವಿಷಯವನ್ನೇ 'ಗಛಂತಿ' ಇವೇ ಮೊದಲಾದ ಸ್ಮೃತಿಗಳಿಂದ ವರ್ಣನೆ ಮಾಡುತ್ತಾ(ವೆ)ರೆ ಎಂದರ್ಥ.

### ೧೬) ಓಂ ಓಂ ಅಪಿ ಸಪ್ತ ಓಂ (ಅಪಿ ಸಪ್ತಾಧಿಕರಣಂ)

ಸ್ಮೃತಿಕರ್ತರು ರೌರವಾದಿ ಏಳು ವಿಧವಾದ ನರಕಗಳನ್ನು 'ರೌರವೋ ಽಥ' ಸ್ಮೃತಿ ಪ್ರತಿಪಾದನೆ ಮಾಡುತ್ತಾರೆ ಎಂಬ ಅರ್ಥ.

### ೧೭) ಓಂ ಓಂ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ಓಂ (ತತ್ರಾಪ್ಯ ಧಿಕರಣಂ)

'ಚ' ದುಃಖಾನುಭವವಾಗದಿದ್ದರೂ ಕೂಡ ಹಾಗೂ 'ತತ್ರಾಪಿ' ಆ ನರಕದಲ್ಲಿಯೂ ಕೂಡ 'ತದ್ವ್ಯಾಪಾರಾತ್' ಆ ಈಶ್ವರನಿಗೆ ಯಾವವಿಧವಾದ ದುಃಖದ ಅನುಭವವಾಗದಂತೆ ನರಕಸ್ಥರಿಗೆ ಪ್ರೇರಣೆ ಮಾಡುವುದರಿಂದ 'ಅವಿರೋಧಾತ್' ಈಶ್ವರನು 'ಸರ್ವಂ ವಿಸೃಜತಿ' ಇತ್ಯಾದಿ ಶೃತಿಪ್ರತಿಪಾದ್ಯನಾಗಿರುವುದರಿಂದ ನರಕದಲ್ಲಿರುವ ಜೀವಿಗಳಿಗೆ ಪ್ರೇರಕನಾಗಿಯೇ ಇರುವನೆಂಬರ್ಥ. ಆ ಜೀವರಿಗೆ ನಿಯಂತಾ ಆಗಿರುವುದರಿಂದ ಇವನಿಗೂ ದುಃಖಭೋಕ್ತೃತ್ವವಿಲ್ಲ ಹಾಗೂ ಯಾವ ವಿರೋಧವೂ ಇಲ್ಲವೆಂದು ತಿಳಿಯಬೇಕು.

### ೧೮) ಓಂ ಓಂ ವಿದ್ಯಾಕರ್ಮಣೋರಿತಿತುಪ್ರಕೃತತ್ವಾತ್ ಓಂ (ವಿದ್ಯಾಧಿಕರಣಂ)

ನಿಶ್ಚಿತವಾಗಿಯೂ 'ಅಥೈತಯೋಃಪಥೋ' ಈ ಶೃತಿಯಿಂದ ಏತಯೋಃ ಅನ್ನುವುದರಿಂದ ಜ್ಞಾನ-ಕರ್ಮಗಳಿಂದ ಎಂದು ಅರ್ಥವೇ ವಿನಃ ಧೂಮ-ಅರ್ಚಿರಾದಿಪಥ ಎಂಬ ಅರ್ಥವಲ್ಲ. ಇದರಿಂದ ಜೀವನಿಗೆ ಫಲಸ್ವಾ

ತಂತ್ರ್ಯ ಕೂಡುತ್ತದೆ. ಯಾಕೆಂದರ 'ಪ್ರಕೃತತ್ವಾತ್...' 'ತದ್ವೈತ್ವಂ' ಈ ರೀತಿ ಅವು ಗಳಲ್ಲಿಯೂ ಕೂಡುವುದೆಂದರ್ಥ.

### ೧೯) ಓಂ ಓಂ ನತ್ರಿತೀಯೇತಥೋಪಲಬ್ದೇಃ ಓಂ (ನತ್ರಿತೀಯಾಧಿಕರಣಂ)

'ತ್ರಿತೀಯೇ', 'ತಿರ್ಯ್ಯಗ್ಯಾತನಾತಮಃ' ಈ ರೀತಿ ಹೇಳಿರುವಕ್ಕೆಳಗಿನ ಗತಿ ಗಳಲ್ಲಿ ಮೂರನೇಯದಾದ ತಮಸ್ಸಿನಲ್ಲಿನ ಸರ್ವಥಾ ಸುಖವಿಲ್ಲವೇ ಇಲ್ಲ. ಯಾಕೆಂದರೆ 'ತಥೋಪಲಬ್ದೇ' ಹಾಗೆ ಪ್ರಮಾಣಪ್ರಸಿದ್ಧವಾಗಿದೆ ಆದ್ದರಿಂದ ಎಂಬ ಅರ್ಥ.

### ೨೦) ಓಂ ಓಂ ಸ್ಮರ್ಯತೇಪಿ ಚ ಲೋಕೇ ಓಂ

ಅಂಧತಮಸ್ಸಿನಲ್ಲಿ ಸುಖವಿಲ್ಲವೆಂಬುದು 'ನಾಂಧೇತಮಸಿ' ಎಂಬ ಸ್ಮೃತಿಗಳಿಂದ 'ಸ್ಮರ್ಯತೇ ಚ' ಪ್ರತಿಪಾದಿಸಲ್ಪಟ್ಟಿದೆ ಹಾಗೂ ಲೋಕೆ ಎಂಬ ಪ್ರಸಿದ್ಧವಾದ ಅನುಮಾನ (ತರ್ಕ)ಗಳಿಂದಲೂ ಸಿದ್ಧವಾಗಿದೆ ಎಂಬ ಅರ್ಥ.

### ೨೧) ಓಂ ಓಂ ದರ್ಶನಾಚ್ಚ ಓಂ

ತಮಸ್ಸಿನಲ್ಲಿ 'ತ್ರಿತಿಯೇ' ಸುಖವಿಲ್ಲವೆಂಬುದು ಹಿರಣ್ಯಗರ್ಭ ಮೊದಲಾದವರ ಪ್ರತ್ಯಕ್ಷತೆಯಿಂದ ದರ್ಶನಾತ್ ಸಿದ್ಧವಾಗಿದೆ ಎಂಬ ಅರ್ಥ.

### ೨೨) ಓಂ ಓಂ ತೃತೀಯೇ ಶಬ್ದಾವರೋಧಃ ಸಂಶೋಕಜಸ್ಯ ಓಂ

'ತೃತೀಯ' ಎಂಬ ಶಬ್ದವು ಆವರ್ತವಾಗುವುದು. ತೃತೀಯೇ ತಮಸ್ಸಿನಲ್ಲಿ ಅದರಲ್ಲಿಯೂ ಆಂಧಂತಮಸ್ಸಿನಲ್ಲಿ ಅದರ ವಿಷಯದಲ್ಲಿಯ ಶಬ್ದವು ಅದರಿಂದ 'ಸಂಶೋಕಜಸ್ಯ' ಸರಿಯಾದ ಕ್ರಮದಲ್ಲಿ ದುಃಖಪ್ರದವಾದ ಅವರೋಧಃ

ಮೋಹವು ಅವಶ್ಯ ಬಂದೇ ಬರುತ್ತದೆ ಎಂಬ ಅರ್ಥ.

**೨೩) ಓಂ ಓಂ ಸ್ಮರಣಾಚ್ಚ ಓಂ**

ಮೂರುವಿಧ ತಮಸ್ಸಿನಲ್ಲಿ ಮೂರನೇಯದಾದ (ಅಂಧಂತಾಮಿಸ್ರ) ಮಹಾ ತಮಸ್ಸಿನ ಸ್ಮರಣಮಾತ್ರದಿಂದಲೇ ಆ ದುಃಖಸ್ವರೂಪಭೂತವಾದ ತಮಸ್ಸು (ಎರಡೂ ವಿಧ) ಸಿದ್ಧವಾಗುತ್ತದೆ ಎಂಬ ಅರ್ಥ.

**೨೪) ಓಂ ಓಂ ತತ್ಸಾಭಾವ್ಯಾಪತ್ತಿರುಪಪತ್ತೇಃ ಓಂ (ತತ್ಸಾಭಾವ್ಯಾಧಿಕರಣಂ)**

ಕಾರ್ಯಗಳಲ್ಲಿ 'ತತ್ಸಾಭಾವ್ಯಾಪತ್ತಿಃ' ಆ ಧೂಮಾದ್ಯಭಿಮಾನಿ ದೇವತೆಗಳು ಜೀವಿಯ ಸ್ವಭಾವವನ್ನನುಸರಿಸಿ ಅವರ ಸ್ವಭಾವದಂತೆ ಅವರಿಗೆ ದೊರೆಯುವಂತೆ ಮಾಡುವರೆ ವಿನಃ ಅವರಲ್ಲಿ ಐಕ್ಯವನ್ನು ಹೊಂದುವುದಿಲ್ಲ. ಆ ಸ್ಥಾನವನ್ನೂ ಪಡೆಯುವುದಿಲ್ಲ. ಯಾಕೆಂದರೆ 'ಉಪಪತ್ತೇಃ' ಬೇರೆಯವರಿಗೆ ಮತ್ತೊಬ್ಬರಿಂದ ಐಕ್ಯವಾಗುವುದು ಎಲ್ಲಿಯೂ ಕಾಣದಿರುವುದರಿಂದ ಈ ಅರ್ಥವೇ ಯೋಗ್ಯ.

**೨೫) ಓಂ ಓಂ ನಾತಿಚಿರೇಣವಿಶೇಷಾತ್ ಓಂ (ನಾತಿಚಿರೇಣಾಧಿಕರಣಂ)**

ಸ್ವರ್ಗದಿಂದ ಹೊರಟ ಕರ್ಮಿಜೀವಿಯು 'ನಾತಿಚಿರೇಣ' ಅತ್ಯಂತ ಶೀಘ್ರದಲ್ಲಿಯೇ ಭೂಮಿಗೆ ಬಂದು ಬ್ರಾಹ್ಮಣಾದಿಯೋನಿಯನ್ನು ಪಡೆಯುತ್ತಾನೆ. ಯಾಕೆಂದರೆ 'ವಿಶೇಷಾತ್' 'ಅದ್ಯ ಇಹ' ಎಂಬ ವಿಶೇಷವಾಕ್ಯದಿಂದವೆಂದು ತಿಳಿಯಬೇಕೆಂದರ್ಥ.

**೨೬) ಓಂ ಓಂ ಅನ್ಯಾಧಿಷ್ಠಿತಪೂರ್ವವದಭಿಲಾಪಾತ್ ಓಂ (ಅನ್ಯಾಧಿ ಕರಣಂ)**

ಕರ್ಮ ಮಾಡಿದ ಜೀವಿಯು 'ಅನ್ಯಾಧಿಷ್ಠಿತೇ' ಬೇರೆ ಜೀವಿಗಳಿಂದ ಅಭಿಮನ್ಯವಾದ ಧಾನ್ಯಾದಿ ಶರೀರದಲ್ಲಿ ಪ್ರವೇಶಿಸುವನೇ ವಿನಃ ಆ ಶರೀರಕ್ಕೆ ಅಭಿ ಮಾನಿಯಾಗಿ ಇರುವುದಿಲ್ಲ. ಆದರಿಂದ ದುಃಖವಾಗಲಿ ಎನ್ನಬಹುದು. ಅದ ರಿಂವ 'ವ್ರೀಹಿಯವಾಃ' ಇತ್ಯಾದಿ ಅಭೇದವಚನಕ್ಕೆ ಹೇಗೆ ಸಮನ್ವಯವೆಂದರೆ 'ಪೂರ್ವವದಿತಿ' ಹ್ಯಾಗೆಂದರೆ 'ಧೂಮೋಭೂತ್ವಾ' ಇತ್ಯಾದಿಗಳಲ್ಲಿ ಧೂಮಾ ದಿಭಾವದ ವಚನ ಹೇಗೋ ಹಾಗೆಯೇ. ಹೀಗಾದರೂ ಯಾಕೆಂದರೆ ' ಅಭಿಲಾಪಾತ್', 'ಸೋವಾಗ್ಗತಃ' ಈ ಶೃತಿಯಿಂದ ಹಾಗೆ ಹೇಳಿರುವುದರಿಂದ ಎಂಬ ಅರ್ಥ.

**೨೭) ಓಂ ಓಂ ಅಶುದ್ಧಮಿತಿಚೇನ್ನಶಬ್ದಾತ್ ಓಂ**

ಹಿಂಸಾರೂಪ ಯಜ್ಞದಿಂದ ಕರ್ಮದಲ್ಲಿ ಅಶುದ್ಧತೆ ಅದಕ್ಕಿದ್ದು ಸಾಧನ ವೆಂದರೆ 'ಇತಿಚೇನ್ನ' ಯಾಕೆಂದರೆ ಶೃತಿವಾಕ್ಯ ವಿಹಿತವಾದ (ವೇದ) ಶಬ್ದಗಳಿಂದ ಯೋಗ್ಯವೆಂದು ಪ್ರತಿಪಾದಿತವಾಗಿದೆ ಎಂಬ ಅರ್ಥ.

**೨೮) ಓಂ ಓಂ ರೇತಃಸಿಗ್ಯೋಗೋಥ ಓಂ (ರೇತೋಧಿಕರಣಂ)**

ಕರ್ಮ ಮಾಡುವ ಜೀವಿಯು ಮೊದಲು ರೇತಃಸಿಗ್ಯೋಗಃ 'ರೇತಸೇಚನ ಮಾಡಲು (ತಂದೆ) ಪುರುಷನ ಜತೆ ಸಂಬಂಧದಿಂದ ರೇತಸ್ಸಿನ ಪ್ರವೇಶವಾಗು ತ್ತದೆ. ಅಥ ನಂತರ ಮಾತೃಪ್ರವೇಶವಾಗುತ್ತದೆ ವಿನಃ ಮೊದಲಿಗೇ ಆಗಲಾರ ದೆಂದರ್ಥ.

## ೨೯) ಓಂ ಓಂ ಯೋನೇಃ ಶರೀರಂ ಓಂ (ಯೋನ್ಯಧಿಕರಣಂ)

ಅದರಿಂದ ಏನಾಗುತ್ತದೆಂದರೆ ಕಾರ್ಯಕರ್ತೃ ವ ಪಿತೃವಿನಿಂದ ತಾಯಿಯ ಯೋನಿಯನ್ನು ಪ್ರವೇಶ ಮಾಡಿದ ಮೇಲೆ 'ಶರೀರಂ' ಶರೀರಪ್ರಾಪ್ತಿಯಾಗುತ್ತದೆಯೇ ವಿನಃ ಈ ಕ್ರಮವಿಲ್ಲದೇ ಇಲ್ಲವೇ ಇಲ್ಲವೆಂದರ್ಥ.

**ಇತಿ ಶ್ರೀಜಗನ್ನಾಥಯತಿಕೃತಾಯಾಂ ಸೂತ್ರದೀಪಿಕಾಯಾಂ ತೃತೀಯಾಧ್ಯಾಯಸ್ಯ ಪ್ರಥಮಪಾದಃ ತ್ರಿ.ಪ್ರ.ಪಾದ ಕನ್ನಡಾನುವಾದ ಸಮಾಪ್ತವಾಯಿತು.**

## ೧) ಓಂ ಓಂ ಸಂಧ್ಯೇಸೃಷ್ಟಿರಾಹಹೀ ಓಂ (ಸಂಧ್ಯಧಿಕರಣಂ)

'ಹಿ' ಯಾವ ಕಾರಣದಿಂದ 'ಅಥರಥಾನ್' ಎಂಬ ಶೃತಿಯಂತೆ 'ಸಂಧ್ಯಃ' ಎಚ್ಚರ-ಗಾಢನಿದ್ರೆ ಈ ಎರಡರ ಮಧ್ಯದಲ್ಲಿ (ಸಂಧಿಕಾಲ) ಭಗವಂತನು ಸ್ವಪ್ನಗಳ ಸೃಷ್ಟಿಮಾಡುವನೆಂದು ವೇದದಲ್ಲಿ 'ಆಹ' ಹೇಳಲಾಗಿದೆ ಎಂಬ ಅರ್ಥ.

## ೨) ಓಂ ಓಂ ನಿರ್ಮಾತಾರಂಚೈಕೆ ಪುತ್ರಾದಯಶ್ಚ ಓಂ

'ಚ' ಯಾಕೆಂದರೆ ಏಕೆ ಒಂದು ಶಾಖೆಯವರು ಈಶ್ವರನಿಗೆ ಸ್ವಪ್ನನಿರ್ಮಾತಾ ಎಂದು ಹೇಳುತ್ತಾರೆ. 'ಸ ಏಷು ಸುಪ್ತೇಷು' ಎಂದು ಸ್ವಪ್ನ ಪದಾರ್ಥಗಳ 'ನಿರ್ಮಾತಾರಂ' ನಿರ್ಮಾತಾ ಎಂದೂ ಮತ್ತು ಕೆಲವರು 'ಪುತ್ರಾದಯಶ್ಚ' ಎಂಬುವುದರಿಂದ ವಿಷ್ಣುವಿನಿಂದಲೇ ಹುಟ್ಟುತ್ತದೆ ಎಂದೂ ಆದರಿಂದ ಅವನಿಂದಲೇ ಸ್ವಪ್ನ ಪದಾರ್ಥಸೃಷ್ಟಿ ಎಂದು ಅರ್ಥ.

## ೩) ಓಂ ಓಂ ಮಾಯಾಮಾತ್ರಂತು ಕಾರ್ತ್ಸ್ನೇನಾನಭಿವ್ಯಕ್ತಿಸ್ವರೂಪತ್ವಾತ್ ಓಂ

ಮತ್ತು 'ಮಾಯಾಮಾತ್ರಂ' ಈ ಸ್ವಪ್ನಗಳೆಂದ 'ಉಪಾದಾನ ಕಾರಣಭೂತವಾದ ಮಾಯಾ ಶಬ್ದದಿಂದ ಪ್ರಸಿದ್ಧವಾದ ಇಛಾ ಹಾಗೂ ವಾಸನಾ ಇವುಗಳಿಂದ ಸೃಷ್ಟವಾದದ್ದೇ ವಿನಃ ಬಾಹ್ಯಕಾರಣಗಳಾವವೂ ಅಲ್ಲ. ಯಾಕೆಂದರೆ, ಕಾರ್ತ್ಸ್ನೇನಾನಭಿವ್ಯಕ್ತಸ್ವರೂಪತ್ವಾತ್ ಬಾಹ್ಯದಂತೆ ಸರಿಯಾಗಿ ಅಭಿವ್ಯಕ್ತವಾಗದಿರುವುದೇ ಅದರ ಸ್ವರೂಪವಾಗಿದೆ ಎಂಬರ್ಥ.

## ೪) ಓಂ ಓಂ ಸೂಚಕಶ್ಚಹಿ ಶೃತೇರಾಚಕ್ಷತೇಜ ತದ್ವಿದಃ ಓಂ

'ಚ' ಯಾಕೆಂದರೆ ಸ್ವಪ್ನದ ಪದಾರ್ಥವೆಂದರೆ ಶುಭಾಶುಭಫಲಜ್ಞಾಪಕವು ಆದರೂ ಕೂಡ ಅದು ಸುಳ್ಳಲ್ಲ (ಅಸತ್ಯ) ಯಾಕೆಂದರೆ 'ಯದಾಕರ್ಮಸು'

ಇತ್ಯಾದಿ ಶೃತಿಯಿಂದ ಹಾಗೂ ಪ್ರತ್ಯಕ್ಷವಾಗಿ ಫಲ ಕಾಣುವುದರಿಂದಲೂ ಸತ್ಯ ಎನ್ನಲು 'ಹಿ' ಶಬ್ದ ಮತ್ತು 'ತದ್ವಿದಃ' ಸ್ವಪ್ನಫಲಜ್ಞಾನಿಗಳಾ ವ್ಯಾಸಾದಿಗಳು ಹೇಳುತ್ತಾರೆ. 'ಆಚಕ್ಷತೇ ಚ' ಮೊದಲಿನ ಶೃತಿಯಂತೆ 'ಯದಾ (ಇತ್ಯಾದಿ)' ಸ್ವಪ್ನ-ಅದರ ಕ್ರಿಯೆಗಳಿಗೆ ಅರ್ಥಕ್ರಿಯಾಕಾರಿತ್ವವಿದೆ ಎಂದು ಎಂಬುದಕ್ಕಾಗಿಯೂ ಎಂಬ ಅರ್ಥ.

## ೫) ಓಂ ಓಂ ಪರಾಭಿಧ್ಯಾನಾತ್ತುತಿರೋಹಿತಂ ತತೋಹ್ಯಸ್ಯಬಂಧವಿಪರ್ಯಯೌ ಓಂ (ಪರಾಭಿಧ್ಯಾನಾಧಿಕರಣಂ)

ಯಾಕೆಂದರೆ 'ಹಿ ತತಃ' ಆ ಈಶ್ವರನಿಂದಲೇ 'ಅಸ್ಯ' ಈ ಜೀವಿಗೆ 'ಬಂಧ ವಿಪರ್ಯಯೌ ಬಂಧ' - ಮೋಕ್ಷಗಳಾಗುತ್ತವೆ. ಅದಕ್ಕೆ 'ಪರಾಭಿಧ್ಯಾನಾತ್' ಭಗವಂತನ ಇಚ್ಛೆಯಿಂದಲೇ ಈ ಸ್ವಪ್ನವು 'ತಿರೋಹಿತಂ' ಶಾಂತ (ಲೀನ)ವಾಗುತ್ತದೆ. ಅದರ (ಈಶ್ವರನ) ವ್ಯತಿರಿಕ್ತವಾಗಿ ಬೇರೆ ಯಾವುದರಿಂದಲೂ ಸಾಧ್ಯವಿಲ್ಲವೆಂಬರ್ಥ.

## ೬) ಓಂ ಓಂ ದೇಹಯೋಗಾದ್ವಾಸೋಪಿ ಓಂ (ದೇಹಯೋಗಾಧಿಕರಣಂ)

ದೇಹಯೋಗಾದ್ವಾಸೋಪಿ, ದೇಹಾಭಿಮಾನಾವಸ್ಥಾರೂಪಜಾಗ್ರತಾವಸ್ಥೆಯಲ್ಲಿಯೂ ಕೂಡ ಈಶ್ವರನ ಇಚ್ಛಾಪ್ರಕಾರವಾಗಿಯೇ ಬಂಧ-ಮೋಕ್ಷಾದಿಗಳಾಗುತ್ತವೆ ವಿನಃ ಬೇರೆ ಯಾರಿಂದಲೂ ಸಾಧ್ಯವಿಲ್ಲವೆಂಬ ಅರ್ಥ.

## ೭) ಓಂ ಓಂ ತದಭಾವೋನಾಡೀಷ್ವತಶ್ಶ್ರುತೇರಾತ್ಮನಿಹ ಓಂ (ತದಭಾವಾಧಿಕರಣಂ)

ಈ ಜೀವನಿಗೆ 'ನಾಡೀಷು ಆತ್ಮನಿ' ನಾಡಿಯಲ್ಲಿರುವ ಪರಬ್ರಹ್ಮನಿಂದಲೇ 'ತದಭಾವಃ' ಜಾಗ್ರತ್ ಮತ್ತು ಸ್ವಪ್ನಗಳ (ಅಭಾವವು) ನಾಶವಾಗುತ್ತದೆ. ಅಂದರೆ

ಗಾಢನಿದ್ರಾವಸ್ಥೆ ಬರುತ್ತದೆ. ಯಾಕೆಂದರೇ ಆ ಸಮಯಕ್ಕೆ ಅಲ್ಲಿ ದೇವರು ಪ್ರವೇಶ ಮಾಡುತ್ತಾನೆ. ಯಾಕೆಂದರೆ 'ತಚ್ಛ್ರುತೇಃ' ಆಸುತದಾನಾಡಿಷು ಇತ್ಯಾದಿ ಶೃತಿಯಲ್ಲಿ ಹೇಳಿದ ಕಾರಣ ಎಂಬ ವಿಶೇಷ ಯುಕ್ತ್ಯರ್ಥವನ್ನು 'ಹ' ಎಂಬುದರಿಂದ ಹೇಳಿದ್ದಾರೆ.

**೮) ಓಂ ಓಂ ಅತಃ ಪ್ರಬೋಧೋಽಸ್ಮಾತ್ ಓಂ (ಪ್ರಬೋಧಾಧಿಕರಣಂ)**

ಈ ಜೀವನಿಗೆ ಗಾಢನಿದ್ರೆಯಿಂದ ಎಚ್ಚರವಾಗುವುದೂ 'ಪ್ರಬೋದಃ ಅಸ್ಮಾತ್' ಎಚ್ಚರವೂ ಪರಮಾತ್ಮನಿಂದಲೇ ಆಗುತ್ತದೆ ವಿನಃ ಬೇರೆ ಯಾರಿಂದಲೂ ಅಲ್ಲ. ಯಾಕೆಂದರೆ 'ಏಷ ಏವ' ಈ ಶೃತಿಯಲ್ಲಿ ಹೇಳಿರುವುದರಿಂದವೆಂಬ ಅರ್ಥ.

**೯) ಓಂ ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ಓಂ (ಕರ್ಮಾನುಸ್ಮೃತ್ಯಧಿಕರಣಂ)**

ಮತ್ತು 'ಸ ಏವ' ಆ ಬ್ರಹ್ಮನೇ ಎಲ್ಲರಿಗೂ ಯಾವಾಗಲೂ ಸಮಸ್ತ ಅವಸ್ಥೆಗಳಲ್ಲಿಯೂ (ಜಾಗ್ರತ್ಸುಷುಪ್ತಿಸ್ವಪ್ನತುರೀಯ) ಪ್ರೇರಕನವನೇ ವಿನಃ ಬೇರೆ ದೇಶಕಾಲಾದಿಗಳಲ್ಲಿ ಮತ್ತೊಬ್ಬನೆನ್ನಲಾಗುವುದಿಲ್ಲ. ಯಾಕೆಂದರೆ 'ಕರ್ಮಾನುಸ್ಮೃತಿಶಬ್ದವದಿಭ್ಯಃ', 'ಏಷಹ್ಯೇವ' ಇತ್ಯಾದಿ ಕರ್ಮಗಳೂ ಕೂಡ ಈಶಾಧೀನವೆಂಬ ಶೃತಿಯಿಂದ ಮತ್ತು ಪ್ರದರ್ಶಕವೆಂಬ ಅನುಕೂಲಕರ ಸ್ಮೃತಿಯಿಂದಲೂ 'ಏಷಃ' ಎಂಬ ಶಬ್ದದಿಂದಲೂ 'ಆತ್ಮಾನಂ' ಎಂಬ ವಿಧಿವಾಕ್ಯದಿಂದಲೂ ಸ್ಪಷ್ಟಗೋಚರವಾಗುತ್ತದೆ ಎಂಬ ಅರ್ಥ.

**೧೦) ಓಂ ಓಂ ಮುಗ್ಧೇರ್ಧಸಂಪತ್ತಿಪರಿಶೇಷಾತ್ ಓಂ (ಸಂಪತ್ಯಧಿಕರಣಂ)**

'ಮುಗ್ಧೇಃ ಅರ್ಥಸಂಪತ್ತಿಃ' ಜೀವನಿಗೆ ಮೂರ್ಛಾವಸ್ಥೆಯಲ್ಲಿ ಪರಮಾತ್ಮನು ಅರ್ಥಪ್ರವಿಷ್ಟನಾಗಿರುತ್ತಾನೆ. ಯಾಕೆಂದರೆ 'ಪರಿಶೇಷಾತ್' ಪ್ರಸಕ್ತಕಾಲದಲ್ಲಿ ಪ್ರತಿಷೇಧಿಸಲ್ಪಡುವ ಅನುಮಾನದಿಂದ ಇತ್ಯರ್ಥ.

**೧೧) ಓಂ ಓಂ ನಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ (ನಸ್ಥಾನತೋಽಪ್ಯಧಿಕರಣಂ)**

'ಪರಸ್ಯ' ಈಶ್ವರನಿಗೆ 'ಸ್ಥಾನತೋಽಪಿ' ಕಣ್ಣು ಮೊದಲಾದ ಸ್ಥಾನಭೇದವಿದ್ದರೂ ಕೂಡ 'ಉಭಯಲಿಂಗ' ಭಿನ್ನರೂಪವೇ ಏನೆಂದರೆ 'ನಾಸ್ತಿ' ಇಲ್ಲ. ಎಲ್ಲ ಕಡೆ ಎಲ್ಲ ಸ್ಥಾನಗಳಲ್ಲಿರುವ ರೂಪ ಒಂದೇ ಆಗಿದೆ. ಯಾಕೆಂದರೆ 'ಹಿ' ಸರ್ವೇಷು ಭೂತೇಷು ಎಂಬ ಶೃತಿಯು ಇಲ್ಲಿ ಇದ್ದ ಪ್ರಯುಕ್ತ ಎಲ್ಲೇ ಇದ್ದರೂ ಈಶ್ವರ ರೂಪಗಳಲ್ಲಿ ಭೇದವಿಲ್ಲವೆಂಬ ಅರ್ಥ.

**೧೨) ಓಂ ಓಂ ನ ಭೇದಾದಿತಿಚೇನ್ನಪ್ರತ್ಯೇಕಮತದ್ವಚನಾತ್ ಓಂ**

'ಭೇದಾತ್ ಕಾರ್ಯಕಾರಣಬದ್ಧೌ. ಸ್ವಪ್ನಜಾಗ್ರತ್' ಈ ಅನುಭವ ಹುಟ್ಟಿಸುವುದು ಎಂಬ ಭೇದ ತೋರಿಸುವುದಾಗಿ ಕೇಳಿದ್ದೂ ವಿಶ್ವಾದಿರೂಪಗಳಲ್ಲಿ 'ನಭೇದಾದಿತಿಚೇನ್ನ' ಎಂಬಂತೆ ಅಭೇದವೇ ಇದೆ ಆರೋಪಗಳಿಗೆ ಯಾಕೆಂದರೆ 'ಏಷ ತ ಆತ್ಮಾ' ಈ ಮೊದಲಾದ ಅಭೇದ ಶೃತಿಗಳಿರುವುದರಿಂದಲೂ ಆ ವಿಶ್ವಾದಿ ರೂಪಗಳಲ್ಲಿ ಪರಸ್ಪರವಾಗಿ 'ಅತದ್ವಚನಾತ್ ಅಭೇದವಿದೆ ಎಂದೇ ತಿಳಿಯಬೇಕೆಂದರ್ಥವು.

**೧೩) ಓಂ ಓಂ ಅಪಿಚೈವಮೇಕೇ ಓಂ**

ಯಾವ ರೀತಿಯಿಂದ ಈ ರೂಪಗಳಲ್ಲಿ ಅಭೇದ ರೂಪವಾದ ಅನಂತರೂಪವೆಂದು 'ಚ ಏವಮೇಕೆ' ಕೆಲವು ಶಾಖಿಗಳು 'ಅಮಾತ್ರಃ' ಇತ್ಯಾದಿ ಶೃತಿಗಳಲ್ಲಿ ಪಠಿಸುತ್ತಾರೆ. ಮತ್ತು 'ಅಪಿ' ಅಭೇದವಿದ್ದರೂ ಭೇದರೂಪದಿಂದ ನಿದರ್ಶಿಸುವ ಹಾಗೆ (ಸ್ಥಾನಭೇದಾದಿಗಳಿಂದ) ಯೋಗ್ಯವೇ ಸಿರ ಎಂಬ ಅರ್ಥ.

## ೧೪) ಓಂ ಓಂ ಅಪರೂಪವದೇವಹಿತತ್ಪ್ರಧಾನತ್ವಾತ್ ಓಂ (ಅರೂಪಾಧಿಕರಣಂ)

ಪರಬ್ರಹ್ಮನು 'ಅರೂಪವದೇವ' ಪ್ರಾಕೃತರೂಪರಹಿತವಾಗಿಯೇ ಇರುವನು. ಯಾಕೆಂದರೆ 'ತತ್ಪ್ರಧಾನತ್ವಾತ್' ಪ್ರಕೃತ್ಯಾದಿಗಳಕಿಂತಲೂ ಉತ್ತಮನಾದ್ದರಿಂದ 'ಹಿ' ಶಬ್ದದಿಂದ 'ಅಸ್ಥೂಲ'ವೆಂಬ ಶೃತಿಗಳಿಂದಲೂ ಎಂಬ ಅರ್ಥ ತೋರುತ್ತದೆ.

## ೧೫) ಓಂ ಓಂ ಪ್ರಕಾಶವಚ್ಚಾವೈಯರ್ಥ್ಯಂ ಓಂ

ಇಂತಹ ಉತ್ತಮನಾದ್ದರಿಂದಲೇ ಪ್ರಕಾಶವತ್ ಲೋಕವಿಲಕ್ಷಣವಾದ ಕಣ್ಣು ಮೊದಲಾದವುಗಳಲ್ಲಿ ಪ್ರಕಾಶವಿಲ್ಲ ಇದೆ ಎಂಬ ವ್ಯವಹಾರಮಾಡುವಂತೆ 'ಅವೈಯರ್ಥ್ಯಂ' ಬ್ರಹ್ಮನು ರೂಪ ಉಳ್ಳವನೆಂಬ ಶೃತಿಗಳು ಅಪ್ರಮಾಣವೆಂದು ಸಂಶಯ ಪಡಬಾರದು. ಯಾಕೆಂದರೆ ಅವನಲ್ಲಿ ಅರೂಪಿತ್ವವಿದೆಯೆಂದರೆ ವಿಲಕ್ಷಣವಾದ ರೂಪವಿದೆ ಎಂಬುದಾಗಿ ಒಪ್ಪಬೇಕಾಗುತ್ತದೆ ಎಂಬ ಅರ್ಥ.

## ೧೬) ಓಂ ಓಂ ಅಹ ಚ ತನ್ಮಾತ್ರಂ ಓಂ

ಯಾಕೆಂದರೆ 'ಐಕಾತ್ಮ್ಯ' ಇತ್ಯಾದಿ ಶೃತಿಯು ಈಶನಿಗೆ 'ತನ್ಮಾತ್ರಂ' ವಿಜ್ಞಾನಾನಂದಾದಿ ಸ್ವರೂಪಭೂತವಾದ ರೂಪವನೆಂದು ಹೇಳುತ್ತಾರೆ ಎಂಬ ಅರ್ಥ. ಆದ್ದರಿಂದ ವೈಲಕ್ಷಣ್ಯರೂಪ ಮಾತೆಂದು 'ಚ' ಶಬ್ದದ ಅರ್ಥ.

## ೧೭) ಓಂ ಓಂ ದರ್ಶಯತಿಚಾಥೋ ಅಪಿಸ್ಮರ್ಯತೇ ಓಂ

ಯಾಕೆಂದರೆ 'ಚ' ಒಟ್ಟಾಗಿ ಕೇವಲ ಬ್ರಹ್ಮನಿಗೆ ಮಾತ್ರ ಆನಂದಾದಿ ರೂಪಿ ಎಂದು ಹೇಳದೇ 'ತದ್ವಿಜ್ಞಾನೇನ' ಎಂಬ ಶೃತಿಯಿಂದ ಜ್ಞಾನಕ್ಕೆ ಬ್ರಹ್ಮಸ್ವರೂಪಕತ್ವೇನ ವರ್ಣನೆ ಮಾಡುತ್ತಾರೆ. 'ಅಥೋ' ಎಂದು ಬೇರೆ ಅರ್ಥಿ ವರ್ಣನೆ

ಪರ 'ಅಥೋ.. ' ವಿಜ್ಞಾನವೂ ಬ್ರಹ್ಮರೂಪವೇ ಎನ್ನಲು 'ಸ್ಮರ್ಯತೇ ವೇದವ್ಯಾಸ ದೇವರೇ ಮೊದಲಾದವರು 'ಶುದ್ಧಸ್ಫಟಿಕ' ಇತ್ಯಾದಿಗಳಿಂದ ವರ್ಣಿತರಾಗಿದ್ದಾರೆ. ಆದಕ್ಕೆ ಜ್ಞಾನಾನಂದಾದಿಗಳು ಬ್ರಹ್ಮಸ್ವರೂಪವೆಂದು ಹೇಳುವುದು ಅಪ್ರಾಮಾಣಿ ಕವಾದದಲ್ಲ. ಪ್ರಾಮಾಣಿಕವೇ ಎಂದರ್ಥ.

## ೧೮) ಓಂ ಓಂ ಅತಯೇವಚೋಪಮಾಸೂರ್ಯಕಾದಿವತ್ ಓಂ (ಉಪ ಮಾಧಿಕರಣಂ)

'ಅತ ಏವ ಬ್ರಹ್ಮ' ಅವನ ರೂಪಗಳಿಗೆ ಅಭೇದ ಹೇಳುವುದರಿಂದಲೇ 'ಅತಏವ' ಚೇತನನಾಗಿರುವುದರಿಂದಲೇ 'ಉಪಮಾ ಮತ್ಸ್ಯಾದಿ ರೂಪಗಳಿಂದ ಸಾಮ್ಯವು ಅದರಂತೆ ಜೀವೇಶ್ವರಾಭೇದವೆಂದರೆ ಅದು ಸರ್ವಥಾ ಇಲ್ಲ. 'ಚ' ಅಂದರೆ ಭಿನ್ನರಾದರೂ ಸಾಮ್ಯವೆಂಬಂತೆ. ಯಾಕೆಂದರೆ ಅನಿಮಿತ್ತ 'ಸೂರ್ಯಕಾ ದಿವತ್' ಯಾವರೀತಿ ಸೂರ್ಯನ ಪ್ರತಿಬಿಂಬವು ನೀರಿನಲ್ಲಿ ಬಿದ್ದರೂ ಅದು ಹೇಗೆ ಭಿನ್ನವೋ ಹಾಗೆಯೇ ಜೀವನು ಪ್ರತಿಬಿಂಬನಾಗಿದ್ದ ಪ್ರಯುಕ್ತ ಈಶ್ವರನಿಂದ ಭಿನ್ನರೇ ಎಂಬರ್ಥವೋ ಅಥವಾ ಮತ್ಸ್ಯಾದಿ ರೂಪಗಳಲ್ಲಿ ಜ್ಞಾನಾದಿಗಳಿಂದ ವೈಶಿಷ್ಟ್ಯವಿಲ್ಲದ್ದರಿಂದ ಅವು ಅಭಿನ್ನಗಳೇ. ಅದಕ್ಕೆ 'ಸೂರ್ಯಕಾದಿವತ್ ಉಪಮಾ' ಎಂದು ಸೂರ್ಯಬಿಂಬಪ್ರತಿಬಿಂಬೋಪಮಾ ಕೊಡಲಾಗಿದೆ. ಜೀವನಿಗೆ ಮತ್ಸ್ಯಾದಿ ಸಾಮ್ಯಾಂಶವೆಂದರೆ ವಿಶೇಷತೆ ಇಲ್ಲದಿರಬೇಕಾಗುತ್ತದೆ. ಹಾಗಾದರೆ ಪ್ರತಿಬಿಂಬ ವೆಂದು ಹೇಳಲಾಗದು. ಹಾಗೇ ಆಗಲೆಂದರೆ ಜೀವನು ಬ್ರಹ್ಮಾಭಿನ್ನನೆಂದಾಗು ತ್ತಾದೆ. ಅಥವಾ 'ಆತ ಏವ' ಪ್ರಕೃತದಲ್ಲಿ ಅವನ ಅಧೀನ ಅವನ ಸದೃಶನಾಗು ವುದಕ್ಕೆ ಮಾತ್ರ ಹೋಲಿಕೆ ಹೇಳಬಹುದೇ ವಿನಃ ಅಭಿನ್ನವಾದವುಗಳಲ್ಲಿ ಈ ಲಕ್ಷಣಾ ಕೂಡುವುದಿಲ್ಲ. ಜೀವ-ಈಶ್ವರ ಪ್ರತಿಬಿಂಬಿಯಾಗಿದ್ದು ಅವಧಿಯ ಅಧೀನತೆ ಇಲ್ಲ ದಿರಲಿ ಅಥವಾ ಉಪಾಧಿ ನಿವೃತ್ತವಾದರೆ ಅಲ್ಲಿಯ ಪ್ರತಿಬಿಂಬತೆ ನಿವೃತ್ತವಾಗಲಿ ಎಂದು ಕಾರಣ ಜೀವೇಶ್ವರರಲ್ಲಿ ಅಭೇದ ಸರ್ವಥಾ ಇಲ್ಲವೇ ಇಲ್ಲ ಎಂಬ ಅರ್ಥ.

## ೧೯) ಓಂ ಓಂ ಅಂಬುವದಗ್ರಹಣಾತ್ತುನ ತಥಾತ್ವಂ ಓಂ (ಅಂಬುವದಧಿಕರಣಂ)

ಸಾದೃಶ್ಯ ತೋರಿಸಲು ವತ್ ಪ್ರತ್ಯಯ, ಅಂಬುವತ್ ಎಂದು ಸ್ನೇಹರೂಪ ನಿಶೇಷಣದಿಂದ ತೋರಿಸಿದೆ ಹಾಗೂ ಯಾವ 'ಅಗ್ರಹಣಾತ್' ಭಕ್ತಿಸಹಿತಮಾಹಾತ್ಮ್ಯ ಜ್ಞಾನವಿಲ್ಲದಿದ್ದರೆ 'ತಥಾತ್ವಂ' ಸುಖರೂಪ ಆತ್ಮ ಸ್ವರೂಪಭೂತವಾದ ಸಾದೃಶ್ಯವು ಯುಕ್ತ. ಆದರೆ ಸರಿಯಾಗಿ ಸಾಮ್ಯ ತೋರುವುದೇ ಇಲ. ಅದಕ್ಕೆ ಭಕ್ತಿಯೇ ಸರಿಯಾದ ಸ್ವರೂಪಾಭಿವ್ಯಕ್ತಿಗೆ ಕಾರಣ (ಜನಕ). ಅದಕ್ಕೋಸ್ಕರ ಆ ಭಕ್ತಿಯನ್ನು ಮಾಡಬೇಕೆಂದರ್ಥ.

## ೨೦) ಓಂ ಓಂ ವೃದ್ಧಿಹ್ರಾಸಭಾಕ್ತ್ವಂತರ್ಭಾವಾದುಭಯಸಾಮಂಜಸ್ಯಾದೇವಂ ಓಂ (ವೃದ್ಧಿಹ್ರಾಸಾಧಿಕರಣಂ)

ವೃದ್ಧಿಹ್ರಾಸಭಾಕ್ತ್ವಂ ಭಕ್ತನಿಗೆ ಅಂದರೆ ಸಾಧಕನಿಗೆ ಆಧಿಕತೆ ಅಥವಾ ನ್ಯೂನತೆಯನ್ನು ಒಪ್ಪಬಾರದು. ಯಾಕೆಂದರೆ 'ಅಂತರ್ಭಾವಾತ್' ಮಹಾಕಡಿಮೆ ಫಲಾಪೇಕ್ಷೆಯುಳ್ಳ ಬ್ರಹ್ಮಾದಿಗಳಾಗಲೀ ಬೇರೆಯ ಜೀವಿಗಳಾಗಲೀ ಎಲ್ಲರೂ ಭಕ್ತರೆಂಬುದರಲ್ಲಿ ಸೇರುತ್ತಾರೆ. ಆದರೂ ಅವರಲ್ಲಿ ಯಾಕೆ ವೃದ್ಧಿಹ್ರಾಸಾದಿಗಳೆಂದರೆ, ಭಕ್ತಿಯಲ್ಲಿ ತಾರತಮ್ಯ ಇದ್ದೇ ಇರುತ್ತದೆ. 'ಉಭಯಸಾಮಂಜಸ್ಯಾತ್' ಅಧಿಕ-ಅಲ್ಪವೆಂಬ ಫಲ (ಕೊಡುವ) ಬ್ರಹ್ಮಾದಿ ಜೀವಿಗಳಿಗೆ ಕೊಡುವ ಈಶ್ವರನಿಗೆ ಸಾಮಂಜಸ್ಯವಿದ್ದು (ವೈಷಮ್ಯದಿಂದ) ಫಲ ಕೊಡುವಲ್ಲಿ ಅವರವರ ಭಕ್ತಿಯಲ್ಲಿಯ ತಾರತಮ್ಯದಿಂದ ಯುಕ್ತವಾಗಿರುತ್ತದೆ. ಹಾಗೆ ಹೇಳದಿದ್ದರೆ ಆಯುಕ್ತವಾಗುತ್ತದೆ. ಅದಕ್ಕೆ ಸಾಧನ ತಾರತಮ್ಯದಿಂದ ಫಲ ತಾರತಮ್ಯವೆಂದೇ ಒಪ್ಪಬೇಕೆಂದರ್ಥ.

## ೨೧) ಓಂ ಓಂ ದರ್ಶನಾಚ್ಚ ಓಂ

'ಅಥಾವ' ಎಂಬ ವೇದ, 'ಯಥಾ' ಎಂಬ ಶೃತಿಯಿಂದಲೂ ಫಲ ತಾರತಮ್ಯವು ತೋರುತ್ತಿದ್ದು (ದರ್ಶನಾತ್) ಮೊದಲಿಗೆ ಹೇಳಿರುವ ವಚನ (ಉಕ್ತಿ) ಯೋಗ್ಯವಾಗಿಯೇ ಇದೆ ಎಂಬ ಅರ್ಥ.

**೨೨) ಓಂ ಓಂ ಪ್ರಕೃತೇತಾವತ್ವಂ ಹಿ ಪ್ರತಿಷೇಧತಿತತೋಬ್ರವೀತಿ ಚ ಭೂಯಃ ಓಂ (ಪಾಲಕತ್ವಾಧಿಕರಣಂ)**

'ಹಿ' ನಿಶ್ಚಿತವಾಗಿಯೂ ಯಾಕೆಂದರೆ 'ನೈತಾವದೇನಾ' ಎಂಬ ಶೃತಿಯಿಂದ 'ಪ್ರಕೃತೈತಾವತ್ವಂ' ಸದಸ್ಯದಲ್ಲಿಯ ಸೃಷ್ಟ್ಯಾದಿಗಳನ್ನು ಮಾಡುವುದಕ್ಕೆ ಕೇವಲ ಸೃಷ್ಟಿ ಸಂಹಾರ ಮಾತ್ರ ಅವನಿಂದ ಸಾಧ್ಯವೆಂಬುವುದನ್ನು ನಿರಾಕರಿಸುತ್ತಾರೆ. 'ಪ್ರತಿ ಷೇಧತಿತತಃ' ಆ ಸೃಷ್ಟ್ಯಾದಿಕರ್ತೃತ್ವವಿದ್ದ ಮೇಲೆ 'ಭೂಮಃ' ವಿಶೇಷವಾಗಿ (ಅಧಿಕ) ರಕ್ಷಕತ್ವವೂ ಕೂಡ ಹೇಳಲ್ಪಡುತ್ತದೆ. ಅದಕ್ಕೆ ಸೃಷ್ಟಿ ಮಾಡಿ ರಕ್ಷಣೆ ಮಾಡುವನು ಎಂಬ ಪಾಲಕತ್ವರೂಪ ಮತ್ತೊಂದು ಮಹಿಮೆ ಇದೆಯೆಂದು ಸೂಚಿಸಲಾಗುತ್ತದೆ. 'ಚ' ಎಂದರೆ 'ಸೃಷ್ಟಿಂ ಚ' ಇತ್ಯಾದಿ ಸ್ಮೃತಿಯೂ ಇದೆ ಎಂದು ಸೂಚಿಸಲಾಗಿದೆ.

**೨೩) ಓಂ ಓಂ ತದವ್ಯಕ್ತಮಾಹಹಿ ಓಂ (ಅವ್ಯಕ್ತತ್ವಾಧಿಕರಣಂ)**

'ತತ್' ಆ ಪರಬ್ರಹ್ಮನು 'ಅವ್ಯಕ್ತಂ' ಸಾಮಾನ್ಯ ಪುರುಷನು ಪ್ರಯತ್ನದಿಂದ ಕಾಣಿಸದಿರುವ ಸ್ವಭಾವಿ. ಯಾಕೆಂದರೆ 'ನಿಷ್ಕಲಂ' ಇತ್ಯಾದಿ ಶೃತಿಯು ಆ ರೀತಿಯಾಗಿ ಹೇಳಿದ ಕಾರಣ ಬ್ರಹ್ಮ ಅವ್ಯಕ್ತನೇ ಎಂಬ ಅರ್ಥ.

**೨೪) ಓಂ ಓಂ ಅಪಿಸಂರಾಧನೆ ಪ್ರತ್ಯಕ್ಷಾನುಮಾನಾಭ್ಯಾಂ ಓಂ**

'ಅಪಿ' ಭಕ್ತಿ ಇಲ್ಲದ ಆರಾಧನೆಯಿಂದಲೂ ವಿಷ್ಣು ವ್ಯಕ್ತನಾಗುವುದಿಲ್ಲ. ಯಾಕೆಂದರೆ 'ಸಂರಾಧನೇಪಿ' ಸರಿಯಾಗಿ ಪೂಜಿಸಿದರೂ ಕೂಡ ಜ್ಞಾನಿಗಳ ಪ್ರತ್ಯಕ್ಷ ಹಾಗೂ ಸೂಕ್ತ (ಅತಯೇವಾಗಮ್ಯ) ಇತ್ಯಾದಿ ಅನುಮಾನಗಳಿಂದ ಮಾತ್ರ 'ಪ್ರತ್ಯಕ್ಷಾನುಮಾನಾಭ್ಯಾಂ' ಸಿದ್ಧ, ಗಮ್ಯನಾಗುವನೆಂದರ್ಥ.

**೨೫) ಓಂ ಓಂ ಪ್ರಕಾಶವಚ್ಚಾವೈಶೇಷ್ಯಂ ಓಂ**

'ಚ' ಇಲ್ಲವಾದರೇನಮರ್ಥೇ 'ಪ್ರಕಾಶವತ್' ಹೇಗೆ ಅಗ್ನಿಯಲ್ಲಿ ಸ್ಥೂಲ ಸೂಕ್ಷ್ಮರೂಪವಿದ್ದು ಸೂಕ್ಷ್ಮರೂಪದಿಂದ ಕಾಣಿಸದಿದ್ದು ಸ್ಥೂಲರೂಪವ್ಯಾಪ್ತಿಯೋ ಹಾಗೆ ಬ್ರಹ್ಮನು ಮಾತ್ರ ಸ್ವತಃ ಅವ್ಯಕ್ತನೇ ಯಾಕೆಂದರೆ 'ಅವೈಶೇಷ್ಯಂ' ವಿಷ್ಣುವಿನ ಲ್ಲಿ ಸ್ಥೂಲ-ಸೂಕ್ಷ್ಮ ಇತ್ಯಾದಿ ವಿಶೇಷತೆಯೇ ಇಲ್ಲ. ಅದಕ್ಕೆ ಅವನಲ್ಲಿ ಕೂಡುವು ದಿಲ್ಲವೆಂದರ್ಥ.

**೨೬) ಓಂ ಓಂ ಪ್ರಕಾಶಶ್ಚಕರ್ಮಣ್ಯಭ್ಯಾಸಾತ್ ಓಂ**

'ಪ್ರಕಾಶಶ್ಚ' ಅಪರೋಕ್ಷಜ್ಞಾನದಿಂದಲೇ 'ಕರ್ಮಣಿ' ವಿಷಯಭೂತನಾದ ಬ್ರಹ್ಮನಲ್ಲಿ 'ಅಭ್ಯಾಸಾತ್' ಶ್ರವಣಾದಿಗಳನ್ನು ಮೇಲಿಂದ ಮೇಲೆ ಮಾಡುವುದ ರಿಂದಲೇ ಆಗುತ್ತದೆ ಎಂಬ ಅರ್ಥ.

**೨೭) ಓಂ ಓಂ ಅತೋ ನಂತೇನ ತಥಾ ಹಿ ಲಿಂಗಂ ಓಂ**

ಅತಃ ಅವ್ಯಕ್ತವಾದ ಬ್ರಹ್ಮಪ್ರತ್ಯಕ್ಷನಾಗುತ್ತಾನೆಂದು ಪ್ರಮಾಣವಿದ್ದರೂ ಯಾವ ಉಪಪತ್ತಿ ಇಲ್ಲದಿದ್ದರೂ ಕೂಡ ಹೀಗೆ ಹೊಂದಿಸಬೇಕು. 'ಅನಂತೇನ' ಶುದ್ಧಬ್ರಹ್ಮನ ಅನುಗ್ರಹದಿಂದ ಅವ್ಯಕ್ತಾ ಅಪರೋಕ್ಷವು ಆಗುತ್ತದೆ ಎಂದು ತಿಳಿಯುತ್ತದೆ. ಹುಟ್ಟದಿರುವ ದೋಷದಿಂದವೆಂದೂ ಅಲ್ಲ. ಹಾಗೆಂದರೇನು 'ಹಿ' ಯಾವುದರಿಂದ ಎಂದರೆ 'ತಥಾ ಲಿಂಗಂ' ಅವನ ಸರ್ವಗುಣಗಳಿಂದ ಧ್ಯಾನ ಮಾಡುವುದರಿಂದ ಎಂಬ ಈಶ್ವರನ ಪ್ರಸಾದರೂಪ ಬಂಧದಿಂದ ನಿವೃತ್ತಿ ಯನ್ನು ಪಡೆಯುವ ನಿಮಿತ್ತವಾಗಿ ಆ ಪ್ರಸಾದಕ್ಕೆ ಭಗವಂತನ ದರ್ಶನ(ಶಾಸ್ತ್ರ)ವೇ ಕಾರಣವೆಂದು ಜ್ಞಾಪಿಸಿ ಕೊಡುವುದು ಅದಕ್ಕೆ ಎಂಬ ಅರ್ಥ.

**೨೮) ಓಂ ಓಂ ಉಭಯವ್ಯಪದೇಶಾತ್ವಹಿಕುಂಡಲವತ್ ಓಂ (ಅಹಿಕುಂಡ ಲಾಧಿಕರಣಂ)**

ವಿಷ್ಣು ಆನಂದರೂಪಿ ಆನಂದಾದಿ ಗುಣಕನಾಗಿದ್ದಾನೆ. ಯಾಕೆಂದರೆ 'ಉಭಯವ್ಯಪದೇಶಾತ್', 'ಆನಂದ್ರೋಬ್ರಹ್ಮ', 'ಆನಂದಂ ಬ್ರಹ್ಮಣಃ' ಈ

ಮೊದಲಾದ ಶೃತಿಗಳಲ್ಲಿ ಗುಣಗಣರೂಪಗಳಿಂದ ಬ್ರಹ್ಮನಿಗೆ ಹೇಳಿದ ಕಾರಣ. ಅದಾದರೂ ಹೇಗೆಂದರೆ 'ಅಹಿಕುಂಡಲವತ್' ಹೇಗೆ ಹಾವಿಗೆ ಕುಂಡಲ ಹಾಗೂ ಕುಂಡಲೀ ಎಂದು ವ್ಯವಹರಿಸುತ್ತಾರೋ ಹಾಗೆಯೇ ವಿಶೇಷತೆ ಇದ್ದಿದ್ದರಿಂದ ಎಂಬ ಅರ್ಥ.

## ೨೯) ಓಂ ಓಂ ಪ್ರಕಾಶಾಶ್ರಯವದ್ವಾತೇಜಸ್ತ್ವಾತ್ ಓಂ

ಹೇಗೆ ಸೂರ್ಯನು ಪ್ರಕಾಶಿಯೂ ಬೆಳಕೂ ಅದಕ್ಕೆ ಆಶ್ರಯನೂ ಆಗಿದ್ದಾನೆಯೋ ಅದೇ ರೀತಿ ಬ್ರಹ್ಮನೂ ಕೂಡ. ಸೂರ್ಯನನ್ನೇ ಯಾಕೆ ಉದಾಹರಣೆಯಾಗಿಟ್ಟರೆಂದರೆ 'ತೇಜಸ್ತ್ವಾತ್' ಈಶ್ವರ ಮತ್ತು ಸೂರ್ಯ ಇಬ್ಬರೂ ತೇಜೋರೂಪಿಗಳಾಗಿದ್ದಾರೆ ಎಂಬುದನ್ನು ತೋರಿಸಲೇ ಈ ಅದಿತ್ಯ ದೃಷ್ಟಾಂತನೆಂಬ ಅರ್ಥವು.

## ೩೦) ಓಂ ಓಂ ಪೂರ್ವವದ್ವಾ ಓಂ

ಹೇಗೆ ಕಾಲವು ಒಂದೇ ಆಗಿದ್ದರೂ ಪೂರ್ವವೆಂದು ವಿಶೇಷಣ ಕೊಡುವರೋ ಹಾಗೆಯೇ ಬ್ರಹ್ಮನೂ ಆನಂದ ವಿಶೇಷಣದಿಂದ ಯುಕ್ತನಾಗಿದ್ದಾನೆ ಎಂಬ ಅರ್ಥ. ಅದರ ನಿಮಿತ್ತ ಸ್ಥೂಲ-ಸೂಕ್ಷ್ಮ ಬುದ್ಧಿಯನ್ನು ವಿವಕ್ಷಿತವಾಗಿಟ್ಟುಕೊಂಡು ಮೂರು ದೃಷ್ಟಾಂತಗಳನ್ನು ಹೇಳಲಾಗಿದೆ.

## ೩೧) ಓಂ ಓಂ ಪ್ರತಿಷೇಧಾಚ್ಚ ಓಂ

ಬ್ರಹ್ಮನ ಗುಣಕ್ಕೂ ಬ್ರಹ್ಮನಿಗೆ 'ನೇಹ ನಾನಾಸ್ತಿ' ಎಂಬ ಶೃತಿಯಿಂದ ಪರಸ್ಪರ ಭೇದವಿದೆ ಎಂದರೆ 'ಪ್ರತಿಷೇಧಾಚ್ಚ' ಅದನ್ನು ನಿಷೇಧಿಸಿ ಗುಣಾತ್ಮಕ ಬ್ರಹ್ಮನೆಂದು ಅಭೇದವೇ ವ್ಯಕ್ತವಾಗುತ್ತದೆ.

## ೩೨) ಓಂ ಓಂ ಪರಮತಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ಓಂ (ಪರಮತಾಧಿಕರಣಂ)

ಗುಣಯುಕ(ಜಾತ) ಬ್ರಹ್ಮನು ಲೋಕ ವಿಲಕ್ಷಣನಾಗಿದ್ದಾನೆ. ಯಾಕೆಂದರೆ 'ಪರಂ' 'ಸೇತೂನ್ಮಾನಸಂಬಂಧವ್ಯಪದೇಶೇಭ್ಯಃ', 'ಏಷ ಸೇತುಃ' ಎಂದು ಸಂಬಂಧ ಹೇಳಿದ್ದಾರೆ. 'ಯತೋವಾಚೋ' ಈ ರೀತಿ (ವ್ಯಕ್ತ) ಉನ್ಮಾನ ಶಬ್ದ ದಿಂದ ಪೂರ್ಣನೆಂದು ಹೇಳಿದೆ. 'ಏತಸ್ಯೈವಾನಂದಸ್ಯ' ಇಲ್ಲಿ ಬಿಂಬ-ಪ್ರತಿಬಿಂಬ ರೂಪ ಅಸ್ತಿತ್ವವನ್ನು ಹೇಳಿದೆ. ಅನ್ಯತ್‌ಜ್ಞಾನಂ ಎಂಬುವುದರಿಂದ ಲೌಕಿಕ ಆನಂದ ದಕಿಂತಲೂ ಬೇರೆ ಎಂದು ಭೇದತ್ವೇನ ಹೇಳಲ್ಪಡುತ್ತದೆ ಎಂದು ಅರ್ಥ.

## ೩೩) ಓಂ ಓಂ ದರ್ಶನಾತ್ ಓಂ

ಎಂದರೆ ಅನ್ಯಾನಂದಾದಿಗಳು ಪ್ರತ್ಯಕ್ಷಸಿದ್ಧವಾಗಿರುವುದರಿಂದ ಹಾಗೂ ಮನೋವಾಕ್ ವಿಷಯವಾಗಿರುವುದರಿಂದಲೂ ಬ್ರಹ್ಮಾನಂದವು. ಇಂತಹದಾಗದಿರುವುದರಿಂದಲೂ ಲೋಕವಿಲಕ್ಷಣವಾದದ್ದಿದಾಗಿದೆ ಎಂಬ ಅರ್ಥ.

## ೩೪) ಓಂ ಓಂ ಬುಧ್ಯರ್ಥಃಪಾದವತ್ ಓಂ

ಸಾಮಾನ್ಯ ಜಗತ್ತಿನ ಪಾದಕ್ಕೆ ವಿಲಕ್ಷಣವಾದ ಭೂತದ ಪಾದ. ಹಾಗೆಯೇ ಪಾದೋಸ್ಯ ವಿಶ್ವಾಭೂತಾನಿ ಎಂದು ಪಾದಪದ್ಮವನ್ನು ಇಟ್ಟಿದೆ. ತಿಳುವಳಿಕೆಯಂತೆ ಎಲ್ಲ ಪ್ರಾಣಿಗಳಿಗೆ ಈಶ್ವರಾಂಶತ್ವವಿದೆ ಎಂದು ಜ್ಞಾಪಕವಾಗಿ ಈ ಪಾದ ಪದವು ಮತ್ತು ಅಲೌಕಿಕವಾದ ಬ್ರಹ್ಮಾನಂದಾದಿಗಳಲ್ಲಿಯೂ ಕೂಡಿ 'ಆನಂದ' ವೆಂದು ಪ್ರಯೋಗ ಮಾಡಿದ್ದಾರೆ. ಬುದ್ಧಿಗೆ ತೋಚಿದ ಅರ್ಥವನ್ನು ಅನುಕೂಲಕರವಾಗಿ ತಿಳಿಯಬೇಕೆಂಬ (ಧರ್ಮ) ನಿಯಮ ತಿಳಿಸಲೆಂದೇ ಈ ಪಾದ ಶಬ್ದ ಪ್ರಯೋಗ ವೆಂದರ್ಥ.

## ೩೫) ಓಂ ಓಂ ಸ್ಥಾನವಿಶೇಷಾತ್ ಪ್ರಕಾಶಾದಿವತ್ ಓಂ (ಸ್ಥಾನವಿಶೇಷಾಧಿಕರಣ್)

'ಪ್ರಕಾಶಾದಿವತ್' ಹೇಗೆ ಸೂರ್ಯಕಾಂತಾದಿಗಳಲ್ಲಿ ಸೂರ್ಯಪ್ರತಿಬಿಂಬವಾದ ಅವುಗಳಲ್ಲಿಯೂ ಅಗ್ನಿಯನ್ನು ಹುಟ್ಟಿಸುವ ವಿಚಿತ್ರತೆ ಕಂಡು ಬರುತ್ತದೆ ಕೂಡುತ್ತದೆ. ಹಾಗೆಯೇ ವಿಷ್ಣುವಿನ ಅಧಿಷ್ಠಾನರೂಪ ಭಕ್ತಿಜ್ಞಾನಾದಿರೂಪಗುಣವೈಚಿತ್ರ್ಯತೆಯಿಂದ ಭಗವಂತನ ಆನಂದ ಪ್ರತಿಬಿಂಬಭೂತರಾದ ಚತುರ್ಮುಖಬ್ರಾಹ್ಮಾದಿಗಳ ಆನಂದಗಳಲ್ಲಿಯೂ ಕೂಡ (ವೈಚಿತ್ರ್ಯ) ವ್ಯತ್ಯಾಸವು (ಯೋಗ್ಯ) ಕೂಡಿ ಬರುತ್ತದೆ. ಈ ರೀತಿ ಅರ್ಥವನ್ನು ಮಾಡಿಕೊಳ್ಳಬೇಕು.

## ೩೬) ಓಂ ಓಂ ಉಪಪತ್ತೇಶ್ವ ಓಂ

ಬಿಂಬಭೂತನಾದ ಭಗವಂತನ ಐಶ್ವರ್ಯದ ನಿಮಿತ್ತವಾಗಿಯೇ ಪ್ರತಿಬಿಂಬಭೂತ ಬ್ರಹ್ಮಾದಿಗಳ ಆನಂದ (ತಾರತಮ್ಯ) ಉಪಪತ್ತಿ ವೈಚಿತ್ರ್ಯ ಕೂಡುತ್ತದೆ. 'ಉಪಪತ್ತೇಶ್ಚ' ಬೇರೆಯವರು ಅವನ ಪ್ರತಿಬಿಂಬಗಳೆಂಬುವದು ಯೋಗ್ಯವೇ ಎಂಬಾರ್ಥ.

## ೩೭) ಓಂ ಓಂ ತಥಾನ್ಯತ್ಪ್ರತಿಷೇಧಾತ್ ಓಂ (ತಥಾನ್ಯತ್ವಾಧಿಕರಣಂ)

ಯಾವರೀತಿ ಜೀವರ ಆನಂದ ಜ್ಞಾನಾದಿಗಳು ಬ್ರಹ್ಮಾನಂದದಕಿಂತಲೂ ವಿಲಕ್ಷಣವೋ ಹಾಗೆ ತಥಾ ಧ್ಯಾನ ಕಾಲದಲ್ಲಿ ತೋರಿದ ವಸ್ತು (ವಿಚಾರ) ವಾಸನಾಮಯವಾದದ್ದು ಅದರಕಿಂತಲೂ 'ಅನ್ಯತ್' ಅತ್ಯಂತಭಿನ್ನವಾದದ್ದು ಬ್ರಹ್ಮಾನಂದವು. ಯಾಕೆಂದರೆ 'ಯನ್ಮನಸಾ' ಎಂಬ ಶೃತಿಯಲ್ಲಿ ಬೇರೆ ಆನಂದಕ್ಕೆ (ಜೀವಿಗೆ) ಬ್ರಹ್ಮತ್ವವನ್ನು ಪೂರ್ಣವಾಗಿ ನಿಷೇಧಿಸಿದ್ದಾರೆ 'ಪ್ರತಿಷೇಧಾತ್' ಎಂಬ ಅರ್ಥ.

**೩೮) ಓಂ ಓಂ ಅನೇನಸರ್ವಗತವಮಾಯಾಮಯ ಶಬ್ದಾದಿಭ್ಯಃ ಓಂ (ಸರ್ವಗತತ್ವಾಧಿಕರಣಂ)**

'ಅನೇನ' ಈ ಭಗವಂತನಿಂದಲೇ ಸರ್ವದೇಶಕಾಲದಲ್ಲಿ ಸೃಷ್ಟ್ಯಾದಿಗಳಾಗುತ್ತವೆ. ಯಾವದೇಶಕಾಲಗಳಲ್ಲಿ ಮತ್ತೊಬ್ಬರಿಂದ ಆಗುವುದಿಲ್ಲ. ಯಾಕೆಂದರೆ ಸರ್ವಗತಮಾಯಾಮಯ ಶಬ್ದಾದಿಭ್ಯಃ 'ಏಷ ಸರ್ವಗತಃ' ಎಂಬ ಸರ್ವಗತತ್ವ ರೂಪ ಶೃತಿಯಿಂದ ಅವನಿಗೆ ಆದರೂ ಸೃಷ್ಟ್ಯಾದಿಗಳ ಪ್ರಯೋಜನವಿದ್ದುದರಿಂದಲೂ (ಜೀವಿಗೆ) ವಿಷ್ಣುವಿನಲ್ಲಿ ನಿಮಿತ್ತ ಪ್ರಯೋಗವಮಾಡಿದ ಮಾಯಾಮಯ ಶಬ್ದದ ವ್ಯಾಖ್ಯಾನರೂಪ. 'ಸರ್ವತ್ರ' ಇದೇ ಮೊದಲಾದ ಶೃತಿಯಿಂದ, ಬೇರೆ ಕಡೆ ಪ್ರಮಾಣವಿಲ್ಲ ಎಂಬ ಈ ಮೊದಲಾದ ಶಬ್ದಗಳಿಂದ ಎಂದು ಶಬ್ದಾರ್ಥವು.

**೩೯) ಓಂ ಓಂ ಫಲಮತ ಉಪಪತ್ತೇಃ ಓಂ (ಫಲಾಧಿಕರಣಂ)**

ಫಲಂ ಸ್ವರ್ಗಾದಿ ಫಲವು 'ಅತಃ' ಈ ಭಗವಂತನಿಂದಲೇ ಆಗುತ್ತದೆ ವಿನಃ ಕರ್ಮದಿಂದ ಅಲ್ಲ. ಯಾಕೆಂದರೆ 'ಉಪಪತ್ತೇಃ' ಈಶ್ವರನಿಗೆ ಚೇತನನಾದ್ದರಿಂದಲೇ ಫಲವನ್ನು ಕೊಡುತ್ತಾನೆಂಬುದು ಯೋಗ್ಯವಾಗುತ್ತದೆ ಎಂಬ ಅರ್ಥ.

**೪೦) ಓಂ ಓಂ ಶೃತತ್ವಾಚ್ಚ ಓಂ**

'ರಾತಿ' ಎಂಬ ಶೃತಿ (ರಾತಿದ್ರಾತುಃ ಪರಾಯಣಂ)ಯಲ್ಲಿ 'ಶ್ರುತತ್ವಾಚ್ಚ' ಹೇಳಿದ ಕಾರಣ ಫಲ ಕೊಡುವನು ಮುಖ್ಯವಾಗಿ ಪರಬ್ರಹ್ಮನೇ ಎಂಬ ಅರ್ಥ.

**೪೧) ಓಂ ಓಂ ಧರ್ಮಂ ಜೈಮಿನಿರತ ಏವ ಓಂ**

ಜೈಮಿನೀ ಆಚಾರ್ಯರು ಧರ್ಮವು ಫಲವನ್ನು ಕೊಡಲು ಯೋಗ್ಯವೆನ್ನುತ್ತಾರೆ. ಆ ಧರ್ಮವನ್ನು ಈಶ್ವರನಿಂದ ಹುಟ್ಟಿದ್ದಾಗಿರಬೇಕು (ಈಶ್ವರನಿಮಿತ್ತ) ಯಾಕೆಂದರೆ

ಅದಕ್ಕೆ 'ಏಷಹ್ಯೇವ' ಈ ಶೃತಿಯಿಂದಲೇ ಎಂಬ ಅರ್ಥದಿಂದ.

**೪೨) ಓಂ ಓಂ ಪೂರ್ವಂ ತು ಬಾದರಾಯಣೋ ಹೇತ್ವ ವ್ಯಪದೇಶಾತ್ ಓಂ**

ಬಾದರಾಯಣಾಚಾರ್ಯರಾದರೂ 'ಪೂರ್ವಂ ತು' ಮೊದಲು ಹೇಳಿದ್ದನ್ನೇ ಬ್ರಹ್ಮ ಹಾಗೂ ಧರ್ಮ ಈ ಎರಡೂ ಫಲ ಕಾರಣಗಳೆಂದು ಒಪ್ಪುತ್ತಾರೆ. ಅಲ್ಲಿ ಬ್ರಹ್ಮಕರ್ತಾಕರ್ಮಗಳು ಕಾರಣವಾಗಿದೆ ಎಂದು 'ತು' ಶಬ್ದದಿಂದ ವಿಶೇಷಾರ್ಥ. ಯಾಕೆಂದರೆ 'ಹೇತುವ್ಯಪದೇಶಾತ್', 'ಪುಣ್ಯೇನ' ಈ ವೇದದಲ್ಲಿ ಬ್ರಹ್ಮ ಹಾಗೂ ಕರ್ಮ ಇವುಗಳಲ್ಲಿ ಕರ್ತೃತ್ವ ಹಾಗೂ ಕರಣತ್ವರೂಪ ಕಾರಣ (ಹೇತು)ಗಳನ್ನು ಹೇಳಿದ ಪ್ರಯುಕ್ತವಾಗಿ ಎಂಬರ್ಥ.

**ಇತಿ ಶ್ರೀಜಗನ್ನಾಥಯತಿಕೃತಾಯಾಂ ಸೂತ್ರದೀಪಿಕಾಯಾಂ ತೃತೀಯಾಧ್ಯಾಯಸ್ಯ ದ್ವಿತೀಯಃ ಪಾದಃ ಉಮಾರ್ಜ ಪ್ರಜಾದಾಚಾರ್ಯ ಕೃತ ಕನ್ನಡಾನುವಾದ ಸೂತ್ರದೀಪಿಕಾ ಮೂರನೇಯ ಅಧ್ಯಾಯದ ಎರಡನೇಯ ಪಾದ ಸಮಾಪ್ತಿಯಾಯಿತು.**

## ತೃತೀಯಾಧ್ಯಾಯಸ್ಯ ತೃತೀಯಃ ಪಾದಃ ಪ್ರಾರಂಭಃ

### ೧) ಓಂ ಓಂ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ (ಸರ್ವವೇದಾಧಿಕರಣಂ)

ಮೊದಲಿನ ಸೂತ್ರದಲ್ಲಿ 'ಪೂರ್ವ' ಎಂಬ ಪದದಿಂದ ಹೇಳಿದ ಬ್ರಹ್ಮನು ಸರ್ವವೇದಾಂತಪ್ರತ್ಯಯಂ (ಇಲ್ಲಿ ಬಹುವ್ರೀಹಿ ಸಮಾಸ) ತಮ್ಮ ತಮ್ಮ ಶಕ್ತ್ಯಾನುಸಾರ ಎಲ್ಲ ವೇದ ವಿಷಯಕ ಶ್ರವಣ, ಮನನಾದಿಗಳಿಂದ ಉತ್ಪನ್ನ ನಿಶ್ಚಿತಜ್ಞಾನವಿಷಯವಾದದ್ದು ಯಾಕೆಂದರೆ 'ಚೋದ್ಯನಾದ್ಯವಿಶೇಷಾತ್' 'ಆತ್ಮೇತ್ಯೇವ' ಇತ್ಯಾದಿ ವಿಧಿವಾಕ್ಯಗಳಿಂದಲೂ ಆದಿಪದದಿಂದ ಹೇಳಿದ 'ಅತ್ರಹ್ಯೇಕ' ಈ ವಾಕ್ಯಗಳಿಂದ ಹೇಳಿದ ಯುಕ್ತಿಗಳಿಂದಲೂ ವಿಶೇಷತೆ ಇಲ್ಲ. ಸರ್ವಾಧಿಕಾರಿಗಳಿಗೂ (ಸಾಧಾರಣ) ಸಾಮಾನ್ಯತೆ ಎಂಬ ಅರ್ಥ.

### ೨) ಓಂ ಓಂ ಭೇದಾನ್ನೇತಿಚೇದೇಕಸ್ಯಾಮಪಿ ಓಂ

ಪುನಃ ಪುನಃ ಚೇತ್ ಇತಿ ನೇತಿ ಭೇದಾದಿತಿ ಅಪೀತಿ ಪುನಃ ಆವರ್ತವಾಗುತ್ತವೆ. ವಹ್ನಿ ಇತಿ ಶಾಖಾಯಾಂ ಎಂಬುವುದು ಪ್ರಾಪ್ತವಾಗುತ್ತದೆ. ಹಾಗಾದರೆ ಎಲ್ಲ ಶಾಖೆಗಳಲ್ಲಿ ಹೇಳಿದ ಅರ್ಥಗಳಲ್ಲಿ 'ಭೇದಾತ್' ಬೇರೆತನವಿದ್ದದ್ದರಿಂದ ಒಂದೊಂದರಿಂದಲೇ ಎಲ್ಲ ಶಾಖೋಕ್ತವಾದ ಅರ್ಥ ತಿಳಿಯಲಾಗದು. ಆದರೆ ತಮ್ಮ ತಮ್ಮ ಶಾಖೆಯಲ್ಲಿ ಹೇಳಿದ್ದನ್ನೂ ಕೂಡ ತಿಳಿಯಲು ಅಸಾಧ್ಯವೇ. ಯಾಕೆಂದರೆ 'ಏಕಸ್ಯಾಂ' ಒಂದು ಶಾಖೆಯಲ್ಲಿಯೂ ಕೂಡ 'ಭೇದಾತ್' ಅರ್ಥಭೇದ ಕಂಡು ಬರುತ್ತದೆ. ಅನಂತರ ಒಂದು ವೇಳೆ ಅಲ್ಲಿ ಧರ್ಮಭೇದದಿಂದ ಒಂದೇ (ಧರ್ಮ) ಪದಾರ್ಥದಲ್ಲಿ ಬೇರೆ ಧರ್ಮವಿಧಾನ ಮಾಡುವದಾದರೆ ಪ್ರಸಂಗ ವ್ಯತ್ಯಾಸದಿಂದ ಎಂದು ಅದಕ್ಕೆ ಪರಿಹಾರ ಹೇಳಿದರೆ ಅದಕ್ಕೆ ಎಲ್ಲ ಶಾಖೆಯಲ್ಲಿ ಹೇಳಿದ ಜ್ಞಾನದಿಂದಲೂ ಕೂಡ ಎಂದು ಸಮಾನತೆ ಇದೆ ಎಂಬ ಅರ್ಥ.

**೩) ಓಂ ಓಂ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಧಿಕಾರಾಚ್ಚ ಓಂ**

'ಸ್ವಾಧ್ಯಾಯಸ್ಯ', 'ಸ್ವಾಧ್ಯಾಯೋಧ್ಯೇತವ್ಯಃ' ಎಂಬ ವಿಧಿಯಿಂದ 'ತಥಾತ್ವೇನ' ಸರ್ವಸಾಧಾರಣವಾಗಿ ಅಧ್ಯಯನ ಮಾಡಬೇಕೆಂಬ ನಿಯಮದಿಂದ 'ಸಮಾಚಾರೇ' ಎಲ್ಲ ವೈದಿಕ ಕರ್ಮ ಮಾಡುವುದರಿಂದ. 'ಅಧಿಕಾರಾತ್' ಎಲ್ಲರಿಗೂ ಅಧಿಕಾರ ಬರುವುದರಿಂದಲೂ 'ಹಿ ಇತಿ' ಎಂದು 'ವೇದಃ ಕೃತ್ಸ್ನೋಧಿಗಂತ್ಯವ್ಯಃ' ಈ ಸ್ಮೃತಿಯಿಂದಲೂ ಒಬ್ಬೊಬ್ಬನಿಂದಲಾದರೂ ಸರ್ವಶಾಖಾಧ್ಯನ ಮಾಡುವುದರಿಂದ ಬ್ರಹ್ಮನನ್ನು ತಿಳಿಯಬೇಕೆಂದರ್ಥ.

**೪) ಓಂ ಓಂ ಸಲಿಲವಚ್ಚತನ್ನಯಮಃ ಓಂ**

ನಿಶ್ಚಿತವಾಗಿಯೂ ತನ್ನಿಯಮ ಇಲ್ಲಿ ಪಂಚಮೀ ತತ್ಪುರುಷಕರ್ಮಧಾರಯ ಪ್ರಯೋಗ. ನೀರಿನಂತೆ 'ಸಲಿಲವತ್ ತನ್ನಿಮಯಮಃ' ಹೇಗೆ ಎಲ್ಲ ನೀರಿಗೂ ಪ್ರತಿಬಂಧಕವಿಲ್ಲದಿರುವುದನ್ನು ತಿಳಿದೇ ಸಮುದ್ರವೊಂದೇ ಆಶ್ರಯಭೂತವೆಂಬ ನಿಯಮದಂತೆ. ಇಲ್ಲಿಯೂ ಪುರುಷನ ಶಕ್ತ್ಯಾನುಸಾರವಾಗಿಯೇ (ಆ ನಿಯಮವು) ಎಲ್ಲ ವೇದದಲ್ಲಿ ಹೇಳಿದಂತೆ ಹಾಗೂ ಧ್ಯಾನದಿಂದಲೆ ವಿಷ್ಣುವನ್ನು ತಿಳಿಯಬೇಕಂದರ್ಥೈಸಿಕೊಳ್ಳಬೇಕು.

**೫) ಓಂ ಓಂ ದರ್ಶಯತಿ ಚ ಓಂ**

ವೇದ, ಸ್ಮೃತಿಗಳೂ ಕೂಡ ಎಲ್ಲ ಶಾಖೋಕ್ತವಾದ ಮಾರ್ಗದಿಂದ ಪರಬ್ರಹ್ಮನನ್ನು ತಿಳಿಯಬೇಕೆಂಬ ಅರ್ಥವನ್ನು 'ದರ್ಶಯತಿ' ತಿಳಿಸಿಕೊಡುತ್ತವೆ ಎಂಬ ಅರ್ಥ.

## ೬) ಓಂ ಓಂ ಉಪಸಂಹಾರೋರ್ಥಾಭೇದಾದ್ವಿಧಿಶೇಷವತ್ಸಮಾನೇ ಚ ಓಂ (ಉಪಸಂಹಾರಾಧಿಕರಣಂ)

'ವಿಧಿಶೇಷವತ್' (ವಿಧಿ) ನಿಯಮಿತವಾದ ವಿಧಿಯಿಂದಲೇ. ಹೇಗೆ ಸಂಧ್ಯಾವಂದನೆ ವಿಧಿವಿಹಿತವಾಗಿದೆಯೋ ಹಾಗೆಯೇ 'ಅರ್ಥಾಭೇದಾತ್' ಶಾಖಾಭೇದಗಳಿಂದ ಎಲ್ಲ ವೇದಾರ್ಥಭೂತವಾದ ಆನಂದಾದಿಗಳನ್ನು ಎಲ್ಲ ಪಾಪ ಗಳನ್ನೂ ಕಳೆದುಕೊಂಡು ಅವುಗಳನ್ನು ವಿಭಾಗಮಾಡದೇವೆ 'ಉಪಸಂಹಾರಃ' ಎಲ್ಲ ಗುಣಗಳಲ್ಲಿಯೂ ಏಕಾಗ್ರಬುದ್ಧಿಯಿಂದ ಆರೋಹಣರೂಪವಾಗಿ 'ಉಪ ಸಂಹಾರಃ' ಶಮನ ಮಾಡಿಕೊಳ್ಳಬೇಕು. 'ಉಪಾಶ್ಯ ಏಕಃ' ಈ ಶೃತಿಯಲ್ಲಿ ಹೇಳಿ ದಂತೆ ಮಾಡಬೇಕು. ಅದನ್ನಾದರೂ 'ಸಮಾನ ಚ' ಸಮಾನ್ಯವಾದ ವಿಷಯಗ ಳಿಂದಲೇ 'ಯಾವುಗಳು ಬ್ರಹ್ಮನಲ್ಲಿ ಯೋಗ್ಯವಾದ ಪೂರ್ಣತ್ವಾದಿಗಳಿಗೆ ಅವಿರೋ ಧವಾಗಿರುವವೋ ಅಂತಹ ಗುಣಗಳು ಅದರ ವಿಷಯಕವಾಗಿಯೇ ವಿನಃ ಆ ಯೋಗ್ಯವಾದ ಅಳುವುದು ಮೊದಲಾದವುಗಳಲ್ಲ. ಹಾಗೆ ಅಯೋಗ್ಯವಾದವು ಗಳಿಂದ ಅನರ್ಥ ಪ್ರಾಪ್ತಿಯಾಗುತ್ತದೆ ಎಂಬ ಅರ್ಥ (ರಾಮ ರೋದನ ಮಾಡಿ ದೆಂಬ ಆಯೋಗ್ಯ ಉಪಾಸನೆಯಿಂದ) ಎಂದು ತಿಳಿಯಬೇಕು.

## ೭) ಓಂ ಓಂ ಅನ್ಯಥಾತ್ವಂ ಚ ಶಬ್ದಾದಿಪತಿಚೇನ್ನಾವಿಶೇಷಾತ್ ಓಂ

'ಅನ್ಯಥಾತ್ವಂ' ಸರ್ವಗುಣಗಳ (ಸಮಾವೇಶ) ಉಪಸಂಹಾರ ಮಾಡಬೇಕೆಂಬುದಕ್ಕೆ ಅನ್ಯಥಾ ಭಾವ. ಅದನ್ನು ಸರ್ವಥಾ ಮಾಡಲೇಬಾರದೆಂಬು ದನ್ನೇ ಒಪ್ಪಬೇಕು. ಯಾಕೆಂದರೇ ಶೃತಿಯಿಂದ 'ಆತ್ಮೇತ್ಯೇವೋಪಾಸೀತ' ಈ ಉಪಸಂಹಾರ (ಸಮಾಪ್ತಿ) ಶೃತಿ ಇದೆ ಎಂದರೆ ಅದು ಸರಿಯಲ್ಲ. 'ಅವಿಶೇ ಷಾತ್' ಈ ಗುಣಗಳು ಉಪಸಂಹಾರಕ್ಕೆ ಯೋಗ್ಯವಲ್ಲವೆಂಬ ವಿಶೇಷ ಪ್ರಮಾ ಣವಿಲ್ಲದ ಪ್ರಯುಕ್ತವಾಗಿ. ಸರ್ವಗುಣೋಪಸಂಹಾರಮಾಡಬಾರದೇ ಅಥವಾ ಯಾಕೆಂದರೆ ವಿಶೇಷಪ್ರಮಾಣವಿರುವುದರಿಂದ 'ಆತ್ಮೇತ್ಯೇವ' ಎಂಬ ಏವ ಕಾರವು ಅನ್ಯಯೋಗ ವ್ಯವಭೇದಕವಾಗಿದೆ ಎಂಬ ಅರ್ಥ.

**೮) ಓಂ ಓಂ ನವಾಪ್ರಕರಣಭೇದಾತ್ ಪರೋವರೀಯಸ್ತ್ವಾದಿವತ್ ಓಂ**

'ಪ್ರಕರಣಭೇದಾತ್ ಪರೋವರೀಯೋ' ವೈಶ್ವಾನರ ಮೊದಲಾದ ಪ್ರಕರಣ ಭೇದದಿಂದ ಎಂದು ತಿಳಿಯಬೇಕು. ಹಾಗಿಲ್ಲದಿದ್ದರೆ ಅದು (ಪ್ರಕರಣ) ಆಗದೇ ಇರಲಿ ಎಂಬ ಅರ್ಥ. ಪರೋವರೀಯಸ್ತ್ವಾದಿವತ್ ಯಥಾ ಸ ಏಷಃ ಹೀಗೆ ಹೇಳಿದ ಅತ್ಯಂತ ಅಧಿಕ ಸರ್ವೋತ್ತಮತ್ವರೂಪ ಅತ್ಯುತ್ತಮ ಗುಣಗಳ ಉಪಾಸನೆಯನ್ನು ಮಾಡಬೇಕೇ ವಿನಃ ಸರ್ವಗುಣಗಳನ್ನಲ್ಲ. ಅದೇ ರೀತಿಯಿಂದ ಸರ್ವಗುಣಗಳ ಉಪಸಂಹಾರವನ್ನೂ ಮಾಡಬಾರದು ಅಥವಾ ಮಾಡಬಹುದು.

**೯) ಓಂ ಓಂ ಸಂಜ್ಞಾತಶ್ಚೇತದುಕ್ತಮಸ್ತಿತು ತದಪಿ ಓಂ**

'ಸಂಜ್ಞಾತಃ' ಎಲ್ಲ ವಿದ್ಯೆಗಳಿಗೆ ಭಗವನ್ನಾಮದಿಂದ ಆ ಗುಣಗಳನ್ನು ಹೇಳುವ ರೂಪವಾಗಿ. ಎಲ್ಲ ವಿದ್ಯೆಯಲ್ಲಿ ಹೇಳಿದಂತೆ ಉಪಸಂಹಾರವನ್ನು ಮಾಡಬೇಕೆಂದರೆ 'ತದುಕ್ತಂ' ಅಲ್ಲಿ ಆ ಅಭಿಪ್ರಾಯದಿಂದಲೇ ಇಷ್ಟಾಪಾದನೆವೆಂದೇ ಸಂಹಾರ ಸೂತ್ರದಲ್ಲಿ ಹೇಳಿದೆ ಎಂಬ ಅರ್ಥ. ಇದು ಕೇವಲ ಯುಕ್ತಿಯಿಂದ ಸಿದ್ದವಾದ ದ್ದಲ್ಲ. ಮತ್ತು ತದಪಿ ತಸ್ಮಿನ್ನರ್ಥೇ ನಾಮವಾ ಏತಾ' ಇತ್ಯಾದಿ ಪ್ರಮಾಣವೂ ಇದೆ 'ತು' ಇದ್ದೇ ಇದೆ ಎಂಬ ಅರ್ಥ.

**೧೦) ಓಂ ಓಂ ಪ್ರಾಪ್ತೇಶ್ಚಸಮಂಜಸಂ ಓಂ (ಪ್ರಾಪ್ತ್ಯಧಿಕರಣಂ)**

ಉಪಸಂಹಾರ ಅನುಪಸಂಹಾರಗಳನ್ನು ಅವಶ್ಯ ಮಾಡಲೇಬೇಕು. ಅದು 'ಸಮಂಜಸಂ' ಯೋಗ್ಯವೂ ಆಗಿದೆ ಯಾಕೆಂದರೆ 'ಪ್ರಾಪ್ತೇಃ' ಆಯಾ ಯೋಗ್ಯ ಪುರುಷರ ಯೋಗ್ಯತಾ ಪ್ರಕಾರ ಆ ಎರಡಕ್ಕೂ ವ್ಯವಸ್ಥಿತತ್ವವಿದ್ದು ವಿರೋಧವಿಲ್ಲ ವೆಂದೇ ಅರ್ಥ.

## ೧೧) ಓಂ ಓಂ ಸರ್ವಾಭೇದಾದನ್ಯತ್ರೇ ಮೇ ಓಂ (ಸರ್ವಾಭೇದಾಧಿಕರಣಂ)

'ಇಮೇ' ಈ ಬ್ರಹ್ಮಾದಿಗಳು 'ಅನ್ಯತ್ರ' ಆ ಉಪಸಂಹಾರಾನುಪಸಂಹಾರದಿಂದ ಬೇರೆ ಕಡೆ. ಆ ಫಲದಕಿಂತಲೂ ವಿಲಕ್ಷಣ (ಬೇರೆ) ಫಲಕ್ಕೆ ಪಾತ್ರರಾಗುತ್ತಾರೆ. ಯಾಕೆಂದರೆ ಸರ್ವಾಭೇದಾತ್ ಎಲ್ಲ ವೇದೋಕ್ತ ಗುಣಗಣಗಳ ವಿಭಾಗ ಮಾಡದೇ ಉಪಸಂಹಾರರೂಪದಿಂದ ಉಪಾಸನೆ ಮಾಡಬೇಕೆಂದರ್ಥ.

## ೧೨) ಓಂ ಓಂ ಆನಂದಾದಯಃ ಪ್ರಧಾನಸ್ಯ ಓಂ (ಆನಂದಾಧಿಕರಣಂ)

'ಆನಂದಾಯದಯಃ' ಆನಂದ, ಜ್ಞಾನ, ಸತ್ ಶಬ್ದದಿಂದ ವರ್ಣಿತವಾದ ನಿರ್ದೋಷತ್ವ, ಆತ್ಮಪದದಿಂದ ಪ್ರತಿಪಾದಿತನಾದ ಸ್ವಾಮಿತ್ವ ಎಂಬ ಈ ನಾಲ್ಕು ಗುಣಗಳು 'ಪ್ರಧಾನಸ್ಯ' ಮೋಕ್ಷ ರೂಪ ಅರ್ಥದಕೋಸ್ಕರ ಎಲ್ಲ ಮೋಕ್ಷಯೋಗ್ಯರಿಂದ ಉಪಾಸನೆ ಮಾಡಬೇಕೆಂದರ್ಥ.

## ೧೩) ಓಂ ಓಂ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರೂಪಚಯಾಪಚಯೌಹಿ ಭೇದೇ ಓಂ (ಪ್ರಿಯಶಿರಸ್ತ್ವಾಧಿಕರಣಂ)

ಎಲ್ಲ ಅಧಿಕಾರಿಗಳಿಗೆ 'ಪ್ರಿಯಶಿರಸ್ತ್ವಾದ್ಯಪ್ರಾಪ್ತಿಃ', 'ತಸ್ಯಪ್ರಿಯಮೇವ ಶಿರಃ' ಇವೇ ಮೊದಲಾದ ಶೃತಿಯಿಂದ ಯುಕ್ತವಾದ ಗುಣೋಪಾಸನೆಯ ಯೋಗ್ಯತೆ ಇರುವುದಿಲ್ಲ. ಆದರೆ ಕೆಲವುಗಳಿಗೆ ಮಾತ್ರ ಇದೆ. ಯಾಕೆಂದರೆ ಯಾವ ಕಾರಣ ಅವುಗಳ ಭಿನ್ನತೆಯಲ್ಲಿ 'ಭೇದೇ' ಫಲದಲ್ಲಿಯೂ ತಾರತಮ್ಯವು 'ಹಿ' ಶಬ್ದದಿಂದ 'ನೈವಸರ್ವಂ' ಎಂದು ಪ್ರಸಿದ್ಧ ಸ್ಮೃತಿಯಿದೆ. ಯಾವುದರಿಂದ ಫಲ ಭೇದ ಪಡೆಯಲು 'ಉಪಚಯಾಪಚಯೌ' ಉಪಾಸನೆಯಲ್ಲಿ ಬೆಳೆಯುವ, ಕಮ್ಮಿಯಾಗುವುದು ಇದೆ. ಅಂದರೆ ತಾರತಮ್ಯವೆಂದರ್ಥ. ಅಪೇಕ್ಷಿತವಾದ ಫಲ ಆದರಿಂದಲೇ ದೊರೆಯುವುದೆಂದರ್ಥ.

## ೧೪) ಓಂ ಓಂ ಇತರೇತ್ವರ್ಥಸಾಮಾನ್ಯಾತ್ ಓಂ (ಇತರಾಧಿಕರಣಂ)

'ತು' ಮತ್ತು 'ಅರ್ಥಸಾಮಾನ್ಯತ್' ಅಂದರೆ (ಲ್ಯಬ್‌ಲೋಪನಿಮಿತ್ತಾ ಪಂಚಮಿ) ಉಪಾಸನೆಗೆ ತಮ್ಮ ತಮ್ಮ ಯೋಗ್ಯತಾನುಸಾರ ಪಡೆಯುವ ಫಲಾನುಸಾರ ಇತರೆ ಎಲ್ಲಕ್ಕಿಂತಲೂ ಬೇರೆ ಮಧ್ಯಮಗುಣಗಳಿಂದ ದೇವತೆಗಳಿಂದ ಉಪಸಂಹಾರ ಮಾಡಲೇಬೇಕೆಂದರ್ಥ.

## ೧೫) ಓಂ ಓಂ ಅಧ್ಯಾನಾಯ ಪ್ರಯೋಜನಾಭಾವಾತ್ ಓಂ (ಅಧ್ಯಾನಾಧಿಕರಣಂ)

ವೇದಗಳಲ್ಲಿ ಸರ್ವಗುಣೋಕ್ತಿರೂಪ ಉಪಸಂಹಾರದ 'ಆಧ್ಯಾಯನಾಯ' ಸರಿಯಾದ ಜ್ಞಾನಪೂರ್ವಕಧ್ಯಾನಕ್ಕೆ ಕ್ಲೃಪ್ತವಾಗಿರುತ್ತದೆ. ಯಾಕೆಂದರೆ 'ಪ್ರಯೋಜನಾಭಾವಾತ್' ಗುಣ ಅದರ ಉಪಸಂಹಾರಕ್ಕೆ ಧ್ಯಾನವಿಲ್ಲದೇ ಪ್ರಯೋಜನಕಾರಿಯಾಗಲಾರದೆಂಬ ಅರ್ಥ.

## ೧೬) ಓಂ ಓಂ ಆತ್ಮಶಬ್ದಾತ್ ಓಂ

'ಆತ್ಮೇತ್ಯೇವೋಪಾಸೀತ' ಇಲ್ಲಿ ಆತ್ಮ ಎಂದು ಭಾವ ಪ್ರಧಾನ ಹಾಗೂ ಸಾವಧಾರಣವೂ ಆಗಿದೆ. ಕೇವಲ ಆತ್ಮನನ್ನು ಮಾತ್ರ ಉಪಾಸನೆ ಮಾಡಬೇಕೆಂದು ನಿಯಮನ ಮಾಡುವ ಶಬ್ದವು ಆತ್ಮ ಶಬ್ದವು ಅಂದರೆ 'ಆತ್ಮೇತ್ಯೇವೋಪಾಸೀತ' ಇಲ್ಲಿಯ ಶಬ್ದವು. ಅದರಿಂದಲೇ ಬೇರೆ ಗುಣ ನಿಷೇಧಿಸುವ ಪೂರ್ವಕ ಆತ್ಮತ್ವೇನ ಉಪಾಸನಾ ವಿಧಾಯಕ ಶಬ್ದಕ್ಕೆ ಅನುಪಸಂಹಾರತ್ವವು ಸಿದ್ಧವಾಗುತ್ತದೆ ಎಂಬ ಅರ್ಥ.

## ೧೭) ಓಂ ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ (ಆತ್ಮಗೃಹೀತ್ಯಧಿಕರಣಂ)

'ಯತಃ' ಯಾಕೆಂದರೆ 'ಸತ್ಯಂ ಜ್ಞಾನಂ' ಈ ಮೊದಲಾದ ವಾಕ್ಯಗಳಲ್ಲಿ ಸತ್ಯ ಆದಿಪದಗಳಿಂದ ಬೇರೆಯವರ ಗುಣಗಳಂತೆ 'ಆತ್ಮಗೃಹೀತಿ', 'ಆತ್ಮೈವ'

ಎಂಬ ವಾಕ್ಯದಲ್ಲಿಯೂ ನಾಲ್ಕು ಗುಣಗಳನ್ನು ಸ್ವೀಕರಿಸುವದಾಗಿ ಕೂಡುತ್ತದೆ. ಯಾಕೆಂದರೆ 'ಉತ್ತರಾತ್' 'ಅತ್ರಹ್ಯೇತೇ' ಎಂಬ ಉತ್ತರವಾಕ್ಯಗಳಿಂದಲೂ ಕೂಡ ಅದಕ್ಕೆ ಚತುರ್ಗುಣೋಪಾಸನೆಯೆಂಬ ವಚನಕ್ಕೆ ಆ ವಾಕ್ಯದಿದಂ ವಿರೋಧ ಬರುವುದಿಲ್ಲವೆಂಬ ಅರ್ಥ.

## ೧೮) ಓಂ ಓಂ ಅನ್ವಯಾದಿತಿಚೇತ್ಸ್ಯಾದವಧಾರಣಾತ್ ಓಂ (ಅನ್ವಯಾಧಿಕರಣಂ)

ಹಾಗೂ ಆತ್ಮಾ ಎಂಬ ವಾಕ್ಯಕ್ಕೆ ಅನುಪಸಂಹಾರಿ ಎಂದು ಒಪ್ಪುವುದು ಆಯುಕ್ತವೇ. ಯಾಕೆಂದರೇ 'ಅನ್ವಯಾತ್' ಆತ್ಮ ಶಬ್ದದಲ್ಲಿಯೇ ಎಲ್ಲ ಗುಣಗಳೂ ಸಮನ್ವಯವಾಗುವುದರಿಂದ ಆತ್ಮ ಶಬ್ದವೇ ಅದರ ಬೋಧಕವಾಗಿದೆ. 'ಇತಿಚೇತ್ ಸ್ಯಾತ್' ಬೇರೆಯವರಿಂದ ಹೇಳಿದ್ದು ಅದು ಹಾಗೇ ಆಗಲಿ. ಆದರೂ ದೋಷವಿಲ್ಲ. ಯಾಕೆಂದರೆ 'ಅವಧಾರಣಾತ್' ಆತ್ಮ ಮಾತ್ರವೆಂದು ನಿಶ್ಚಿತವಾಗಿರುವುದರಿಂದ ಇದು ನಿರ್ಣೀತವಾಗಿಯೇ ಇದೆ. ಆತ್ಮ ಶಬ್ದವಾದರೋ ಬ್ರಹ್ಮಾದಿಗಳ ನಿಮಿತ್ತಕವಾಗಿಯೇ ಎಲ್ಲ ಗುಣಗಳೆಂದು ಹೇಳುತ್ತದೆ ವಿನಃ ಬೇರೆ ಯಾರನ್ನು ವರ್ಣಿಸುವುದಿಲ್ಲವೆಂಬ ನಿರ್ಣಯವೇ ಕೂಡುತ್ತದೆ ಎಂಬ ಅರ್ಥ.

## ೧೯) ಓಂ ಓಂ ಕಾರ್ಯಾಖ್ಯಾನಾದಪೂರ್ವಂ ಓಂ (ಕಾರ್ಯಾಖಾನಾಧಿಕರಣಂ)

'ಕಾರ್ಯಾಖ್ಯಾನಾತ್' ಧ್ಯಾನವೆಂಬ ಕಾರ್ಯಕ್ಕೆ ಮುಖ್ಯವಾದ ಮೋಕ್ಷವು ಅಲೌಕಿಕವಾಗಿದ್ದು 'ಅಪೂರ್ವಂ' ಅಲೌಕಿಕ ಗುಣಯುಕ್ತವಾದದ್ದು ಆ ರೀತಿಯಿಂದಲೇ ಧ್ಯಾನ ಮಾಡಬೇಕೆಂದು ಅರ್ಥ.

## ೨೦) ಓಂ ಓಂ ಸಮಾನ ಏವಂ ಚಾಭೇದಾತ್ ಓಂ (ಸಮಾನಾಧಿಕರಣಂ)

ಏವಂ ಚ ಹೀಗಾದರೂ ಕೂಡ ಬ್ರಹ್ಮನ ಗುಣಗಳು ಲೋಕವಿಲಕ್ಷಣವಾಗಿದ್ದರೂ ಕೂಡ ವೇದವಾಕ್ಯಕ್ಕೆ ಸಮಾನ ಯೋಗ್ಯಗುಣವಿಷಯಾನುಸಾರವಾಗಿಯೇ ಉಪಸಂಹಾರ ಮಾಡಬೇಕೇ ವಿನಃ ಆಯೋಗ್ಯಕರ್ಮಗಳಿಂದ ಸರ್ವಥಾ ಸಮರ್ಪಣೆ ಇಲ್ಲ. ಆ ಗುಣಗಳಲ್ಲಿ ಅಭೇದ ವಿಚಾರದಿಂದಲೇ ತ್ರಿವಿಕ್ರಮರೂಪಾದಿ ಕೆಲವು ಅಲ್ಪಸಮಯಿ ಕ್ರಿಯೆಗಳಿಗೂ ಅದಕ್ಕೆ ಸಮಾನ ನಿತ್ಯಮಹಾಪರಾಕ್ರಮಾದಿಗಳನ್ನು ಸೇರಿಸಿ ಉಪಸಂಹಾರವಾಗಬೇಕಂದರ್ಥ.

## ೨೧) ಓಂ ಓಂ ಸಂಬಂಧಾದೇವಮನ್ಯತ್ರಾಪಿ ಓಂ

ಚತುರ್ಮುಖಬ್ರಹ್ಮರಿಗೆ ಮಾತ್ರ 'ಅನ್ಯತ್ರಾಪಿ ತ್ರಿವಿಕ್ರಮತ್ವ' ಮೊದಲಾದ ಕ್ರಿಯೆ. ಅದರ ವಿಶೇಷತೆಯಲ್ಲಿಯೂ ಉಪಸಂಹಾರವು ಯೋಗ್ಯವಾಗುತ್ತದೆ. ಅದರಿಂದ ಸಮಸ್ತದೋಷನಾಶವಾಗುತ್ತದೆ. ಯಾಕೆಂದರೆ 'ಸಂಬಂಧಾತ್' ಬ್ರಹ್ಮನಿಂದ ಮಾಡಿದ ಕ್ರಿಯೆಗಳಿಗೂ ಬ್ರಹ್ಮನಿಗೂ ಅಭೇದ ಸಂಬಂಧವಿದ್ದು ನಿತ್ಯವಾಗಿದೆ ಎಂಬ ಅರ್ಥ.

## ೨೨) ಓಂ ಓಂ ನವಾವಿಶೇಷಾತ್ ಓಂ (ನವಾಧಿಕರಣಂ)

ಆತ್ಮ ಎಂಬ ವಾಕ್ಯದಲ್ಲಿಯ ಆತ್ಮ ಶಬ್ದದಿಂದ ಎಲ್ಲ ಗುಣಗ್ರಹಣವಾಗುತ್ತದೆ ಎಂದು ಒಪ್ಪುತ್ತಾರೆ. ಚತುರ್ಮುಖರಿಗೆ ಯಾಕೆಂದರೆ 'ವಿಶೇಷಾತ್' ಅಧಿಕಾರಿಯ ಯೋಗ್ಯತೆಯ ವೇಶಿಷ್ಟ್ಯತೆಯಿಂದ ಆ ಬ್ರಹ್ಮನಿಗೆ ಅವರಿಗೆ ಯೋಗ್ಯವಾದ ಗುಣವರ್ಣನೆ ಮಾಡುವ ಯೋಗ್ಯತೆಯಿಂದ ಎಂಬ ಅರ್ಥ.

## ೨೩) ಓಂ ಓಂ ದರ್ಶಯತಿ ಚ ಓಂ

'ಸರ್ವಾನ್ ಗುಣಾನ್' ಎಂಬ ಶ್ರುತಿಯು ತಾವು ಹೇಳಿದ ಅರ್ಥವನ್ನು ವರ್ಣನೆ ಮಾಡುತ್ತವೆ ಎಂಬ ಅರ್ಥ.

**೨೪) ಓಂ ಓಂ ಸಂಭೃತಿದ್ಯುವ್ಯಾಪ್ತ್ಯಪಿಚಾತಃ ಓಂ (ಸಂಭೃತ್ಯಧಿಕರಣಂ)**

ಮತ್ತು ಎಲ್ಲವನ್ನೂ ಒಟ್ಟು ಅಧ್ಯಾಹಾರ ಮಾಡಿದರೆ 'ಸಂಭೃತಿದ್ಯುವ್ಯಾಪ್ತೀ' ಸರಿಯಾದ ರೀತಿ ರಕ್ಷಣೆಮಾಡಿ ಪ್ರಕಾಶರೂಪ ವ್ಯಾಪ್ತಿಯು. ಇದು (ಎಲ್ಲ) ಸರ್ವೋಪಾಸ್ಯರಿಗೆ ಇಲ್ಲ. ಕೇವಲ ದೇವತೆಗಳ ಉಪಾಸನೆಯಲ್ಲಿ ಮಾತ್ರ ಅನ್ಯತ್ರ ಇಲ್ಲ. ಯಾಕೆಂದರೆ 'ಅತಃ' ಅದಕ್ಕೆ ಅಧಿಕಾರಿಗಳ ಯೋಗ್ಯತಾನುಸಾರವಾಗಿ ವಿಶೇಷತೆ (ವ್ಯಕ್ತವಾಗುತ್ತದೆ) ಕಂಡುಬರುತ್ತದೆ ಎಂಬ ಅರ್ಥ.

**೨೫) ಓಂ ಓಂ ಪುರುಷ ವಿದ್ಯಾಯಾಮಪಿಚೇತರೇಷಾಮನಾಮ್ನಾನಾತ್ ಓಂ (ಪುರುಷಾಧಿಕರಣಂ)**

'ಪುರುಷ ವಿದ್ಯಾಯಾಮಪಿ' ಎಲ್ಲದರಲ್ಲಿ ಉತ್ತಮವಾದದ್ದೆಂದು ಪ್ರತಿಜ್ಞೆ ಮಾಡಿ ಹೇಳಿದ್ದರೂ ಕೂಡ ಪುರುಷ ಸೂಕ್ತವೆಂಬ (ವಿದ್ಯೆ) ವೇದದಲ್ಲಿಯೂ ಕೆಲ ವುಗಳನ್ನು ಮಾತ್ರ ಹೇಳಿರುವುದರಿಂದ 'ಇತರೇಷಾಂ' ಅಲ್ಲಿ ಹೇಳಿದ್ದರಿಂದ ಬೇರೆ ಯಾದ ಗುಣಗಳ ವರ್ಣನೆ ಹೇಳದಿರುವುದರಿಂದ ಅದಕ್ಕೆ ಅವಶ್ಯವಾಗಿ ಸರ್ವವಿ ದ್ಯೆಯ ಪ್ರತಿಪಾದಿತವಾದ ಗುಣಗಳಿಂದ ಉಪಸಂಹಾರವನ್ನು ಮಾಡಬೇಕೆಂಬ ಅರ್ಥ.

**೨೬) ಓಂ ಓಂ ವೇಧಾದ್ಯರ್ಥಭೇದಾತ್ ಓಂ (ವೇಧಾಧಿಕರಣಂ)**

ಬ್ರಹ್ಮದೇವರಿಂದ ಉಪಾಸನೆ ಮಾಡುವ ಫಲಕ್ಕೆ ಯತಿಗಳಿಂದ ಹಿಂಸಾದಿ ಗಳನ್ನು ಮಾಡದಿರುವುದರಿಂದ ಲಭ್ಯ ಫಲದಲ್ಲಿಯೂ ಅತ್ಯಂತ (ವ್ಯತ್ಯಾಸ) ವೈಲಕ್ಷಣ್ಯವಿದ್ದೆ. 'ವೇದಾದಿ ಭಿಂದಿ', 'ವಿದ್ಧಿ ಶೃಣೋಹಿ' ಈ ರೀತಿ ಹೇಳಿದ ವಿಧಿಯು ಎಲ್ಲರಿಗೂ ಉಪಾಸನೆಗೆ ಯೋಗ್ಯವಾದದ್ದಲ್ಲವೆಂಬ ಅರ್ಥ.

**೨೭) ಓಂ ಓಂ ಹಾನೌತೂಪಾಯನಶಬ್ದಶೇಷತ್ವಾತ್ ಕುಶಾಚ್ಛಂದಸ್ತು ತ್ಯುಪಗಾನವತ್ತದುಕ್ತಂ ಓಂ (ಹಾನ್ಯಧಿಕರಣಂ)**

'ತು' ನಿಶ್ಚಿತವಾಗಿಯೂ ಯಾಕೆಂದರೆ 'ಹಾನೌ' ಬಂಧನಾಶರೂಪಮುಕ್ತಿ ಯಲ್ಲಿ ಅದನ್ನೇ 'ಏತತ್ಸಾಯ' ಎಂಬ ಶೃತಿಯಲ್ಲಿ ಮುಕ್ತರಿಗೋಸ್ಕರ ಉಪಾಸನೆ ಮಾಡುವುದನ್ನು ಹೇಳಲಾಗಿದೆ. ಅದಕ್ಕೆ ಮೋಕ್ಷದಲ್ಲಿಯೂ ಅವರಿಗೆ ಉಪಾಸನೆ ಇದ್ದೇ ಇದೆ. ಅದೂ ಕೂಡ ಕಡ್ಡಾಯತೆ ಇಲ್ಲ. ಹೇಗೆಂದರೆ 'ಕುಶಾಛಂದಸ್ತುತ್ಯು ಪಗಾನವತ್' ಆ ರೀತಿ ಅಲ್ಲ. ಹೇಗೆ ನಿತ್ಯಬ್ರಹ್ಮ ಯಜ್ಞನಿಷ್ಠಬ್ರಾಹ್ಮಣರಿಗೆ ನಿಯಮಿ ತವಾಗಿ ಸಂಧ್ಯಾದಿ ಕರ್ಮ ಮಾಡಿದ ನಂತರವೂ ಕೂಡ ಸ್ವೇಚ್ಛಾಪ್ರಕಾರ ಸ್ತುತಿ. ಅದಕ್ಕೆ ಅನುಸಾರಿ ಸ್ತೋತ್ರ ಇದ್ದಂತೆ ಎರಡೂ ರೀತಿ ಯಾವ ರೀತಿ ಹೆಸರು ಸ್ವೀಕರಿ ಸುವದು ಅಧ್ಯಯನ ಮಾಡುವದೋ ಹಾಗೆಯೇ ಸ್ವೇಚ್ಛೆಯಿಂದ ವಿನಃ ವಿಧಿಯಲ್ಲ. ಯಾಕೆಂದರೆ 'ಉಪಾಯನ ಶಬ್ದ ಶೇಷತ್ವಾತ್' ಮೋಕ್ಷ(ರೂಪ) ಪ್ರಾಪಕ ಉಪಾ ಸನೆ ಬಿಹಿತವಾಗಿದೆ. ಆದರೂ ಅದರ ಪ್ರಾಪ್ತಿಯಾದವರಿಗೆ ಆ ಮೋಕ್ಷಶೇಷತ್ವ ವಿರುತ್ತದೆ ಹಾಗೆಯೇ ಎಂದು ಅರ್ಥ. ಮತ್ತು ಮೋಕ್ಷಾರ್ಥಿಗಳಿಗೆ ಉಪಾಸನಾ ಹೇಗೆ ವಿಧಿಯೋ ಹಾಗೆಯೇ ಮೋಕ್ಷದಲ್ಲಿಯೂ ಕೂಡ ಆ ಉಪಾಸನೆ ಮಾಡು ತ್ತಲೇ ಇರುತ್ತಾರೆಂಬ ಅರ್ಥ.

**೨೮) ಓಂ ಓಂ ಸಾಂಪರಾಯೇತರ್ತವ್ಯಾಭ್ಯಾವಾತ್ ತಥಾಹ್ಯನ್ನೇ ಓಂ**

'ಸಾಂಪರಾಯೇ' ಮೋಕ್ಷದಲ್ಲಿ ಉಪಾಸನೆ ಸ್ವೇಚ್ಛಾಪ್ರಕಾರವಾಗಿಯೇ ಇದೆ. ಅನಿಷ್ಟನಿವೃತ್ತಿಗೋಸ್ಕರವಲ್ಲ. ಯಾಕೆಂದರೆ 'ತರ್ತವ್ಯಾಭಾವಾತ್' ಮುಕ್ತರಿಂದ ಬಿಡುವ ಅನಿಷ್ಠಗಳೇ ಇಲ್ಲದ್ದರಿಂದ ಅದಕ್ಕೆ ಅದಾದರೂ ಯಾಕೆಂದರೆ 'ಹಿ' (ನಿಶ್ಚಿತ) ಯಾಕೋ 'ಅನ್ಯ' ಬೇರೆ ಶಾಖೆಯವರು 'ತಥಾ' ಹಾಗೆಯೇ 'ತೀರ್ಣೋಹಿ' ಎಂಬ ಶೃತಿಯನ್ನು ಪಠಿಸುವರು. ಅದಕ್ಕೋಸ್ಕರ ಎಂಬರ್ಥ.

**೧೯) ಓಂ ಓಂ ಛಂದತ ಉಭಯಾವಿರೋಧಾತ್ (ಛಂದಾಧಿಕರಣಂ)**

ಮುಕ್ತರು ಸ್ವೇಚ್ಛಾನಿಯತರಾಗಿಯೇ ಕಾರ್ಯ ಮಾಡುತ್ತಾರೆ ವಿನಃ ವಿಧಿಯಿಂದಲ್ಲ. ಯಾಕೆಂದರೆ 'ಉಭಯಾವಿರೋಧಾತ್' ಕಾರ್ಯ ಮಾಡುವ ಮಾಡದೇ ಇರುವುದಕ್ಕೆ ವಿಧಿಯಾಗಲೀ ಬಂಧವಾಗಲೀ ಅಥವಾ ಬಿಟ್ಟಿದ್ದಕ್ಕೆ ದೋಷ(ಪಾಪ)ವಾಗಲೀ ಸರ್ವಥಾ ಇರುವುದಿಲ್ಲವೆಂಬ ಅರ್ಥ.

**೨೦) ಓಂ ಓಂ ಗತೇರರ್ಥವತ್ವಮುಭಯಥಾನ್ಯಥಾಹಿವಿರೋಧಃ ಓಂ**

'ಹಿ' ಆ ಕಾರಣದಿಂದ 'ಉಭಯಥಾ ಹಿ' ಬಂಧ ಪ್ರತ್ಯಯವಿಲ್ಲದಿರುವುದರಿಂದಲೇ, 'ಗತೇಃ' ಮುಕ್ತಿಗೆ ಪುರುಷಾರ್ಥರೂಪವೆನ್ನುತ್ತಾರೆ. 'ಅನ್ಯಥಾ' ಮುಕ್ತಿಯಲ್ಲಿ ಬಂಧ ವಿಘ್ನಗಳಿಲ್ಲದ್ದರಿಂದಲೇ 'ವಿರೋಧಃ' ಮುಕ್ತಿಯು ಸಂಸಾರ ಸಮಾನವಾಗಿ ಪುರುಷಾರ್ಥತ್ವ ಇಲ್ಲದೇ ಇರಲೆಂಬ ವಿರೋಧ ಬರಲಿ ಎಂಬ ಅರ್ಥ.

**೨೧) ಓಂ ಓಂ ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್ ಓಂ**

ಯಾವರೀತಿ ಲೋಕದಲ್ಲಿ ಯಾಗಾಂಗ ವಿಷ್ಣುಕ್ರಮಣಕ್ಕೆ ಕೆಲಸ ಮಾಡಬೇಕೆಂಬ ನಿಯಮವೋ ಹಾಗೆ ಯಾಗ ಮುಗಿದ ಮೇಲೆ ಆಯಾವ ಕ್ರಿಯೆ ಇರುವುದಿಲ್ಲವೋ ಹಾಗೆಯೇ ಪೂರ್ತಿ ಆದ ಮೇಲೂ ಕೆಲವು ಕ್ರಿಯಾ ಇರುವಂತೆ (ಅದು ಒಮ್ಮೊಮ್ಮೆ ಮಾತ್ರ) ಹಾಗೆ ಮುಕ್ತರಿಗೂ ಯಾವಾಗಲೋ ಕಾರ್ಯ ಮಾಡಬಹುದು ಮಾಡದಿರಬಹುದು. ಆದರೂ ಯೋಗ್ಯವೇ. ಯಾಕೆ ಹೀಗೆಂದರೆ, 'ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇಃ' ಆ ಮೋಕ್ಷಲಕ್ಷಣವೆಂದರೆ ಪರಂಪರಾಗತವಾದ ಕರ್ಮಸಾಧ್ಯವಾದ ಅರ್ಥವೆಂದರೆ ಮೋಕ್ಷ. ಅಂತಹ ಮೋಕ್ಷ ಲಭಿಸಿದ ನಿಮಿತ್ತ ಎಂಬ ಅರ್ಥ.

## ೩೨) ಓಂ ಓಂ ಅನಿಯಮಃ ಸರ್ವೇಷಾಮವಿರೋಧಾಚ್ಛಬ್ದಾನುಮಾನಾಭ್ಯಾ ಓಂ (ಅನಿಯಮಾಧಿಕರಣಂ)

'ಅನಿಯಮಃ' ಅಪರೋಕ್ಷಜ್ಞಾನಿಗಳಲ್ಲಿ ಕೆಲವರಿಗೆ ಮೋಕ್ಷ, ಕೆಲವರಿಗೆ ಇಲ್ಲವೆಂಬ ವ್ಯವಸ್ಥೆ ಇದ್ದಂತೆ ತೋರುತ್ತದೆ. ಯಾಕೆಂದರೆ ಎಲ್ಲರಿಗೂ ಕೂಡ 'ಸರ್ವೇಷಾಮಪಿ', 'ಅವಿರೋಧಾತ್' ನಿಷೇಧವಿಲ್ಲದ್ದರಿಂದ ಹಾಗೂ 'ಶಬ್ದಾನುಮಾನಾಭ್ಯಾಂ', 'ನ ಕಶ್ಚಿತ್' ಎಂಬ ಶಬ್ದದಿಂದಲೂ ಅದಕ್ಕೆ ಆಧಾರಭೂತ ಅನುಮಾನಗಳಿಂದಲೂ ಮೋಕ್ಷದ ನಿಯಮವಿಲ್ಲವೆಂಬ ಅರ್ಥ.

## ೩೩) ಓಂ ಓಂ ಯಾವದಧಿಕಾರಸ್ಥಿತಿರಾಧಿಕಾರಿಕಾಣಾಂ ಓಂ (ಯಾವದಧಿಕರಣಂ)

'ಆಧಿಕಾರಿಕಾಣಾಂ' ಅವರವರ ಯೋಗ್ಯತಾನುಸಾರವಾಗಿ ಉಪಾಸನೆ ಮಾಡಿದ ಬ್ರಹ್ಮಾದಿಗಳಿಗೆ ತಮ್ಮ ತಮ್ಮ ಅಧಿಕಾರ ಪ್ರಕಾರವಾಗಿಯೇ ಮುಕ್ತಿಯಲ್ಲಿ ಅವಾಸವು. ಅವಸ್ಥಿತಿಃ ಅವರ ಉಪಾಸನೆಗೆ ಯೋಗ್ಯವಾಗಿ ತಾರತಮ್ಯಾನುಸಾರವಾಗಿಯೇ ಮುಕ್ತಿಯಲ್ಲಿಯೂ ಅವರಿಗೆ ಫಲ ಲಭಿಸುತ್ತದೆ ಎಂಬ ಅರ್ಥ.

## ೩೪) ಓಂ ಓಂ ಅಕ್ಷರಧಿಯಾಂತ್ವವಿರೋಧಃ ಸಾಮಾನ್ಯ ತದ್ಭಾವಾಭ್ಯಾಮೌಪಸದವತ್ತದುಕ್ತಂ ಓಂ

ಮತ್ತು 'ಅಕ್ಷರಧಿಯಾಂತು' ಬ್ರಹ್ಮಜ್ಞಾನಿಗಳಿಗೂ ಕೂಡ ಫಲದಲ್ಲಿ ವ್ಯತ್ಯಾಸವೆಂದರೆ ವಿರೋಧಬಾರದು 'ಅವಿರೋಧಃ' ಯಾಕೆಂದರೆ ಬ್ರಹ್ಮಜ್ಞಾನಿಗಳಾದ ಪ್ರಯುಕ್ತ ಮತ್ತು 'ಸಾಮಾನ್ಯ ತದ್ಭಾವಾಭ್ಯಾಂ' ಎಲ್ಲರಲ್ಲಿಯೂ ದೋಷವಿಲ್ಲದೇ ಉತ್ತಮರಿಂದ ಅಧಮಾಧಿಕಾರಿಗಳು ಉಪಕೃತರಾಗುವುದರಿಂದ ವಿರೋಧವಿಲ್ಲ. ಮತ್ತೂ ಹೇಗೆಂದರೆ 'ಔಷಪದವತ್' ಒಳ್ಳೆಯ ಶಿಷ್ಯನ ಹಾಗೆ ಮತ್ತು ಅಸಮಾನ

ತೆಯಿಂದ ವಿರೋಧವಿಲ್ಲವೆಂಬುದಕ್ಕೆ 'ನಾನಾವಿಧಾ' ಇತ್ಯಾದಿ ತುರಶ್ರುತಿಯಲ್ಲಿ ಹೇಳಿದ ಪ್ರಯುಕ್ತ ಅಲ್ಲಿ ಅಸಮಾನತೆ ಇದ್ದರೂ ವಿರೋಧವಿಲ್ಲವೆಂಬರ್ಥ.

**೩೫) ಓಂ ಓಂ ಇಯದಾಮನನಾತ್ ಓಂ (ಇಯದಾಮನನಾಧಿಕ ಣಂ)**

ಮೋಕ್ಷಾಧಿಕಾರಿಗಳಲ್ಲಿ ತಾರತಮ್ಯವು 'ಇಯದೇವ' ಮುಖ್ಯಪ್ರಾಣರೇ ಅಧಿಕರು ಅಲ್ಲಿಯವರೆಗೆ. ಯಾಕೆಂದರೆ 'ಆಮನನಾತ್', 'ಪ್ರಾಣೋವಾವ' ಇತ್ಯಾದಿ ಶೃತಿಗಳಿಂದ ಎಂಬ ಅರ್ಥ.

**೩೬) ಓಂ ಓಂ ಅಂತರಾಭೂತಗ್ರಾಮವದಿತಿಚೇತ್ತದುಕ್ತಂ ಓಂ**

'ಭೂತಗ್ರಾಮವತ್' ಯಾವರೀತಿ ನಾಮದೇವಮಾರಭ್ಯ ಪ್ರಾಣದೇವರ ಪರ್ಯಂತ ಒಬ್ಬರಕಿಂತಲೂ ಒಬ್ಬರು ಶ್ರೇಷ್ಠರು ಎಂದು ತೋರುವರೋ ಹಾಗೆಯೇ 'ಅಂತರಾ' ಈಶಲಕ್ಷ್ಮೀವ್ಯತಿರಿಕ್ತ ಮುಖ್ಯ ಪ್ರಾಣರಕಿಂತಲೂ ಉತ್ತಮರಿರುವರೇ ನೆಂದರೆ ಇಲ್ಲ. ಯಾಕೆಂದರೆ 'ನ ಹಿ ಸರ್ವೇಭ್ಯೋ' ಎಂಬ ಪ್ರಮಾಣವಿದ್ದ ಕಾರಣ ಪ್ರಾಣದೇವರಕಿಂತಲೂ ಉತ್ತಮರಿ ಇಲ್ಲವೇ ಇಲ್ಲ ಎಂಬ ಅರ್ಥ.

**೩೭) ಓಂ ಓಂ ಅನ್ಯಥಾಭೇದಾನುಪಪತ್ತಿರಿತಿಚೇನ್ನೋಪದೇಶವತ್ ಓಂ**

ಪ್ರಾಣದೇವರಕಿಂತಲೂ ಉತ್ತಮರಿಲ್ಲವೆಂದರೆ 'ಅನ್ಯಥಾ' ಪ್ರಾಣದೇವ ರಿಗೂ ಪರಮಾತ್ಮನಿಗೂ ಭೇದ ಕೂಡುವುದಿಲ್ಲವೆಂದರೆ 'ಭೇದಾನುಪಪತ್ತಿರಿತಿಚೇನ್ನ' ವೇದದಲ್ಲಿ ಹೇಳಿದಂತೆ ಒಪ್ಪಬೇಕಾಗಿರುವುದರಿಂದ ಉಪದೇಶವತ್ ಪ್ರಾಣನ ಕಿಂತಲೂ ಈಶ್ವರನಿಗೆ ಉತ್ತಮತ್ವವನ್ನು ಅಂಗೀಕರಿಸಬೇಕು ಅದರಂತೆ ದೋಷವೂ ಬರುವುದಿಲ್ಲವೆಂಬ ಅರ್ಥ

## ೩೮) ಓಂ ಓಂ ವ್ಯತಿಹಾರೋ ವಿಶಿಷಂತಿ ಹೀತರವತ್ ಓಂ (ವ್ಯತಿಹಾರಾಧಿಕರಣಂ)

'ವ್ಯತಿಹಾರಃ' ಪ್ರಾಣವರ್ಣನೆಯ ನಂತರ ವಿಷ್ಣುವಿನ ವರ್ಣನಾಪ್ರಕರಣ ಬರುತ್ತಿದ್ದು ಪರಸ್ಪರ ಪ್ರಶ್ನೆ ಅದರ ಪರಿಹಾರ ಇತ್ಯಾದಿಗಳು ಆಗಿದ್ದು ಅದೆಲ್ಲವನ್ನೂ ಇಲ್ಲಿ ಅಧ್ಯಾಹಾರ ಮಾಡಿಕೊಳ್ಳುವುದು. 'ಹಿ' ಯಾಕೆಂದರೆ 'ಇತರವತ್' ನಾಮಾದಿಗಳಿಂದ ವಾಗಾದಿಗಳಂತೆ ಪ್ರಾಣನಿಂದ ಆರಭ್ಯ ಸತ್ಯಭೂತ ವಿಷ್ಣುವನ್ನು ವರ್ಣನೆ ಮಾಡುವ ವೇದವಾಕ್ಯಗಳು 'ಏಷ ತು ವಾ' ಇಲ್ಲಿ 'ತು' ಶಬ್ದದಿಂದ ವಿಶಿಷಂತಿಃ ನಿವಾರಣೆ ಮಾಡುತ್ತದೆ ಅದಕ್ಕೆ ವಿಷ್ಣು ಉತ್ತಮನೆಂದರ್ಥ.

## ೬೯) ಓಂ ಓಂ ಸೈವಹಿಸತ್ಯಾದಯಃ ಓಂ (ಸತ್ಯಾಧಿಕರಣಂ)

'ಹಿ' ಯಾಕೆಂದರೆ 'ಸತ್ಯಾದಯಃ' ಸತ್ಯಭೂತ ಪರಮಾತ್ಮನಾದಿಯಾಗಿ ಮೋಕ್ಷಯೋಗ್ಯಪರ್ಯಂತ (ಎಲ್ಲ ಪದಾರ್ಥಗಳೂ) 'ಸೈವ' ಆ ಈಶ್ವರರೂಪವರ ಬ್ರಹ್ಮನಿಂದಲೇ. ಅದಕ್ಕೆ ಪ್ರಾಣದೇವರಕಿಂತಲೂ ಅಧಿಕರಾದವರು ಬಹಳ ಜನರಿಲ್ಲ. ಆದರೆ ಶ್ರೀದೇವಿ ಅವಳ ಈಶನಾದ ನಾರಾಯಣನೇ ಎಂಬ ಅರ್ಥ.

## ೪೦) ಓಂ ಓಂ ಕಾಮಾದಿತರತ್ರತ್ರಚಾಯತನಾದಿಭ್ಯಃ ಓಂ (ಕಾಮಾಧಿಕರಣಂ)

ಶ್ರೀಲಕ್ಷ್ಮೀದೇವಿಯು 'ತತ್ರ' ದೇವರ ಸಮೀಪದಲ್ಲಿದ್ದರೂ ಕೂಡ 'ಇತರತ್ರ' ಭೂಮಿ ಮೊದಲಾದವುಗಳಲ್ಲಿ 'ಕಾಮಾತ್' ದೇವರ ಇಚ್ಛಾಪ್ರಕಾರವಾಗಿಯೇ ಅವತಾರಗಳನ್ನು ಸ್ವೀಕರಿಸುತ್ತಾಳೆ. ಯಾಕೆಂದರೆ 'ಆಯತನಾದಿಭ್ಯಃ' ಸರ್ವಗತತ್ವ ಪ್ರತಿಪಾದಕ ಎಲ್ಲ (ಮನೆ) ಕಡೆಯಲ್ಲಿ ಇರುವರೆಂಬ ಶೃತಿಗಳಿಂದ ವರ್ಣಿತಳಾದ್ದರಿಂದ ಎಂಬ ಅರ್ಥ.

**೪೧) ಓಂ ಓಂ ಆದರಾದಲೋಪಃ ಓಂ**

'ಆದರಾತ್' ನಾರಾಯಣನಲ್ಲಿ ಹೋಲಿಕೆ ಪ್ರತಿಬಂಧಕ ರಹಿತ ಶಾಶ್ವತವಾಗಿ ಭಕ್ತಿಯನ್ನು ಅತಿಶಯವಾಗಿ ಮಾಡುವುದರಿಂದ ಲಕ್ಷ್ಮೀದೇವಿಯರಿಗೆ ದೇವರ ಉಪಾಸನೆ ಮಾಡುವುದಕ್ಕೆ ವ್ಯತ್ಯಯ ಇಲ್ಲವೇ ಇಲ್ಲವೆಂಬ ಅರ್ಥ.

**೪೨) ಓಂ ಓಂ ಉಪಸ್ಥಿತೇಸ್ತದ್ವಚನಾತ್ ಓಂ**

ಶ್ರೀದೇವಿಗೆ ನಿತ್ಯಮುಕ್ತತ್ವವು ಯೋಗ್ಯವೇ. ಯಾಕೆಂದರೆ 'ಉಪಸ್ಥಿತೇಃ' ಯಾವಾಗಲೂ ಭಗವಂತನ ಸಮೀಪದಲ್ಲಿ ಇದ್ದದರಿಂದಲೇ 'ತದ್ವಚನಾತ್', 'ದ್ವಾವೇತೌ' 'ಅನಾದಿನಿತ್ಯೌ' ಎಂಬ ನಿತ್ಯ ಸಂಬಂಧಿತ್ವರೂಪ ವೇದವಚನಗಳಿಂದಲೇ ತಿಳಿಯಲು ಸಾಧ್ಯವೆಂಬ ಅರ್ಥ.

**೪೩) ಓಂ ಓಂ ತನ್ನಿರ್ಧಾರಣಾರ್ಥನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬಂಧಃ ಫಲಂ ಓಂ (ನಿರ್ಧಾರಣಾಧಿಕರಣಂ)**

ಯಾಕೆಂದರೆ 'ತನ್ನಿರ್ಧಾರಣಾರ್ಥನಿಯಮಃ' ವಾದಾರ್ಥನಿಶ್ಚಯ ಹಾಗೂ ವೇದದಲ್ಲಿ ಹೇಳಿದಂತೆ ನಿಯಮಪಾಲನೆ ಇತ್ಯಾದಿ ರೂಪವಾದದ್ದು ಮತ್ತು ಅದಕ್ಕೆ ಶ್ರವಣ-ಮನನ-ಧ್ಯಾನ ರೂಪ ಫಲವು 'ತದ್ದೃಷ್ಟೇಃ' ಬ್ರಹ್ಮದರ್ಶನದಿಂದ 'ಪೃಥಗೇವ' ಬೇರೆಯಾದದ್ದೇ ಫಲವು. ಅದಕ್ಕೆ ಶ್ರವಣಾದಿಗಳಿಂದ ಬ್ರಹ್ಮಸಾಕ್ಷಾತ್ಕಾರವಾಗುವುದಿಲ್ಲ. ಆದರೂ ಶ್ರವಣ-ಮನನಾದಿಗಳಿಂದ ವ್ಯರ್ಥತೆ ಬರುವುದಿಲ್ಲ. 'ಹಿ' ಯಾಕೆಂದರೆ 'ಅಪ್ರತಿಬಂಧಃ' ಅದಕ್ಕೆ ಬ್ರಹ್ಮದರ್ಶನಕ್ಕೆ ಬರುವ ಪ್ರತಿಬಂಧಕ ದೂರಾಗುವುದು. ಅದರ ನಿಶ್ಚಯ ಆ ನಿಯಮದಿಂದಲೇ ದೊರೆಯುವ ಫಲ ಆದಾಗಿರುತ್ತದೆ. ಅದಕ್ಕೆ ಧ್ಯಾನಕ್ಕೆ ಸಾಧ್ಯವಾದರೂ ಬ್ರಹ್ಮದೃಷ್ಟಿ ಪ್ರತಿಬಂಧಕನಿವೃತ್ತಿದ್ವಾರಾ ಶ್ರವಣಾದಿಗಳು ಸಾಧ್ಯವಾಗುತ್ತದೆ. ಅದಕ್ಕೋಸ್ಕರವಾಗಿಯೇ ಶ್ರವಣಾದಿಗಳು ಸಾಧ್ಯವಾಗುತ್ತದೆ. ಅದಕ್ಕೋಸ್ಕರವಾಗಿಯೇ ಶ್ರವಾಣಾದಿಗಳನ್ನು

ಅವಶ್ಯ ಮಾಡಲೇಬೇಕೆಂದರ್ಥ. 'ಹಿ' ಶಬ್ದದಿಂದ 'ಆತ್ಮಾವಾ' ಅರೇ ಇತ್ಯಾದಿ ಕೃತಿಯು ಅದರ ಅರ್ಥವೂ ಸೂಚಿಸಲ್ಪಡುವುದು.

**೪೪) ಓಂ ಓಂ ಪ್ರದಾನವದೇವಹಿತದುಕ್ತಂ ಓಂ (ಪ್ರದಾನಾಧಿಕರಣಂ)**

'ಪ್ರದಾನವತ್' ಅತ್ಯಂತ ಪ್ರೀತಿಪೂರ್ವಕವಾಗಿ ಗುರುಗಳಿಂದ ಉಪದೇಶ ಮಾಡಲಾದದ್ದೇ. ಶ್ರವಣಾದಿಗಳು ಜ್ಞಾನಕ್ಕೆ ಸಾಧನವೇ ವಿನಃ ಹಾಗೇ ಉಪದೇಶ ಸಾಧನಭೂತವಾದದ್ದಲ್ಲ. ಯಾಕೆಂದರೆ 'ಹಿ' ಅದಕ್ಕೆ 'ತದುಕ್ತಂ' ಆ ಜ್ಞಾನಕ್ಕೆ ಗುರು ಪ್ರಸಾದಾಧೀನತೆಯನ್ನು 'ಆಚಾರ್ಯವಾನ್ ವೇದ' ಈ ಶ್ರುತಿಯಲ್ಲಿ ಹೇಳಿದೆ. ಅದಕ್ಕೋಸ್ಕರವಾಗಿಯೇ ಹೀಗೆ ಹೇಳಿದ್ದಾರೆ ಎಂಬ ಅರ್ಥ.

**೪೫) ಓಂ ಓಂ ಲಿಂಗಭೂಯಸ್ತ್ವಾತ್ತದ್ಧಿಬಲೀಯಸ್ತದಪಿ ಓಂ (ಲಿಂಗಭೂಯಸ್ತ್ವಾಧಿಕರಣಂ)**

'ತತ್' ಆ ಗುರುಪ್ರಸಾದರೂಪ ವಿದ್ಯಾದಾನವು ಮಾತ್ರ 'ಬಲೀಯಃ' ಅತ್ಯಂತ ಬಲವತ್ತಮವಾದದ್ದು. ಯಾಕೆಂದರೆ 'ಲಿಂಗಭೂಯಸ್ತ್ವಾತ್' ಸತ್ಯಕಾಮನಿಂದ ಎತ್ತು, ಹಂಸ, ವರುಣ, ಕಾಗೆಯ ರೂಪದಿಂದ ವಾಯು, ಅಗ್ನಿ, ವರುಣರಿಂದ ಕೇಳಿದ ವಿದ್ಯೆಯಿಂದಲಾದರೂ ಸತ್ಯಕಾಮನ ವಾಕ್ಯದಿಂದ ಗುರುಪ್ರಸಾದವೆಂಬ ಕಾರಣಾಧಿಕ್ಯದಿಂದ ತೋರುತ್ತದೆ. ಆದರೂ ಆ ಶ್ರವಣಾದಿಗಳನ್ನು ಮಾಡಬೇಕು. ಯಾಕೆಂದರೆ 'ಶ್ರೋತವ್ಯಃ ಮಂತವ್ಯಃ' ಈ ಶ್ರುತಿಯಿಂದ ಎಂದರ್ಥವು. 'ಹಿ' ಶಬ್ದದಿಂದ ಆ ಶ್ರುತಿಸೂಚಕವಾಗಿದೆ.

**೪೬) ಓಂ ಓಂ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ಕ್ರಿಯಾಮಾನಸವತ್ ಓಂ (ಪೂರ್ವವಿಕಲ್ಪಾಧಿಕರಣಂ)**

'ಕ್ರಿಯಾಮಾನಸವತ್' ಮನೋರೂಪಕ್ರಿಯಾಯುಕ್ತಧ್ಯಾನದಲ್ಲಿ ಹೇಗೆ ವಿಚಾರವೇ ಹಾಗೆ 'ಪೂರ್ವವಿಕಲ್ಪಃ' ಮೊದಲು ಸಿಕ್ಕ ಗುರುವಿನಿಂದಲಾಗಲೀ ಆ

ನಂತರ ಸಿಕ್ಕ ಗುರುಗಳಿಂದ ವಿಕಲ್ಪ ಉಪದೇಶ ಪಡೆಯುವುದೋ ಬೇಡವೋ ಎಂದು ವಿಚಾರವಿರಬಹುದು. ಆದರೇ ಉಪದೇಶ ಪಡೆಯಲೇಬೇಕೆಂದಲ್ಲ. ಯಾಕೆಂದರೆ 'ಪ್ರಕರಣಾತ್' ಅವರು ಮಾಡುವ ಶ್ರೇಷ್ಠವಾದ ಅನುಗ್ರಹಾನುಸಾರವಾಗಿ ಗುರುಗಳನ್ನು ಸ್ವೀಕರಿಸಬೇಕೆಂಬ ಅಭಿಪ್ರಾಯ.

## ೪೭) ಓಂ ಓಂ ಅತಿದೇಶಾಚ್ಚ ಓಂ

ಮೊದಲಿನ ಗುರುಗಳೇ ತನ್ನ ಸಮ ಅಥವಾ ಉತ್ತಮ ಗುರುಗಳನ್ನು ಸ್ವೀಕರಿಸೆಂದು 'ಅತಿದೇಶಾತ್' ಆದೇಶಿಸಿದರೆ ಹೇಗೆ ಪೌಷ್ಯಾಯಣ ಶ್ರುತಿ ಮೊದಲಾದಲ್ಲಿ ಆದೇಶ ಮಾಡಿದಂತೆ. ಯೋಗ್ಯವೇ ನಂತರ ಗುರುಗಳನ್ನು ಸ್ವೀಕಾರ ಮಾಡುವುದು ಎಂಬ ಅರ್ಥ.

## ೪೮) ಓಂ ಓಂ ವಿದ್ಯೈವತು ನಿರ್ಧಾರಣಾತ್ ಓಂ (ವಿದ್ಯಾಧಿಕರಣಂ)

'ನಾನ್ಯಃ ಪಂಥಾಃ' ಎಂದು 'ನಿರ್ಧಾರಣಾತ್' ಬೇರೆ ಯಾವುದರಿಂದಲೂ ಸಾಧ್ಯವಾಗದೇ ಕೇವಲ ಜ್ಞಾನದಿಂದಲೇ ಮೋಕ್ಷಕ್ಕೆ ಸಾಧನವೆಂದು ನಿಶ್ಚಿತವಾದ್ದರಿಂದ 'ವಿದ್ಯೈವ' ಜ್ಞಾನವೇ ಮೋಕ್ಷಕ್ಕೆ ಸಾಧನ ಕರ್ಮಾದಿಗಳು ಅಲ್ಲ ಎಂಬ ಅರ್ಥ. ಶ್ರುತಿಗೆ ಪ್ರಾಬಲ್ಯವನ್ನು ತೋರಿಸಲು 'ತು' ಶಬ್ದವು.

## ೪೯) ಓಂ ಓಂ ದರ್ಶನಾಚ್ಚ ಓಂ

ಕೇವಲ ಪರೋಕ್ಷಜ್ಞಾನದಿಂದ ಮೋಕ್ಷವಿಲ್ಲ ಆದರೆ ದರ್ಶನಾಚ್ಚ ಬ್ರಹ್ಮನ ಸಾಕ್ಷಾತ್ಕಾರದಿಂದಲೂ ಆಗುತ್ತದೆ. ಅದಕ್ಕೆ ಧ್ಯಾನಕ್ಕೆ ವ್ಯರ್ಥತೆ ಇಲ್ಲವೆಂಬರ್ಥ.

## ೫೦) ಓಂ ಓಂ ಶ್ರುತ್ಯಾದಿ ಬಲೀಯಸ್ತ್ವಾಚ್ಚನ ಬಾಧಃ ಓಂ (ಶ್ರುತ್ಯಧಿಕರಣಂ)

ಮೋಕ್ಷವು ಜ್ಞಾನದಿಂದಲೇ ಸಾಧ್ಯವೆಂದರೆ ದೋಷವಿಲ್ಲ. ಕರ್ಮದಿಂದಲೇ ಎಂಬ ಸ್ಮೃತಿವಿರೋಧವೂ ಇಲ್ಲ. ಯಾಕೆಂದರೆ 'ಶ್ರುತ್ಯಾದಿ ಬಲೀಯಸ್ತ್ವಾತ್'

ಜ್ಞಾನವೇ ಮೋಕ್ಷಸಾಧಕವೆಂಬ ವರ್ಣನೆಯು 'ಏವಂ ವಿದಿತ್ವಾ' ಇತ್ಯಾದಿ ಶೃತಿ (ಹೇತು) ಲಿಂಗಾದಿಗಳು ಅತ್ಯಂತ ಪ್ರಬಲವಾಗಿರುವುದರಿಂದ ಸ್ಮೃತಿಯಲ್ಲಿಯೇ ಹೇಳಿದ ವೇದವಾಕ್ಯಕ್ಕೆ ಅನ್ಯಃ ಯೋಗಃ ವ್ಯವಭೇದ ರೂಪ ಅರ್ಥ ಬಂದಂತೆ ಎಂಬ ಅರ್ಥ. ಇದನ್ನು ಸೂಚಿಸಲೇ 'ಚ' ಶಬ್ದ ಪ್ರಯೋಗ ಮಾಡಿದೆ.

**೫೧) ಓಂ ಓಂ ನುಬಂಧಾದಿಭ್ಯಃ ಓಂ (ಅನುಬಂಧಾಧಿಕರಣಂ)**

ಕೇವಲ ಶ್ರವಣಾದಿಗಳಿಂದ ಮಾತ್ರವಲ್ಲದೇ ಅಥವಾ ಕೇವಲ ಗುರುಪ್ರಸಾದದಿಂದಲೇ ಬ್ರಹ್ಮದರ್ಶನವಾಗಲಾರದು. ಆದರೆ ಅನುಬಂಧ ಶಬ್ದದಿಂದ ಹೇಳಿದ ಗುರುಭಕ್ತಿ, ಹರಿಭಕ್ತಿ, ಶಮ - ದಮಾದಿಗಳೂ ಅವಶ್ಯಕವೆಂಬ ಅರ್ಥ.

**೫೨) ಓಂ ಓಂ ಪ್ರಜ್ಞಾಂತರಪೃಥಕ್ತ್ವವದ್ದೃಷ್ಟಿಶ್ಚತದುಕ್ತಂ ಓಂ (ಪ್ರಜ್ಞಾಂತರಾಧಿಕರಣಂ)**

'ಪ್ರಜ್ಞಾಂತರಂ' ಜ್ಞಾನದಲ್ಲಿಯ ವಿಶೇಷವೆಂದರೆ ಧ್ಯಾನವನ್ನೆಂದರ್ಥ. ಅದು 'ಪೃಥಕ್ತ್ವಾತ್' ಅನೇಕ ಪ್ರಕಾರವಾಗಿದೆ. ಎಲ್ಲರಿಗೂ ಒಂದೇ ಪ್ರಕಾರ ದರ್ಶನವಾಗುವುದಿಲ್ಲ ಮತ್ತು 'ತದುಕ್ತಂ' ಆ ದೃಷ್ಟಿಯೂ 'ಅಂತದೃಷ್ಟಿಯಃ' ಇತ್ಯಾದಿ ಶೃತ್ಯುಕ್ತ ಪ್ರಕಾರವಾಗಿ ಅನೇಕ ವಿಧವಾಗಿದೆ ಎಂಬ ಅರ್ಥ.

**೫೩) ಓಂ ಓಂ ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನಹಿಲೋಕಾಪತ್ತಿಃ ಓಂ (ನ ಸಾಮಾನ್ಯಧಿಕರಣಂ)**

'ಮೃತ್ಯುಂ' ಹೇಗೆ ಮರಣವಾದ ಕೂಡಲೇ ಮುಕ್ತಿ ಆಗುವುದಿಲ್ಲವೋ ಆದರೆ ಕೊನೆಯ ಸ್ಮರಣೆಯ ನಂತರವೇ ಮುಕ್ತಿ. ಅದೇ ರೀತಿ ಇಲ್ಲಿಯೂ ಭಗವದ್ರೂಪಗಳಲ್ಲಿ ಐಕ್ಯ ಸ್ಮರಣೆಯಿಂದ ಲಭಿಸುವುದು. 'ಉಪಲಬ್ಧೇಃ' ಸಾಧಾರಣರೂಪವಾದ ಅಪರೋಕ್ಷಜ್ಞಾನದಿಂದ ಸಾಮಾನ್ಯ ಭಗವತ್‌ಜ್ಞಾನದಿಂದ. ಆದರೆ ಆ ಎಲ್ಲರಿಗೂ ಮುಕ್ತಿಯಿಲ್ಲ. ಆದರೆ ಯಾರಿಗೆ ಬಿಂಬಾಪರೋಕ್ಷಜ್ಞಾನವಾಗುವುದೋ

ಅವರಿಗೆ ಮಾತ್ರ ಮುಕ್ತಿ. ಸಾಮಾನ್ಯ ದರ್ಶನದಿಂದ ವೈಫಲ್ಯತೆ ಇಲ್ಲ. ಅದರಿಂದ ಮಹಲೋರ್ಕಾದಿಗಳ ಪ್ರಾಪ್ತಿಯಾಗುವುದು. ಆ ಲೋಕ ಸಿಗುವುದರಿಂದ ಮೋಕ್ಷಕಾರಣತ್ವವನ್ನು ಅವನು ಪಡೆಯುವುದಿಲ್ಲ. ಯಾಕೆಂದರೆ 'ಲೋಕಾಪತ್ತಿಃ' ಲೋಕ ಸಿಗುವುದೇ ಮುಕ್ತಿಯಲ್ಲ. ಆ ಸಾಧನೆಗೆ ಎಂದು ತಿಳಿಯಬೇಕು. 'ಹಿ' ಎನ್ನುವುದರಿಂದ 'ಸಾಮಾನ್ಯ ದರ್ಶನಾತ್' ಮೊದಲಾದ ಪ್ರಮಾಣ ಪ್ರಸಿದ್ಧಿಯೂ ಇದೆ ಎಂದು ಸೂಚಿತವಾಗುತ್ತದೆ.

## ೫೪) ಓಂ ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ ಓಂ (ಪರೇಣಾಧಿಕರಣಂ)

'ತು' ಮತ್ತು 'ಪರೇಣ' ಚ ಪರಮಾತ್ಮನಿಂದಲೇ ಬ್ರಹ್ಮದರ್ಶನವಾಗುತ್ತದೆ. ಆದರೂ ಶಬ್ದಸ್ಯ 'ಭಕ್ತಿರೈವೈನಂ' ಎಂಬ ಶೃತಿಯಿಂದ 'ತಾದ್ವಿಧ್ಯಂ' ದೇವರಲ್ಲಿ ಮಾಡುವ ಭಕ್ತಿಯಿಂದಲೇ ಬ್ರಹ್ಮದರ್ಶನವೆಂಬ ಕಾರಣವು ಯೋಗ್ಯವೆನಿಸುತ್ತದೆ. ಯಾಕೆಂದರೆ ಭಗವದ್ದರ್ಶನಾದಿಗಳಿಗೆ ಭಕ್ತಿಕಾರಣವೆಂಬುದನ್ನು ಉಪಸ್ಕರಿಸಬೇಕು ಅಥವಾ ಈಶ್ವರವಾಚ್ಯನಿಮಿತ್ತ ಶೃತಿಗಳಿಂದ ಭಕ್ತಿಯ ಅಭಿವ್ಯಕ್ತಿ ಎಂಬ ಶೃತಿಯಿಂದ ಈ ಅರ್ಥ ಯೋಗ್ಯವೇ ಎಂಬ ಅರ್ಥ. ಹಾಗಾದರೆ ಭಕ್ತಿಗೆ ಜ್ಞಾನ, ವೈರಾಗ್ಯಾದಿ ಬೇರೆ ಸಾಧನಗಳಲ್ಲಿ (ಅನುಬಂಧವಲ್ಲ) ಭಕ್ತಿಗೆ ಮಾತ್ರ ವೈಶಿಷ್ಟವನ್ನು ಹೇಳಲ್ಪಡುತ್ತದೆ ಎಂಬುದನ್ನು 'ಭೂಯಸ್ತ್ವಾತ್' ಎಂಬುವುದರಿಂದ ತಿಳಿಸಲಾಗಿದೆ. ಎಲ್ಲ ಸಾಧನೆಗಳಲ್ಲಿ ಭೂಯಸ್ತ್ವವನ್ನೇ (ಪ್ರಾಧಾನ್ಯವನ್ನೇ) ಕೊಡಲಾಗಿದೆ. ಈ ಅಭಿಪ್ರಾಯದಿಂದ ಅನುಬಂಧಗಳಲ್ಲಿ ಭಕ್ತಿಗೆ ವೈಶಿಷ್ಟ್ಯ ಹೇಳಿದೆ.

## ೫೫) ಓಂ ಓಂ ಏಕಃ ಆತ್ಮನಃ ಶರೀರೇ ಭಾವಾತ್ ಓಂ(ಏಕಾಧಿಕರಣಂ)

ಅಂಶ-ಅಂಶಿ ಈ ಪದಗಳ ಅರ್ಥ ಒಂದೇ ಅಂಶಾಂಶಗಳಲ್ಲಿ ಐಕ್ಯವಿದ್ದ ಪ್ರಯುಕ್ತವಾಗಿ. ಯಾಕೆಂದರೆ 'ಆತ್ಮನಃ' ಅಂಶಿಗೆ ಇಂದ್ರಾದಿಗಳ (ಶರೀರದಲ್ಲಿ)

ಕರ್ಮನಿರ್ಮಿತ ಶರೀರದಲ್ಲಿ ಅಂಶಭೂತಅರ್ಜನಾದಿಗಳು 'ಭಾವಾತ್' ಅದರ ಅಭಿಮಾನಿತ್ವೇನ ಯುಕ್ತರಾಗಿರುವುದರಿಂದ ಎಂಬ ಅರ್ಥ.

### ೫೬) ಓಂ ಓಂ ವ್ಯತಿರೇಕಸ್ತದ್ಭಾವಿತ್ವಾನ್ನತೂಪಲಬ್ಧಿವತ್ ಓಂ

'ಉಪಲಬ್ಧಿವತ್' ಜ್ಞಾನಸುಖ ಮೊದಲಾದವುಗಳು ಪರಸ್ಪರ ಭಿನ್ನವೇ, ಅಂಶಾಂಶಿಗಳಾಗಿದ್ದರೂ ಭಿನ್ನವೇ. 'ವ್ಯತಿರೇಕೋ' ಎಂದು ಹೇಳಲಾಗದು. ಯಾಕೆಂದರೆ 'ತದ್ಭಾವಭಾವಿತ್ವಾತ್' ಅಂಶಕ್ಕೆ ಅಂಶಿಯಿಂದ ಮಾಡಿದ ಭಾವರೂಪ ಉಪಾಸನೆಯಿಂದ ಫಲವು ಅನುಭವಕ್ಕೆ ಬರುತ್ತಿರುವುದರಿಂದ ಹಾಗಿಲ್ಲದಿದ್ದರೆ ಆ ಫಲ ಸಿಗದಿರಲಿ ಎಂಬ ಅರ್ಥ.

### ೫೭) ಓಂ ಓಂ ಅಂಗಾವಬದ್ಧಾಸ್ತುನಶಾಖಾಸುಹಿ ಪ್ರತಿಭೇದಂ ಓಂ (ಅಂಗಾವಬದ್ಧಾಧಿಕರಣಂ)

ವಿಶೇಷವಾಗಿ 'ತು' 'ಅಂಗಾವಬದ್ಧಾಃ' ದೇವರ ಅಂಗಾಶ್ರೀತರಾದ ದೇವತೆಗಳೂ ಕೂಡ ಅವನ ಪರಿವಾರರೂಪದಿಂದ ಉಪಾಶ್ಯರಾಗುತ್ತಾರೆ. ಅವುಗಳ ಉಪಸಂಹಾರದಲ್ಲಿಯೂ ವಿಶೇಷತೆ ಇದೆ. ಯೇನಾ ವಿಶೇಷವೆಂದರೆ 'ಪ್ರತಿವೇದಂ' ಎಲ್ಲ ವೇದ, ವೇದಶಾಖೆಗಳಲ್ಲಿ ಹೇಳಿದ್ದು. ಬ್ರಹ್ಮಾದಿ ಅಂಗದೇವತೆಗಳಿಂದ ಬದ್ಧಗುಣಗಳಿಂದ ಉತ್ಪನ್ನವಾದದ್ದು ಆ ಎಲ್ಲವನ್ನೂ ರುದ್ರಾದಿಗಳಲ್ಲಿ ಉಪಸಂಹಾರ ಮಾಡಬಾರದು. ಆದರೆ ಅದು ಯೋಗ್ಯವೇ ಎಂಬ ಅರ್ಥ. 'ಹಿ' ಎಂಬುದರಿಂದ 'ಸಮತ್ವಾದ್ವಾ' ಎಂಬ ಸ್ಮೃತಿಯಿಂದ ಪ್ರಸಿದ್ಧತೆಯನ್ನು ತೋರಿಸಲಾಗುತ್ತದೆ.

### ೫೮) ಓಂ ಓಂ ಮಂತ್ರಾದಿವದ್ವಾವಿರೋಧಃ ಓಂ

'ಮಂತ್ರಾದಿವತ್' ಹೇಗೆ ಆಜ್ಞಾದಿ ಅಧಮ ದೇವತೆಗಳನ್ನು ವರ್ಣಿಸುವ ಮಂತ್ರವಿದ್ಯೆಗಳಲ್ಲಿ ಬ್ರಾಹ್ಮಾದಿ ಉತ್ತಮ ದೇವತೆಗಳ ವಾಚಿತ್ವವಿದೆಯೋ ಹಾಗೆಯೇ

'ಅವಿರೋಧಃ' ಅಧಮ ಗುಣಗಳುನ್ನು ಉತ್ತಮರಲ್ಲಿಯೂ ಉಪಸಂಹಾರ ಮಾಡಿದರೂ ಕೂಡ ವಿರೋಧಬಾರದೆಂದು 'ವಾ' (ಅಂಗೀಕಾರ) ಒಪ್ಪಲೇಬೇಕೆಂದರ್ಥ.

**೫೯) ಓಂ ಓಂ ಭೂಮ್ನಃಕ್ರತುವಜ್ಜ್ಯಾಯಸ್ತ್ವಂ ತಥಾ ಚ ದರ್ಶಯತಿ ಓಂ (ಭೂಮಾದಿಕರಣಂ)**

'ಕ್ರತುವತ್' ಹೇಗೆ ಕ್ರತು ಶಬ್ದದಿಂದ ಹೇಳಿಸಿಕೊಳ್ಳುವ ತದಂಗಪ್ರಾಣೀಯಾದಿಗಳಂತೆ (ವಿಕೃತಿ) ಮಾಡದಿರುವ ಯಜ್ಞಗಳಲ್ಲಿ ಪುನಃ ಮಾಡುವಿಕೆಯೂ ಇದ್ದಂತೆ ಹಾಗೆಯೇ 'ಭೂಮ್ನಃ' ಪೂರ್ಣಗುಣರೂಪ ಬೇರೆ ಗಣಗಳಕಿಂತಲೂ ಶ್ರೇಷ್ಠತೆಯಿಂದ 'ಜ್ಞಾಯಸ್ತ್ವ' ಯುಕ್ತವೆಂದು. ಆನಂದಾದಿ ಗುಣಗಳಲ್ಲಿ (ಅನುವೃತ್ತಿ) ಪೌನಪುನ್ಯರೂಪದಿಂದಧ್ಯಾನ ಮಾಡುವುದರಿಂದ ಸಾಫಲ್ಯ ಬಂದು ಸರ್ವೋಪಾಶ್ಯತ್ವವೇ ಆದರಿಂದ ಆಗುವುದೆಂಬುದು ಯೋಗ್ಯವಾಗಿ ಕೂಡುತ್ತದೆ. ಯಾಕೆ ಹೀಗೆ ಇದು ಎಂದರೆ 'ಭೂಮ್ನೈವದೇವಃ' ಎಂಬ ಶೃತಿಯಿಂದ 'ತಥಾ ದರ್ಶಯತಿ' ಹಾಗೆ ಪ್ರತಿಪಾದನೆ ಮಾಡಲಾಗುತ್ತದೆ ಅದಕ್ಕೋಸ್ಕರ ಎಂಬ ಅರ್ಥ.

**೬೦) ಓಂ ಓಂ ನಾನಾಶಬ್ದಾದಿ ಭೇದಾತ್ ಓಂ (ನಾನಾಶಬ್ದಾಧಿಕರಣಂ)**

ಎಲ್ಲರಿಂದಲೂ (ಅಧಿಕ) ಭೂಮ ಗುಣಗಳ ಯಥಾಯೋಗ್ಯವಾಗಿ ಬೇರೆ ಬೇರೆ ಕ್ರಮದಲ್ಲಿ ಉಪಾಸನೆ ಮಾಡಬೇಕು. ಒಂದೇ ಪ್ರಕಾರವಾಗಿ ಅಲ್ಲ. ಯಾಕೆಂದರೆ 'ಶಬ್ದಾದಿಭೇದಾತ್' ಶಬ್ದಾದಿ ಪ್ರಮಾಣಗಳಿಂದ ಅಧಿಕಾರಿಗಳ ವ್ಯತ್ಯಾಸ (ಭೇದ) ದಿಂದ 'ಭೂಮ' ಶ್ರೇಷ್ಠವೆಂಬ ಗುಣಕ್ಕೆ (ದಿಂದ) ಅನೇಕ ಪ್ರಕಾರವಾಗಿ ಪ್ರತೀತಿ ಇರುವುದರಿಂದವೆಂಬ ಅರ್ಥ.

**೬೧) ಓಂ ಓಂ ವಿಕಲ್ಪೋಽವಿಶಿಷ್ಟಫಲತ್ವಾತ್ ಓಂ (ವಿಕಲ್ಪಾಧಿಕರಣಂ)**

ತಮ್ಮತಮ್ಮ ಮೋಕ್ಷದ ಸಾಧನ ಮತ್ತು ಬೇರೆ ನೃಸಿಂಹಾದಿರೂಪಗಳ ಉಪಾಸನೆ ಮಾಡುವುದೋ ಬೇಡವೋ ಎಂಬ ಸಂಶಯ ಬಂದಾಗ್ಗ ಮಾಡಬೇ

ಕೆಂದರು. ಯಾಕೆಂದರೆ ವಿಶಿಷ್ಠಫಲತ್ವಾತ್ ಮತ್ತು ಉಪಾಸನೆಗೆ ಪಾಪನಿವೃತ್ತಿರೂಪವಾದ ವಿಶಿಷ್ಠಫಲದ ಅಪೇಕ್ಷೆಯಿಂದ ಮಾಡಬೇಕು. ಅದಕ್ಕೆ ಅನುಸರಿಸಿಕೊಂಡು ವಿಕಲ್ಪ ಮಾಡುವದೂ ಯೋಗ್ಯವೇ ಎಂದರ್ಥ.

## ೬೨) ಓಂ ಓಂ ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ನವಾ ಪೂರ್ವಹೇತ್ವಭಾವಾತ್ ಓಂ (ಕಾಮ್ಯಾಧಿಕರಣಂ)

ಅಪೇಕ್ಷೆ ಪೂರ್ಣಗೊಳಿಸುವ ತಮ್ಮ ಇಚ್ಛೆಯ ಸಾಧನೀಭೂತ ಭಗವದ್ಗುಣಗಳನ್ನು ತಮಗೆ ಬೇಕಾದ ಫಲ ಅಪೇಕ್ಷೆಗೆ (ಕಾಮ) ಅನುಗುಣವಾಗಿ 'ಸಮುಚ್ಚೀಯೇರನ್ನವಾಃ' ಮೋಕ್ಷ ಆಗುವವರು ಉಪಸಂಹಾರ ಮಾಡಬೇಕು ಮೋಕ್ಷಗಳು ಉಪಸಂಹಾರ ಮಾಡಬಾರದು ಎಂದು. ಈ ರೀತಿ ವ್ಯವಸ್ಥಿತವಾಗಿಯೇ ವಿಭಾಗ ಮಾಡಲಾಗಿದೆ. ಯಾಕೆಂದರೆ 'ಪೂರ್ವಹೇತ್ವಭಾವಾತ್' ಮೋಕ್ಷೇಚ್ಛುಗಳು ಮುಕ್ತಿಯ ಇಚ್ಛಾಪೂರ್ವಕಾಲೀನ ಮೊದಲಿನ ಸೂತ್ರದಲ್ಲಿ ಹೇಳಿದ ಬೇರೆ ಕಾಮನೆಯ ಅಪೇಕ್ಷಾರೂಪ (ಹೇತು) ಕಾರಣವಿಲ್ಲದ್ದರಿಂದ. ಈ ರೀತಿ ಮೋಕ್ಷದ ಇಚ್ಛೆಯುಳ್ಳವರಿಂದಲೇ ಈಶ್ವರನ ಪ್ರೀತ್ಯರ್ಥವಾಗಿ ಉಪಸಂಹಾರಕ ಫಲದ ಸಲುವಾಗಿ ಅನುಪಸಂಹಾರ-ಉಪಸಂಹಾರವೆಂಬ ವಿಕಲ್ಪ ಆಗಲೀ ಎಂದರ್ಥ.

## ೬೩) ಓಂ ಓಂ ಅಂಗೇಷು ಯಥಾಽಽಶ್ರಯಾಭಾವಃ ಓಂ(ಅಂಗಾಧಿಕರಣಂ)

ಅಂಗೇಷು ಭಗವಂತನ ಅವಯವಗಳಲ್ಲಿ ಯಥಾಶ್ರಯಭಾವಃ, ಚಕ್ಷ್ಯೋಃ ಸೂರೋ ಅಜಾಯತ ಇತ್ಯಾದಿಗಳಲ್ಲಿ ಹೇಗೆ ಆಶ್ರಯತ್ವವನ್ನು ಹೇಳಲ್ಪಟ್ಟಿದೆಯೋ ಹಾಗೆಯೇ ಅವರಿಂದ ಉಪಾಸನೆ ಮಾಡಬೇಕೆಂದರ್ಥ.

## ೬೪) ಓಂ ಓಂ ಶಿಷ್ಟೇಶ್ಚ ಓಂ

ಯಸ್ಮಿನ್ ಎಂಬ ಶೃತಿಯಿಂದ ವಿಧಿಸುವುದರಿಂದಲೂ ಕೂಡ ಹಾಗೆಯೇ ಉಪಾಸನೆ ಮಾಡಬೇಕೆಂದು ಅರ್ಥ.

## ೬೫) ಓಂ ಓಂ ಸಮಾಹಾರಾತ್ ಓಂ

ಸಮಾಹಾರ ಈ ಶಬ್ದದಿಂದ ಉಪಸಂಹಾರ ಫಲ ಶೃತಿಯನ್ನು ತೆಗೆದುಕೊಳ್ಳಬೇಕು. ದೇವತೆಗಳಿಗೆ ತಮ್ಮ ತಮ್ಮ ಉತ್ಪನ್ನತೆಯ ರೂಪ ಉಪಸಂಹಾರವು ಫಲರೂಪ ವಚನಗಳಿಂದ. ಆ ದೇವತೆಗಳು ಹಾಗೆಯೇ ಉಪಾಸನೆ ಮಾಡಬೇಕೆಂಬ ಅರ್ಥ ತೋರುತ್ತದೆ.

## ೬೬) ಓಂ ಓಂ ಗುಣಸಾಧಾರಣ್ಯಶೃತೇಶ್ಚ ಓಂ

'ಗುಣಾನಾಂ' ಭಗವಂತನ ರೂಪಗಳಿಗೆ 'ಸಾಧಾರಣ್ಯ' ಎಲ್ಲ ರೀತಿ ಉಪಾಸನೆ ಎಲ್ಲರೂ ಮಾಡಬೇಕೆಂಬ ಅರ್ಥದಿಂದ ಮತ್ತು 'ಶೃತೇಃ' ಸಾಧಾರಣ ವೇದದಿಂದಲೂ 'ಸಾಧಾರಣ್ಯಾತ್' ಎಂದು ವೇದದಲ್ಲಿ ಹೇಳಿದ್ದರಿಂದ ದೇವತೆಗಳು ಹಾಗೆಯೇ ಉಪಾಸನೆ ಮಾಡಬೇಕು. ಎಲ್ಲರೂ ಹಾಗೆಯೇ ಉಪಾಸನೆ ಮಾಡಬೇಕೆಂದರ್ಥ.

## ೬೭) ಓಂ ಓಂ ನವಾತತ್ಸಹಭಾವಶೃತೇಃ (ನವಾಧಿಕರಣಂ)

ಅಂಗತೇವತೆಳ ಉಪಾಸನೆಯನ್ನು ದೇವತೆಗಳಿಂದ ಬೇರೆಯಾದ ಮನುಷ್ಯರು ಮಾಡಬಾರದು. ಆದರೆ ದೇವತೆಗಳಿಂದಲೇ ಎಂದು ವ್ಯವಸ್ಥಿತವಾದ ವಿಕಲ್ಪ ಮಾಡಲಾಗುವುದು. ಯಾಕೆಂದರೆ 'ಅತತ್ಸ ಹಾಭಾವಶೃತೇಃ' ಅದಕ್ಕೆ ಸಹ ಕೃತ ಶೃತಿಗಳಿಲ್ಲದ್ದರಿಂದ. ಎಲ್ಲ ಶಾಖಾದಲ್ಲಿಯ ಗುಣಗಳ ಉಪಾಸನೆ ಮಾಡುವುದರಿಂದ ಅದಕ್ಕೆ ಜತೆಯಲ್ಲಿರುವ ಅಂಗದೇವತೆಗಳ ಉಪಾಸನೆ ಮಾಡಿದಂತೆ ಎಂದು ತಿಳಿದಿರುವುದರಿಂದ ಎಂಬ ಅರ್ಥ.

## ೬೮) ಓಂ ಓಂ ದರ್ಶನಾಚ್ಚ ಓಂ

'ಸತ್ಯೋಜ್ಞಾನಃ ಪರಮಾನಂದ ರೂಪಃ' ಈ ಶೃತಿಯಲ್ಲಿ ಈ ಅರ್ಥವು 'ದರ್ಶನಾಚ್ಚ' ಹೇಳಿರುವುದರಿಂದಲೂ ಕೂಡ ದೇವತೆಗಳಿಂದಲೇ ಅಂಗದೇವ

ತೆಗಳ ಉಪಾಸನೆಯನ್ನು ಮಾಡಬೇಕು ಬೇರೆ ಯಾರಿಂದಲೂ ಮಾಡುವುದು ಯೋಗ್ಯವಲ್ಲವೆಂಬರ್ಥ.

**ಇತಿ ಶ್ರೀಜಗನ್ನಾಥಯತಿಕೃತಯಾಂ ಸೂತ್ರದೀಪಿಕಾಯಾಂ ತೃತೀಯಾಧ್ಯಾಯಸ್ಯ ತೃತೀಯಃ ಪಾದಃ ಸಮಾಪ್ತಃ**

**ಉಮರ್ಜಿ ಪ್ರಲ್ಹಾದಾಚಾರ್ಯರಿಂದ ರಚಿತ ಕನ್ನಡ ವಾಖ್ಯಾನದಲ್ಲಿ ಮೂರನೆಯ ಅಧ್ಯಾಯದಲ್ಲಿ ಮೂರನೇಯ ಪಾದ ಸಮಾಪ್ತಯಾಯಿತು.**

ಅಥ ತೃತೀಯಾಧ್ಯಾಯಸ್ಯ ಚತುರ್ಥಯ ಪಾದಃ ಪ್ರಾರಂಭಃ

**೧) ಓಂ ಓಂ ಪುರುಷಾರ್ಥೋऽತಃ ಶಬ್ದಾದಿತಿ ಬಾದರಾಯಣಃ ಓಂ (ಪುರುಷಾರ್ಥಾಧಿಕರಣಂ)**

ಪುರುಷರಿಂದ ಪ್ರಾರ್ಥ್ಯಮಾನವಾದದ್ದು ಯಾವುದೋ ಆ ಎಲ್ಲ ಫಲವೂ ಪುರುಷಾರ್ಥ ಶಬ್ದದಿಂದ ವರ್ಣಿತವಾಗುತ್ತದೆ. ಅದಕ್ಕೆ ಬ್ರಹ್ಮದರ್ಶನದಿಂದಲೂ ಲಭಿಸುವುದು ಪುರುಷಾರ್ಥವೇ ಮೋಕ್ಷವಲ್ಲ. ಯಾಕೆಂದರೆ 'ಯಂ ಯಂ ಶಬ್ದಾತ್' ಎಂಬ ಶೃತಿಯಿಂದ ಎಂದು ಪೂಜ್ಯರಾದ ಬಾದರಾಯಣರ ಅಭಿಪ್ರಾಯ ಎಂಬ ಅರ್ಥ.

**೨) ಓಂ ಓಂ ಶೇಷತ್ವಾತ್ ಪುರುಷಾರ್ಥವಾದೋ ಯಥಾಅನ್ಯೇಷ್ವಿತಿ ಜೈಮಿನಿಃ ಓಂ**

'ಶೇಷತ್ವಾತ್' ಜ್ಞಾನಕ್ಕೆ ಕರ್ಮಾಂಗವಾದದ್ದೆಂದು ಹೇಳುವುದರಿಂದಲೇ 'ಪುರುಷಾರ್ಥವಾದಃ' 'ಯಂ ಯಂ' ಎಂಬ ಶೃತಿಯಲ್ಲಿ ಜ್ಞಾನವು ಸ್ವರ್ಗಾದಿ ಪುರುಷಾರ್ಥಗಳಿಗೆ ಸಾಧಕವೆಂಬುದು ಸರಿಯಲ್ಲ. ಮೋಕ್ಷಮಾರ್ಗದಲ್ಲಿರುವ ಸ್ವರ್ಗಕ್ಕೆ ಪ್ರಾಧಾನ್ಯತೆ ಕೊಡಲಾಗಿದೆ. ಅದು ಹೇಗೆಂದರೆ 'ಯಥಾ ಅನ್ಯೇಷು ಸ್ವರ್ಗಸಾಧನ ಕರ್ಮಗಳಲ್ಲಿ ಮಿಕ್ಕ ಧನ-ಕನಕಾದಿಗಳ ಪ್ರಾಪ್ತಿಯೂ ಹೇಗೆ ಸೇರುವುದೋ ಹಾಗೆ. ಹೇಗೆ 'ಸ್ವರ್ಗಂ ಧನಾದ್ದೇಹತೋ' ಇಲ್ಲಿ ಪ್ರಾಧಾನ್ಯತೆ ಇದ್ದಂತೆ ಇಲ್ಲಿಯೂ ಹಾಗೆ ಎಂದು ಜೈಮಿನ್ಯಾಚಾರ್ಯರು ಹೇಳುತ್ತಾರೆ ಎಂಬ ಅರ್ಥ.

**೩) ಓಂ ಓಂ ಆಚಾರದರ್ಶನಾತ್ ಓಂ**

'ಯಜ್ಞೇನ ಯಜ್ಞಂ' ಎಂದು ದೇವತೆಗಳೂ ಕರ್ಮಾನುಷ್ಠಾನ ಮಾಡಬೇಕೆಂಬ ಶೃತಿ ಇದ್ದರೂ ಜ್ಞಾನದಿಂದಲೇ ಸಮಸ್ಥ ಪುರುಷಾರ್ಥ ಪ್ರಾಪ್ತವಾಗುತ್ತದೆ ಎಂಬುದೇ ಮುಖ್ಯಾರ್ಥ.

**೪) ಓಂ ಓಂ ತಚ್ಛ್ರುತೇಃ ಓಂ**

'ಯದೇವವಿದ್ಯಯಾ' ಎಂದು ಜ್ಞಾನಕ್ಕೆ ಕರ್ಮಶೇಷತ್ವ ಶ್ರುತಿಯಿಂದ ಆ ಕರ್ಮವು ಪ್ರಧಾನವಲ್ಲ ಜ್ಞಾನವೇ ಮುಖ್ಯವೆಂದರ್ಥ.

**೫) ಓಂ ಓಂ ಸಮನ್ವಾರಂಭಣಾತ್ ಓಂ**

ಕರ್ಮಜ್ಞಾನದಕಿಂತಲೂ ದೊಡ್ಡದೂ (ಅಧಿಕ) ಅಲ್ಲ ಹಾಗೂ ಅದಕ್ಕೆ ಸಮವೂ ಅಲ್ಲ. ಆದರೆ ಕರ್ಮಕ್ಕೆ ಪ್ರಾಧಾನ್ಯತೆ ಇದೆ. ಯಾಕೆಂದರೆ 'ಸಮನ್ವಾರಂಭಣಾತ್' ಕರ್ಮದಿಂದಲೇ 'ಕರ್ಮಣೈವ ಹಿ' ಎಂಬ ಸ್ವರ್ಗಾದಿ ಕಾರ್ಯಾರಂಭಿಕರೂಪ ಶೃತಿ ಇರುವುದರಿಂದ ಜ್ಞಾನಾನಂತರ ಕರ್ಮಕ್ಕೆ ಪ್ರಾಧಾನ್ಯವೆಂಬ ಅರ್ಥ.

**೬) ಓಂ ಓಂ ತದ್ವತೋಽವಿಧಾನಾತ್ ಓಂ**

ತದ್ವತಃ ವಿಧಾನಾತ್ ಜ್ಞಾನೀ ಚ ಕರ್ಮಾಣಿ ಎಂದು ಕರ್ಮವು ಕಡ್ಡಾಯವೆಂದು ಹೇಳಿರುವುದರಿಂದ ಜ್ಞಾನಿಯ ಕರ್ಮವು ಕ್ರೀಡಾ(ಲೀಲಾ) ರೂಪವೆಂದು ತಿಳಿಯಬಾರದು ಎಂದರ್ಥ.

**೭) ಓಂ ಓಂ ನಿಯಮಾಚ್ಚ ಓಂ**

ಜ್ಞಾನಿಯಾದವನೂ ಕೂಡ ನಿಯಮದಿಂದ ಕರ್ಮಮಾಡದಿದ್ದರೆ ದೋಷವೂ ಕೂಡ 'ಕುರ್ವನ್ನೇವೇಹ' ಎಂಬ ಶೃತಿಯಿಂದ ಅದಕ್ಕೆ ಜ್ಞಾನಿಯ ಮಾಡುವ ಕರ್ಮ ಲೀಲಾರೂಪವೆಂದು ತಿಳಿಯಬೇಕೆಂದರ್ಥ.

**೮) ಓಂ ಓಂ ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದರ್ಶನಾತ್ ಓಂ**

'ತು' ವೇದವ್ಯಾಸರಮತಾನುಸಾರಿ ವಿಶೇಷತೆಯ ದ್ಯೋತಕ 'ಬಾದರಾ

ಯಣಸ್ಯ' ವ್ಯಾಸರು ಈ ರೀತಿ ಜ್ಞಾನದಿಂದಲೇ ಸಮಸ್ತ ಪುರುಷಾರ್ಥಪ್ರಾಪ್ತಿಯಾಗುತ್ತದೆ ಎಂಬ ಅಭಿಪ್ರಾಯ. ಯಾಕೆಂದರೆ 'ಅಧಿಕೋಪದೇಶಾತ್' ಜ್ಞಾನದಿಂದ ಲಭಿಸುವ ಮೋಕ್ಷದಲ್ಲಿ ಕರ್ಮಾಧೀನ. ಅದಕ್ಕೂ (ಅಧಿಕವಾಗಿ) ಅತಿಶಯವಾಗಿ ಎಂದು 'ಜ್ಞಾನಾದೇವ' ಎಂದು ಶೃತಿಯಲ್ಲಿ ಹೇಳಿರುವುದರಿಂದ ಮತ್ತು 'ತದ್ದರ್ಶನಾತ್' ಆ ಜ್ಞಾನದಿಂದ ಪಡೆದ ಫಲಕ್ಕೂ ಕರ್ಮಜನ್ಯ (ರಾಜಸೂಯಾದಿ) ಫಲಕ್ಕೂ (ಧರ್ಮರಾಜಾದಿಗಳಿಗೆ ಸಿಕ್ಕಿರುವುದು) ಆಧಿಕ್ಯತೆ ಇದೆಯೆಂದರೆ ಇಲ್ಲಿ ಭಗವಂತನ ಅಭಿಪ್ರಾಯ(ಮತ)ವು ಅದು ಆಯಾ ದೇವತೆಗಳ ಯೋಗ್ಯತಾನುಸಾರಿಯಾದದ್ದೆಂದು ಆದರೆ ಈಶ್ವರನಿಂದ ಭಿನ್ನರಾದ ಜೈಮಿನ್ಯಾಚಾರ್ಯಾದಿಗಳು, ದೇವತೆಗಳಿಂದ ಭಿನ್ನರಾದ ಜ್ಞಾನಿಗಳಾದ ಮನುಷ್ಯರ ವಿಷಯವೆಂದು ಅದಕ್ಕೆ ಇಲ್ಲಿ ಪರಸ್ಪರ ವಿರೋಧವಿಲ್ಲವೆಂಬ ಅರ್ಥ.

## ೯) ಓಂ ಓಂ ತುಲ್ಯಂತು ದರ್ಶನಂ ಓಂ

ಜ್ಞಾನಿಯು ಮಾಡುವ ಕರ್ಮವು ಜ್ಞಾನದಕಿಂತಲೂ ಅತಿಶಯವಾದದ್ದಲ್ಲ. ಆದರೆ ಜ್ಞಾನಫಲವೇ ಅಧಿಕ. ಯಾಕೆಂದರೆ ಯಾವ 'ದರ್ಶನಂ' ಎಂದರೆ ಜ್ಞಾನವು ಕಾರ್ಯ ಮಾಡಲೀ ಬಿಡಲೀ ಅವನಲ್ಲಿಯ ಜ್ಞಾನವು ಸಮಾನವಾಗಿಯೇ ಇರುತ್ತದೆ ಎಂದರ್ಥ.

## ೧೦) ಓಂ ಓಂ ಅಸಾರ್ವತ್ರಿಕೀ ಓಂ (ಅಸಾರ್ವತ್ರಿಕಾಧಿಕರಣಂ)

ಜ್ಞಾನಾಧಿಕಾರವು ಎಲ್ಲ ಜನರಿಗೂ ಇರುವುದಿಲ್ಲ ಎಂಬ ಅರ್ಥ

## ೧೧) ಓಂ ಓಂ ವಿಭಾಗಃ ಶತವತ್ ಓಂ

'ವಿಭಾಗಃ' ಕೆಲವರಲ್ಲಿ ಕೆಲವರಿಗೆ ಮಾತ್ರ ಕೆಲವರಿಗೆ ಮಾತ್ರ ಜ್ಞಾನದಲ್ಲಿ ಅಧಿಕಾರ ಒಂದು ನೂರುಜನ ದೇವತೆಗಳಿಗೆ ಮಾತ್ರ ಅಧಿಕಾರ ಬೇರೆಯವರಿಗಿಲ್ಲ

ವೆಂಬ ವಿಭಾಗದಂತೆ 'ನವಕೋಟ್ಯೋ ಹಿ' ಇತ್ಯಾದಿಗಳಲ್ಲಿ ಹೇಳಿರುವುದರಿಂದ ಎಂಬ ಅರ್ಥ.

**೧೨) ಓಂ ಓಂ ಅಧ್ಯಯನ ಮ್ಯಾತ್ರವತಃ ಓಂ**

ಯಥಾಶಕ್ತಿ ಎಲ್ಲ ವೇದಾಧ್ಯನ ಮಾಡಿದವನಿಗೆ ಮಾತ್ರ ವೇದವಿದ್ಯೆ (ಜ್ಞಾನದಲ್ಲಿ) ಅಧಿಕಾರವೇ ವಿನಃ ಬೇರೆಯವರಿಗಲ್ಲವೆಂಬರ್ಥ.

**೧೩) ಓಂ ಓಂ ನಾವಿಶೇಷಾತ್ ಓಂ (ನಾವಿಶೇಷಾಧಿಕರಣಂ)**

ದೇವಾದಿಗಳೆಲ್ಲರಿಗೂ ಜ್ಞಾನದಲ್ಲಿ ಅಧಿಕಾರವಿದ್ದು 'ಅವಿಶೇಷಾತ್ ನ' ಸಮಾನತೆ ಇಲ್ಲ ಆದರೆ ಪರಸ್ಪರ ತಾರತಮ್ಯವಿದೆ ಎಂಬ ಅರ್ಥ.

**೧೪) ಓಂ ಓಂ ಸುತ್ತಯೇನುಮತಿರ್ವಾ ಓಂ (ಸ್ತುತ್ಯಧಿಕರಣಂ)**

ಜ್ಞಾನಿಗಳಲ್ಲಿ ಸತ್ ಅಸತ್ ಪ್ರವೃತ್ತಿಗಳಲ್ಲಿ ವಿಶೇಷತೆ ಇದ್ದೇ ಇದೆ. ಯಾಕೆಂದರೆ ಯಥೇಷ್ಟ ಆಚಾರಯುಕ್ತ ಜ್ಞಾನಿಯು ಮುಕ್ತನಾಗುತ್ತಾನೆಯೇ ಜ್ಞಾನಿ ಸ್ತುತಿಯಲಿಲ 'ಏನಸ್ಯಾತ್' ಇತ್ಯಾದಿ ಹೇಳುತ್ತಾರೆ. ಜ್ಞಾನಿಗಳಿಗೆ 'ಅನುಮತಿರ್ವಾ' ಜ್ಞಾನಿಗಳಿಗೆ ಯಥೇಷ್ಟಾಚರಣದಲ್ಲಿ ಅನುಜ್ಞೆಯು ಮಾತ್ರ. ಇಲ್ಲಿ ಜ್ಞಾನಿಗೆ ಯಥೇಷ್ಟಾಚರಣ ಎಂಬ ವಿಧಿ ಇಲ್ಲಿ ಇಲ್ಲ ಎಂಬರ್ಥ.

**೧೫) ಓಂ ಓಂ ಕಾಮಕಾರೇಣಚೈಕೆ ಓಂ**

'ಏಕೇ' ಕೆಲವು ಶಾಖೆಯಲ್ಲಿ ಕಾಮಕಾರೇಣ ಯಥೇಷ್ಟಾಚರಣೆಯಿಂದಲೂ ಕೂಡ ಜ್ಞಾನಿಗಳಿಗೆ ಮೋಕ್ಷವನ್ನು 'ಕಾಮಚಾರಾಃ ಕಾಮಭಕ್ಷಾ' ಈ ಶೃತಿಯಲ್ಲಿ (ಪಠಿಸುತ್ತಾರೆ) ಹೇಳುತ್ತಾರೆ. ಅದಕ್ಕೆ ಸದಸತ್ ಪ್ರವೃತ್ತಿಯಿಂದ ಮೋಕ್ಷಕ್ಕೆ ಹಾನಿ ಯಾಗುವುದಿಲ್ಲ. ಆದರೆ ಫಲದಲ್ಲಿ ವಿಶೇಷ ಮಾತ್ರ ಇದ್ದೇ ಇರುತ್ತದೆ ಎಂದು ಅರ್ಥ.

## ೧೬) ಓಂ ಓಂ ಉಪಮರ್ದಂ ಚ ಓಂ

ಮತ್ತು 'ಚ' ಯಾವಕಾಲದಲ್ಲಿ ಪ್ರಾರಬ್ಧಕರ್ಮಪ್ರಕಾರವಾಗಿ ಕೆಲವು ರೀತಿ ಭುಕ್ತವಾದ ಕರ್ಮಕ್ಕೆ ಜ್ಞಾನದಿಂದಲೇ 'ಉಪಮರ್ದಂ' ಸ್ವಲ್ಪ ಫಲದಲ್ಲಿ ಊನತೆ (ಹ್ರಾಸ) ಬರುತ್ತದೆ. 'ಓಮಿತ್ಯುಚ್ಚಾರ್ಯ' ಎಂಬ ಶೃತಿಯಲ್ಲಿ ಒಂದು ಶಾಖೆಯವ ವರು ಪಠಿಸುತ್ತಾರೆ. ಆ ಕಾಲದಲ್ಲಿ ಜ್ಞಾನೋತ್ತರ ಕಾಲದಲ್ಲಿ ಮಾಡಿದ ಸತ್ಕರ್ಮವು ಮೋಕ್ಷಕ್ಕೆ ಪ್ರತಿಬಂಧಕವಾಗಲಾರದೆಂದು ಪ್ರತ್ಯೇಕವಾಗಿ ಏನು ಹೇಳುವುದಿದೆ ಎಂಬರ್ಥ.

## ೧೭) ಓಂ ಓಂ ಊರ್ಧ್ವರೇತಸ್ಸು ಚ ಶಬ್ದೆ ಹಿ ಓಂ

ಕಾಮಚಾರಿಗಳಾಗಿದ್ದರೂ ಕೂಡ ಜ್ಞಾನಿಗಳಿಗೆ ಮುಕ್ತಿಗೆ ಅಧಿಕಾರವಿದ್ದಂತೆ ಕಾಮಚಾರಿಗಳಾದ ಜಿಜ್ಞಾಸುವರ್ಗದವರಿಗೆ ಜ್ಞಾನದಲ್ಲಿ ಅಧಿಕಾರ ಇರುವುದಿಲ್ಲ. ಯಾಕೆಂದರೆ 'ಹಿ ಶಬ್ದೇ ಯ ಇಮಂ' ಎಂಬ ಶೃತಿಯಲ್ಲಿ 'ಊರ್ಧ್ವರೇತಸ್ತ್ವ' ಮೊದಲಾದ ಗುಣಗಳಿದ್ದ ದ್ದರಿಂದ ಜ್ಞಾನೋಪದೇಶವು ವಿಹಿತವೇ ಅದಕ್ಕೆ ಎಂಬ ಅರ್ಥ.

## ೧೮) ಓಂ ಓಂ ಪರಾಮರ್ಶಂ ಜೈಮಿನಿರಚೋದನಾಚಾಪವದತಿಹಿ ಓಂ

'ಜೈಮಿನಿಃ ಪರಾಮರ್ಶಂ ಏನಶ್ಯಾತ್' ಈ ವಾಕ್ಯದಲ್ಲಿ 'ಪ್ರಾತರುದ್ಧಾಯ' ಇತ್ಯಾದಿ ಶೃತಿಯಲ್ಲಿ ಹೇಳಿದಂತೆ ಸದಾಚಾರವನ್ನು ಸ್ವೀಕರಿಸುವದನ್ನು ಒಪ್ಪಿಕೊಂಡು ಇಲ್ಲಿ ಸದಾಚಾರವನ್ನೇ ನಿಮಯಿತವಾಗಿ ಸ್ವೇಚ್ಛೆಯಿಂದ ಆಚರಣೆ ಪ್ರತಿಪಾದಿತವಾ ಗಿದೆ. ನಿಷಿದ್ಧವಾದದ್ದನ್ನು ಮಾಡಬೇಕೆಂದಲ್ಲ. ಯಾಕೆಂದರೆ 'ಅಚೋದನಾ' ಅನಿಷಿದ್ಧವಾದದ್ದನ್ನೇ ಜ್ಞಾನಿ ಮಾಡಬೇಕೆಂಬ ವಿಧಿಯೂ ಇಲ್ಲ. ಇಷ್ಟೇ ಇಲ್ಲದಂತೆ ಅಪವಾದದಂತೆ 'ಬ್ರಾಹ್ಮಣೋನಹಂತವ್ಯಃ' ಈ ಶೃತಿಯು ಆಯೋಗ್ಯ ಕರ್ಮವನ್ನು ನಿಷೇಧ ಮಾಡಿದೆ ಅದಕ್ಕೆ ಎಂಬ ಅರ್ಥ.

**೧೯) ಓಂ ಓಂ ಅನುಷ್ಠೇಯಂ ಬಾದರಾಯಣಃ ಸಾಮ್ಯಶೃತೇಃ ಓಂ**

'ಬಾದರಾಯಣಃ' ಶ್ರೀ ವ್ಯಾಸರು 'ಅನುಷ್ಠೇಯಂ ಸ್ವೇಚ್ಛೆಯಿಂದಲೂ ವೇದೋಕ್ತ ಅನುಷ್ಠಾನಯೋಗ್ಯ (ಸ್ವಲ್ಪ) ಕೆಲವು ಕರ್ಮಗಳನ್ನು ಆಚರಣೆ ಮಾಡುವುದರಿಂದ (ತಿಳಿದು)ಲೇ ಎಂದು 'ಯೇನಶ್ಯಾತ್' ಎಂಬ ಶೃತಿಯ ಅರ್ಥವೇ ವಿನಃ ಎಲ್ಲ ಕರ್ಮ ಮಾಡುವುದಕ್ಕಾಗಿ ಯಥೇಷ್ಟಾಚರಣದ ವಿಧಾನ ವಲ್ಲ ಎಂದು ತಿಳಿಯುತ್ತಾರೆ. ಯಾಕೆಂದರೆ 'ಸಾಮ್ಯ ಶೃತೇಃ' ಯಾವುದೇ ರೀತಿ ಯಿಂದ ಕಾರ್ಯಪ್ರವೃತ್ತನಾದರೂ ಕೂಡ 'ಈದೃಶ ಏವ' ಎಂದು ಸ್ವೇಚ್ಛಾಚರಣ ನಿಯಮವು ಅಜ್ಞಾನಿಗಳಿಗಲ್ಲ. ಜ್ಞಾನಿಗಳಿಗೆ ಮಾತ್ರವೆಂಬರ್ಥ, ವಾ ಶಬ್ದವು ಮೊದಲು ಹೇಳಿದ ಎರಡು ಪ್ರಕಾರಗಳಲ್ಲಿ ಇದಕ್ಕೆ (ಜ್ಞಾನಕ್ಕೆ) ಉತ್ತಮ ಪಕ್ಷದ ದ್ಯೋತಕವಾಗಿದೆ.

**೨೧) ಓಂ ಓಂ ಸ್ತುತಿಮಾತ್ರಮುಪಾದಾನಾದಿತಿಚೇನ್ನಾಪೂರ್ವತ್ವಾತ್ ಓಂ**

'ಕೇನಸ್ವಾತ್' ಎಂಬುದು ಪೂರ್ವೋಕ್ತ ಶೃತಿಯು ಸ್ತುತಯೇ ವಿನಃ ಸರ್ವಾಧಿಕಾರಿತೆ ಹೇಳುವುದಿಲ್ಲ. ಯಾಕೆಂದರೆ 'ಉಪಾದಾನಾತ್' ಜ್ಞಾನಿಗಳೂ ಕೂಡ 'ಸಂಧ್ಯಾಮುಪಾಸೀತ' ಇತ್ಯಾದಿ ಸಾಧಾರಣವಾದ ವಿಧಿಯನ್ನು ಅನುಸರಿ ಸಬೇಕೆಂದರೆ ಆ ವಿಧಿ ಅವರಿಗಿಲ್ಲ. ಯಾಕೆಂದರೆ 'ಅಪೂರ್ವತ್ವಾತ್' ಅವರು ಆ ಶಬ್ದದಿಂದ ವರ್ಣಿತನಾದ ಪರಮಾತ್ಮನ ಅಧೀನರಾದ್ದರಿಂದ ಎಂಬ ಅರ್ಥ. ಆದರೂ ಕೂಡ ಜ್ಞಾನಿಗಳಿಗೆ ಸ್ವೇಚ್ಛಾಚರಣವೆಂಬ ವಿಧಿ ಇಲ್ಲದಿದ್ದರೂ ಕೂಡ ಎಲ್ಲ ನಿಯಮದಿಂದ ಅತಿದೂರರಾಗುವ ಪ್ರಸಂಗ ಬರುವುದರಿಂದ ಅವರಿಗೆ ಪರಮಾತ್ಮಾಧೀನತ್ವ ಬಾರದಿರಲಿ ಎಂಬ ಅಭಿಪ್ರಾಯ.

**೨೨) ಓಂ ಓಂ ಭಾವಶಬ್ದಾಚ್ಚ ಓಂ**

'ಭಾವಃ' ಇಚ್ಛಾಭಾವ ಶಬ್ದದಿಂದ ಘಟಿತವಾದ 'ಯಥಾವಿಧಾನಂ' ಎಂಬ ಶೃತಿಯಿಂದಲೂ ಕೂಡ 'ಕೇನಸ್ಯಾತ್' ಈ ರೀತಿ ಯಥೇಷ್ಟಾಚರಣವಿಧಿಯು ಎಂಬ ಅರ್ಥ.

## ೨೩) ಓಂ ಓಂ ಪಾರಿಪ್ಲವಾರ್ಥಾ ಇತಿಚೇನ್ನವಿಶೇಷಿತತ್ವಾತ್ ಓಂ

ನಿಯಮಿತವಾಗಿ ಎಲ್ಲ ಧರ್ಮಗಳ ಆಚರಣ ಮಾಡಲೇಬೇಕೆಂಬ ನಿಯಮವೆಂದ ಪಕ್ಷದಂತೆ ಅನುಷ್ಠಾನದ ಮಧ್ಯದಲ್ಲಿ ಕೆಲವು ಧರ್ಮ ಆಚರಣೆ ಸ್ವೇಚ್ಛೆಯಿಂದಲೇ ಆಗುತ್ತದೆ ಎಂಬ ಪಕ್ಷಕ್ಕೆ ಹಾಗೂ ಸ್ವೇಚ್ಛಾಚರಣರೂಪ ವಿಧಿ ಎಂಬ ಪಕ್ಷಕ್ಕೂ ಪರಸ್ಪರ ವಿರುದ್ಧತೆ ತೋರುತ್ತದೆ. 'ಏನಸ್ಯಾತ್' ಇತ್ಯಾದಿಗಳು 'ಪಾರಿಪ್ಲವಾರ್ಥಾಃ' ಅವ್ಯವತ ಅರ್ಥದ್ಯೋತಕಗಳೆಂದರೆ ಹಾಗೆ ಆಗಲಾರವು. ಏಕೆಂದರೆ 'ವಿಶೇಷಿತತ್ವಾತ್ ತ್ರೇಧಾಹಿ ಜ್ಞಾನಿನೋ ಹವಾ' ಈ ಶೃತಿಯಲ್ಲಿ ಜ್ಞಾನಿಗಳಲ್ಲಿ ವಿಧಿನಿಯತಾದಿಪದಗಳಿಂದ ವಿಶೇಷತೆಯನ್ನು ತೋರಿಸುವುದರಿಂದ ಆ ಜ್ಞಾನಿಗಳಲ್ಲಿಯೂ ಅನೇಕ ಪ್ರಾಕಾರತೆ ಇದೆ ಎಂದು ಹೇಳಿದ ಪ್ರಯುಕ್ತವಾಗಿ ಎಂಬ ಅರ್ಥ.

## ೨೪) ಓಂ ಓಂ ತಥಾಚೈಕವಾಕ್ಯೋಪಬಂಧಾತ್ ಓಂ

ಮೇಲೆ ಹೇಳಿದ ಮೂರು ಪಕ್ಷಾನುಸಾರಿಯಾದ ವಾಕ್ಯಗಳಿಂದ ಅಧಿಕಾರಿಗಳ ವ್ಯತ್ಯಾಸದಂತೆ ವಿರೋಧ ಬಾರದಂತೆ ಏಕವಾಕ್ಯತೆ ತರುವುದು ಯೋಗ್ಯವು. ಹಾಗೂ ಶೃತಿಗಳಿಗೆ ಏಕವಾಕ್ಯತಾ ಸಿದ್ಧಿಸಿದ ಮೇಲೆ 'ಏನಸ್ಯಾತ್' ಎಂಬ ವಾಕ್ಯಕ್ಕೂ ಕೂಡ 'ಏಕವಾಕ್ಯೋಪಬಂಧಾತ್ ಅಧಿಕಾರಿಭೇದದಿಂದ ವ್ಯವಸ್ಥಿತವಾದ ಅರ್ಥವೂ ಕೂಡಿಸುವುದರಿಂದ ಅಲ್ಲಿ ಪಾರಿಪ್ಲವಾರ್ಥತ್ವ ಯೋಗ್ಯವಾಗಿ ಕೂಡುವುದಿಲ್ಲವೆಂಬ ಅರ್ಥ. ಹಾಗೂ ಜೈಮಿನ್ಯಾಚಾರ್ಯರ ಮತವು ದೇವತೆಗಳ ಜ್ಞಾನ ವಿಷಯ 'ವಿಧಿರ್ವಾ' ಈ ಮತವು ವಿಧಿಜ್ಞಾನಿಗಳ ವಿಷಯವೆಂದು ಹೇಳುವುದರಿಂದ ವಿರೋಧ ಬರಲಾರದೆಂಬ ಅಭಿಪ್ರಾಯ.

## ೨೫) ಓಂ ಓಂ ಅತ ಏವಚಾಗ್ನೀಂಧನಾದ್ಯನಪೇಕ್ಷಾ ಓಂ

ಮೋಕ್ಷಸಾಧನಜ್ಞಾನವಾದ್ದರಿಂದ 'ಅಗ್ನೀಂಧನಾದ್ಯನಪೇಕ್ಷಾ' ಅಗ್ನಿಹೋ

ತ್ರಾದಿ ಸತ್ಕರ್ಮಗಳ ಅಪೇಕ್ಷಾ ಮೋಕ್ಷಾರ್ಥಿಗೆ ಬೇಕಿಲ್ಲ. ಯಾಕೆಂದರೆ 'ಅತ ಏವ' ಕಾಮಚಾರಿಗಳಾದವರಿಗೂ ಕೂಡ ಮೋಕ್ಷ ಸಿಗುವುದು ಎಂದು ಪ್ರಮಾಣದಿಂದ ಸಿದ್ಧವಾಗಿರುವುದರಿಂದ ಎಂಬ ಅರ್ಥ.

**೨೬) ಓಂ ಓಂ ಸರ್ವಾಪೇಕ್ಷಾ ಚ ಯಜ್ಞಾದಿ ಶೃತೇರಶ್ವವತ್ ಓಂ**

'ಅಶ್ವವತ್' ಯಾವ ರೀತಿ ಕುದುರೆಗಳು ವೇಗದಿಂದ ಹೋಗುವುದನ್ನು ಮಾತ್ರ ನೋಡುತ್ತಾವೋ ಊರಿಗೆ ಮುಟ್ಟುವ ಗುರಿ ಇಲ್ಲದೇ ಹಾಗೆಯೇ ಮೋಕ್ಷವು ಜ್ಞಾನೋತ್ಪತ್ತಿಯಾದ ಮೇಲೆಯೇ ಪ್ರಾಪ್ಯ 'ಸರ್ವಾಪೇಕ್ಷಾ' ಹಾಗೆಯೇ ಸರ್ವಧರ್ಮದ ಅಪೇಕ್ಷೆಯೂ ಜ್ಞಾನಕ್ಕೆ ಫಲಭೂತವಾದ ಮೋಕ್ಷ ಸಿಕ್ಕ ಮೇಲೂ ಇಲ್ಲ. ಯಾಕೆಂದರೆ 'ವಿವಿದಿಷಂತಿ ಯಜ್ಞೇನ' ಈ ಶೃತಿ ಇದ್ದ ಕಾರಣ ಎಂಬ ಅರ್ಥ.

**೨೭) ಓಂ ಓಂ ಶಮದಮಾದ್ಯುಪೇತಃ ಸ್ಯಾತ್ತಥಾಪಿತುತದ್ವಿಧೇಸ್ತದಂಗತ ಯಾತೇಷಾಮವಸ್ಯಾನುಷ್ಠೇಯತ್ವಾತ್ ಓಂ**

ಜ್ಞಾನದಿಂದಲೇ ಮೋಕ್ಷ ನಿಯತವೇ ಆಗಿದೆ. ಆದರೂ ಜ್ಞಾನಿಯಾದವನು 'ಶಮದಮಾದ್ಯುಪೇತಃ ಸ್ಯಾತ್' ಶಮದಮಾದಿಗಳಿಂದ ಮುಕ್ತನಾದವನಾಗಲೇಬೇಕು. ಯಾಕೆಂದರೆ 'ತದ್ವಿಧೇಃ ಆಚಾರ್ಯಾತ್' ಎಂಬ ಶೃತಿಯಿಂದ ಆ ಜ್ಞಾನಿಗೆ ಶಮಾದಿಗಳ ವಿಧಾನ ಮಾಡಿದೆ.

**೨೮) ಓಂ ಓಂ ಸರ್ವಾನ್ನಾನುಮಿತಿಶ್ಚಪ್ರಾಣಾತ್ಯಯೇತದ್ದರ್ಶನಾತ್ ಓಂ**

'ಚ' ನಿಶ್ಚಿತವಾಗಿಯೂ ಜ್ಞಾನಿಗಳಿಗೆ 'ಸರ್ವಾನ್ನಾನುಮತಿಃ ಯದಿಹವಾ ಅಪ್ಯೇನಚಿತ್' ಈ ಶೃತಿ ಪ್ರಕಾರವಾಗಿ ವಿಧಿ ನಿಷದ್ಧಗಳಾವವು ಯಾವುದು ಭಕ್ಷ್ಯ ಯಾವುದು ಆ ಭಕ್ಷ್ಯ ಇತ್ಯಾದಿಗಳ ಪರಿಜ್ಞಾನದಿಂದ ಅವುಗಳಲ್ಲಿ ಪ್ರವೃತ್ತಿನಿವೃತ್ತಿಗ

ಳಾಗುತ್ತವೆ ಎಂಬ ಶೃತಿಯಿಂದ 'ಪ್ರಾಣಾತ್ಯಯೇ' ಪ್ರಾಣವನ್ನು ಬಿಡುವ ಕಾಲ ದಲ್ಲಿ ಮಾತ್ರ ಈ ವಿಚಾರ ವಿಷಯದಲ್ಲಿಯೇ ವಿನಃ ಸರ್ವಕಾಲದಲ್ಲಲ್ಲ. ಯಾಕೆಂದರೆ 'ತದ್ದರ್ಶನಾತ್' ಅದಕ್ಕೋಸ್ಕರವಾಗಿಯೇ 'ನ ವಾ ಅಜೀವಿಷ್ಯಂ' ಈ ಶೃತಿ ಇದ್ದು ಅದರ ನಿಮಿತ್ತವಾದ ಕಾರಣ ನೋಡುವುದಕ್ಕೋಸ್ಕರವಾಗಿಯೂ ಎಂಬ ಅರ್ಥ.

**೨೯) ಓಂ ಓಂ ಅಬಾಧಾಚ್ಚ ಓಂ**

ಜ್ಞಾನಿಗಳು ನಿಷಿದ್ಧವಾದದ್ದನ್ನು ಮಾಡದಿದ್ದಲ್ಲಿ ಬಾಧಕವಿಲ್ಲ. ಆದರೂ ನಿಷಿದ್ಧವಾದದ್ದನ್ನು ಮಾಡಬಾರದೆಂದರ್ಥ.

**೩೦) ಓಂ ಓಂ ಅಪಿ ಸ್ಮರ್ಯತೇ ಓಂ**

ಅದನ್ನು ಮಾಡಿದರೂ ಅಲ್ಪಫಲವೂ ಕೂಡ 'ಅತೀತಾ' ಇತ್ಯಾದಿಗಳಿಂದ (ಸ್ಮೃತಿ) ನಿಷಿದ್ಧವಾದದ್ದನ್ನು ಮಾಡಬಾರದೆಂದು 'ಸ್ಮರ್ಯತೇ ಚ' ಸ್ಮರಣೆಗೆ ಬರುತ್ತದೆ. ಆದರೂ ಕೂಡ ಜ್ಞಾನಿಗಳಿಂದ ನಿಷಿದ್ಧವಾದದ್ದನ್ನು ಮಾಡಬಾರದೆಂದರ್ಥ.

**೩೧) ಓಂ ಓಂ ಶಬ್ದಶ್ಚಾತೋಽಕಾಮಚಾರೇ ಓಂ**

'ಯತಃ' ಯಾಕೆಂದರೆ ಆ ಕಾಮಚಾರೇ ನಿಷಿದ್ಧ ಕರ್ಮ ಮಾಡಿದರೂ ಕೂಡ 'ಶಬ್ದಃ ಸ ಯ ಏತದೇವಂ ವಿತ್' ಈ ರೀತಿ ವೇದವಿದೆ. 'ಅತೋಽಪಿ' ಈ ರೀತಿ ಇದ್ದರೂ ಕೂಡ ಜ್ಞಾನಿಯಾದವನು ನಿಷಿದ್ಧಕಾರ್ಯವೂ ಮಾಡಬಾರದೆಂದರ್ಥ.

**೩೨) ಓಂ ಓಂ ವಿಹಿತತ್ವಾಚ್ಚಾಶ್ರಮಕರ್ಮಾಪಿ ಓಂ**

'ಚ' ಒಟ್ಟಾರೆ 'ಅಪಿ' ವರ್ಣಾಶ್ರಮ ಧರ್ಮದಲ್ಲಿಯೂ ಜ್ಞಾನಿಯಾದ ವನು ಕೇವಲ ನಿಷಿದ್ಧವಾದ ಅಯೋಗ್ಯವಾದದ್ದನ್ನು (ಕೆಲಸ) ಮಾಡಬಾರದು.

ಆದರೆ ಆಶ್ರಮಧರ್ಮೋಽಪಿ ವರ್ಣಾಶ್ರಮೋಚಿತಕಾರ್ಯ ಮಾಡುತ್ತಿದ್ದರೂ ಫಲ ಪೂರ್ಣತೆಯ ನಿಮಿತ್ತ ಮಾಡಬೇಕು. ಯಾಕೆಂದರೆ 'ವಿಹಿತತ್ವಾತ್ ಪಶ್ಯನ್ನಪಿ' ಎಂಬ ಶೃತಿಯಲ್ಲಿ ವಿಹಿತವಾಗಿರುವುದರಿಂದವೆಂಬರ್ಥ.

**೩೩) ಓಂ ಓಂ ಸಹಕಾರಿತ್ವೇನ ಚ ಓಂ**

ಜ್ಞಾನಿಯಿಂದ ಸಂಪೂರ್ಣ ಫಲಸಿದ್ಧ್ಯರ್ಥವಾಗಿ ಸತ್ಕರ್ಮಗಳನ್ನು ಮಾಡಲೇಬೇಕು. ಯಾಕೆಂದರೆ 'ಯಥಾರಾಜ್ಞಃ' ಈ ಶೃತಿಯಲ್ಲಿ ಮೋಕ್ಷಫಲಕ್ಕೆ ಅತಿಶಯವಾದ ಕರ್ಮಗಳು ಜ್ಞಾನಕ್ಕೆ 'ಸಹಕಾರಿತ್ವೇನ' ಸಹಕಾರಿಗಳಾಗಿರುತ್ತವೆ ಎಂಬ ಅರ್ಥ.

**೩೪) ಓಂ ಓಂ ಸರ್ವಥಾಪಿ ತು ತ ಏವೋಭಯಲಿಂಗಾತ್ ಓಂ (ಉಭಯಲಿಂಗಾಧಿಕರಣಂ)**

'ಸರ್ವಥಾಪಿ ದೇಶ' -ಕಾಲ-ಗುರುಗಳು ಉಪದೇಶ ಈ ಮೊದಲಾದ ಸಾಧನಸಂಪತ್ತಿಗಳಿದ್ದರೂ ಕೂಡ ಯಾರು ಜ್ಞಾನಯೋಗ್ಯರೋ 'ತ ಏವ' ಅವರೇ ಜ್ಞಾನವನ್ನು ಪಡೆಯುತ್ತಾರೆ. ಅಯೋಗ್ಯರಿಗೆ ಸಿಗುವುದೇ ಇಲ್ಲ. ಯಾಕೆಂದರೆ 'ಉಭಯಲಿಂಗಾತ್' ಇಬ್ಬರೂ ಯೋಗ್ಯಾಯೋಗ್ಯರಿಗೂ ಏಕಕಾಲದಲ್ಲಿ ಯೋಗ್ಯ ಬ್ರಹ್ಮದೇವರ ಕಡೆಯಿಂದ ಉಪದೇಶವಾದರೂ, ಇಂದ್ರ-ವಿರೋಚನರಲ್ಲಿ ಇಂದ್ರನಿಗೆ ಯೋಗ್ಯ ಜ್ಞಾನ, ವಿರೋಚನನಿಗೆ ವಿಪರೀತ ಜ್ಞಾನವಾಗಿರುವುದೇ ಈ ಪ್ರಸಂಗಕ್ಕೆ ಜ್ಞಾಪಕವಾದದ್ದೆಂದು ತೋರುವುದೆಂಬುದರ್ಥ.

**೩೫) ಓಂ ಓಂ ಅನಭಿಭವಂ ಚ ದರ್ಶಯತಿ ಓಂ**

ಯಾಕೆಂದರೆ 'ಚ' - 'ದೇಚಿವಿಮೇವಸಂಪತ್ತಿ' ಎಂಬ ಶೃತಿಯು ಕೇವಲ ಇದರಿಂದ ಯೋಗ್ಯಾಯೋಗ್ಯ ಸ್ವರೂಪ ಮಾತ್ರ ಅವರದು ಪ್ರದರ್ಶನವಾಗುವು

ದಿಲ್ಲ. ಆದರೆ 'ಅನಭಿಭವಂ ಚ' ಸ್ವಭಾವಕ್ಕನುಸಾರ ಪುರಸ್ಕಾರ-ತಿರಸ್ಕಾರವೂ ಹುಟ್ಟುತ್ತವೆಂವೆಂಬುದು 'ದರ್ಶಯತಿ' ಪ್ರತಿಪಾದನ ಮಾಡಲಾಗುತ್ತದೆ. ಅದಕ್ಕೆ ಅಯೋಗ್ಯರಿಗೆ ಸರ್ವಥಾ ಜ್ಞಾನ ಪ್ರಾಪ್ತಿಯಾಗಲಾರದೆಂದರ್ಥ.

**೩೬) ಓಂ ಓಂ ಅಂತರಾ ಚಾಪಿ ತು ತದ್ದೃಷ್ಟೇಃ ಓಂ**

ಮತ್ತು 'ಚ' 'ತು' ವಿಶೇಷವಾಗಿ 'ಅಂತರಾ' ಯೋಗ್ಯ-ಅಯೋಗ್ಯ ಜ್ಞಾನಗಳ ಮಧ್ಯದಲ್ಲಿ ಇರುವ ನಿತ್ಯ ಸಂಸಾರಿಗಳಲ್ಲಿಯೂ ಕೂಡ 'ಅಪಿ' ಮಿಶ್ರ ಸ್ವಭಾವದ ಉತ್ಪತ್ತಿಯಾದರೂ ಆಗುತ್ತದೆ. ಯಾಕೆಂದರೆ, 'ತದ್ದೃಷ್ಟೇಃ' ಅವರಿಗೆ ಆ ಮಿಶ್ರಜ್ಞಾನ ವಿಷಯದಲ್ಲಿಯೇ ಅವರ (ದೃಷ್ಟಿ) ವಿಚಾರವಿರುವುದರಿಂದ ಅದೇ ಅವರಿಗೆ ತೋರುತ್ತದೆ ಎಂಬ ಅರ್ಥ.

**೩೭) ಓಂ ಓಂ ಅಪಿಸ್ಮರ್ಯತೇ ಓಂ**

ಗೀತೆಯಲ್ಲಿ ಶ್ರೀಕೃಷ್ಣನಿಂದ 'ಅಸುರಾ ಆಸುರೇಣೈವ' ಇತ್ಯಾದಿಗಳಲ್ಲಿ ಅವರವರ ಸ್ವಭಾವದಲ್ಲಿ ಬದಲಾವಣೆ (ಅನಭಿಭವ) ಆಗುವುದಿಲ್ಲವೆಂಬುದಾಗಿ 'ಸ್ಮರ್ಯತೇ ಅಪಿ' ಸ್ಮೃತಿಯಿಂದಲೂ ಸ್ಮರಣೆ ಮಾಡಿ ಕೊಡುವನು ಈ ಅರ್ಥವಿದೆ.

**೩೮) ಓಂ ಓಂ ವಿಶೇಷಾನುಗ್ರಹ ಚ ಓಂ**

'ಚ' ಅನೇಕ ಯುಕ್ತಿಗಳಿಂದಲೂ ಯಾಕೆಂದರೆ 'ಶೃಣ್ವೇವೀರ' ಈ ವೇದದಲ್ಲಿ ದೇವತೆಗಳ ಮೇಲೆ ಪರಮೇಶ್ವರನ ವಿಶೇಷ ಅನುಗ್ರಹವನ್ನು ತೋರುಸುತ್ತದೆ. ಅದಕ್ಕೆ ದೇವತೆಗಳಿಗೆ ಮಾತ್ರ ಯೋಗ್ಯ ಜ್ಞಾನ ಆದರಿಂದ ಬರುವ ಫಲ ಸಿಗುತ್ತದೆ. ಬೇರೆಯವರಿಗೆ ಇಲ್ಲವೇ ಇಲ್ಲವೆಂಬ ಅರ್ಥ.

**೩೯) ಓಂ ಓಂ ಅತಸ್ತ್ವಿತರಜ್ಜ್ಯಾಯೋಲಿಂಗಾಚ್ಚ ಓಂ**

'ತು' ನಿಶ್ಚಿತವಾಗಿಯೂ, ಅದಕ್ಕೆ ದೇವಭಾಗದಕಿಂತಲೂ ಅಸುರರ ಭಾಗದಲ್ಲಿ ಯಾವಾಗಲೂ ಊನತೆ ಆಗುವುದೇ ಇಲ್ಲ. ಹೇಗಂದರೆ 'ಇತರವತ್'

ಅಸುರರ ಗುಂಪಿನಂತೆ, ಅದಕ್ಕೆ ದೇವತೆಗಳ ಗುಂಪೇ 'ಜ್ಯಾಯಃ' ಅಧಿಕವಾಗಿರುತ್ತದೆ. ಯಾಕೆಂದರೆ 'ಲಿಂಗಾತ್', 'ತಸ್ಮಾನ್ನಜನತಾಮಿಯಾತ್' ಈ ರೀತಿ ಜನಸಮೂಹ ಪ್ರವೇಶ ನಿಷೇಧ ಮಾಢಿರುವುದರಿಂದ ಅದರ ವಿರುದ್ಧತೆಯಿಂದ ಹೋದರೆ 'ಅನುಪಪತ್ತಿಲಿಂಗಾತ್' ದೋಷ ಬರುವ ಕಾರಣದಿಂದ 'ಚ' ಶಬ್ದದಿಂದ 'ತತಃ ಕನೀಯಸಾ' ಎಂಬ ಶೃತಿಯಿಂದಲೂ ಎಂಬ ಅರ್ಥ.

## ೪೦) ಓಂ ಓಂ ತದ್ಭೂತಸ್ಯ ತು ತದ್ಭಾವೋ ಜೈಮಿನೇರಪಿ ನಿಯಮಾತದ್ರೂಪಾಭಾವೇಭ್ಯಃ ಓಂ

ಯಾರು ದೇವಸ್ವಭಾವದವರೋ ಅವರಿಗೆ ಮಾತ್ರ 'ತದ್ಭೂತಸ್ಯ ತು ತದ್ಭಾವಃ' ದೇವಸ್ವಭಾವವು ಎಂದು ಜೈಮಿನ್ಯಾಚಾರ್ಯರಿಂದ ಕೂಡ ಸಿದ್ಧವಾಗಿದೆ. ಯಾಕೆಂದರೆ 'ನಿಯಮಾತ್ತದ್ರೂಪಾಭಾವೇಭ್ಯಃ' ಚ ಶಬ್ದದಿಂದ ಸೂಚಿತವಾದ 'ಅಸುರಾಃ' ಎಂಬ ಶೃತಿಯಿಂದ 'ಯೋಯದ್ರೂಪಃ' ಎಂದು ಅತದ್ರೂಪ ಶಬ್ದದಿಂದ ಹೇಳಿದಂತೆ ಬೇರೆಯವರಿಗೆ ಬೇರೆ ರೂಪವಿಲ್ಲವೆಂಬ ಶೃತಿಯಿಂದ 'ಅಭಾವಃ' (ಉತ್ಪತ್ತಿ) ಹುಟ್ಟು ಇಲ್ಲ. ದೇವಾಸುರರಿಗೆ (ಅನ್ಯಥಾ) 'ತಂ ಭೂತಿ' ಎಂಬ (ಹುಟ್ಟು) ಎಂಬ ಶಬ್ದ ಪ್ರತಿಪಾದ್ಯವಾದ ಶೃತಿಗಳಿಂದ ಎಂಬ ಅರ್ಥ (ದೇವಾಸುರರಲ್ಲಿ ವಿಪರೀತ ಜನನವಿಲ್ಲ).

## ೪೧) ಓಂ ಓಂ ನಚಾಧಿಕಾರಕಮಪಿ ಪತನಾನುಮಾನಾತ್ತದಯೋಗಾತ್ ಓಂ (ಆಧಿಕಾರಕಾಧಿಕರಣಂ)

'ಚ' ಜ್ಞಾನಾರ್ಥಿಗಳಿಗೆ ಆಯೋಗ್ಯ ಆಕಾಂಕ್ಷಾ ಬಾರದ ಇತಿ ಕರ್ತವ್ಯತಾ ಇದರ ಅಂತರವನ್ನು ಸೂಚಿಸುವದೆಂದರ್ಥ. 'ಅಧಿಕಾರಿಕಮಪಿ' ದೇವತಾ ಪದವಿ ಇದ್ದರೂ ಅದರ ವಿರುದ್ಧವಾದದ್ದನ್ನು ಅಪೇಕ್ಷೆ ಮಾಡುವುದಿಲ್ಲ. ಭಗವಂತನ ಐಶ್ವರ್ಯಾದಿ ಗುಣಗಳನ್ನು ಮಾತ್ರ ಸರ್ವಥಾ ಅಪೇಕ್ಷೆ ಮಾಡುವುದೇ ಇಲ್ಲ ಎಂಬು

ದರ ಸೂಚಕವೇ 'ಅಪಿ' ಶಬ್ದ. ಯಾಕೆಂದರೆ 'ಪತನಾನುಮಾನಾತ್' ಆಯೋಗ್ಯವಾದದ್ದನ್ನು ಅಪೇಕ್ಷಿಸಿದರೆ ಕೆಳಗೆ ಬೀಳುವುದಾಗಿ ಸ್ಮೃತಿಯಲ್ಲಿ ಹೇಳಿರುವುದರಿಂದ (ಸಿದ್ಧವಾದ್ದರಿಂದ) ಅದಕ್ಕೆ 'ತದಯೋಗಾತ್' ಆಯೋಗ್ಯ ಆಕಾಂಕ್ಷೆಯನ್ನು ಮಾಡುವುದು ಅಯುಕ್ತವಾಗಿರುವುದರಿಂದ ಎಂದು ಅರ್ಥ.

**೪೨) ಓಂ ಓಂ ಉಪಪೂರ್ವಮಪೀತ್ಯೇಕೇಭಾವಶಮನವತ್ತದುಕ್ತಂ ಓಂ**

'ಭಾವಶಮನವತ್' ಯಾವಾಗಲೂ ಮನಸ್ಸಿನಲ್ಲಿ ಭಗವಂತನನ್ನು ಆಲೋಚನೆ (ಆಧಾನ) ಮಾಡುವ ಋಷಿ ಪದವಿಯನ್ನೂ ಯಾವರೀತಿಯಿಂದ 'ನಾಕಾಂಕ್ಷಂ' ಅಪೇಕ್ಷೆ ಮಾಡುವುದಿಲ್ಲ ಅಂದ ಮೇಲೆ 'ಅಪಿ' ದೇವತಾ ಪದವನ್ನು ಹೇಗೆ ಅಪೇಕ್ಷೆ ಮಾಡುವುದು ಎಂದು ಕೆಲವು ಶಾಖೆಯವರು ತಿಳಿಯುತ್ತಾರೆ. ಯಾಕೆಂದರೆ 'ಯತೋ ಜ್ಞಾನಾರ್ಥಿನಾಂ ಯಥಾ' ಎಂದು ಇಂದ್ರದ್ಯುಮ್ನ ವೃತಿಯಲ್ಲಿ ಹೇಳಿದೆ. 'ತದುಕ್ತಂ' ಆ ರೀತಿ ಹೇಳಲಾಗಿದೆ. ಅದಕ್ಕೋಸ್ಕರವಾಗಿ ಎಂಬ ಅರ್ಥ.

**೪೩) ಓಂ ಓಂ ಬಹಿಸ್ತೂಭಯಥಾಪಿ ಸ್ಮೃತೇರಾಚಾರಾಚ್ಚ ಓಂ**

'ಬಹಿಸ್ತು ದೇವಾದಿ' ಪದದಿಂದ ಬೇರೆ ಕಡೆ ಜ್ಞಾನಭಕ್ತಿ ಈ ವಿಷಯಗಳಲ್ಲಿ 'ಉಭಯಥಾ' ಅಪೇಕ್ಷೆ ಪಟ್ಟರೂ ಪಡದಿದ್ದರೂ ದೋಷವಿಲ್ಲ. ಯಾಕೆಂದರೆ 'ದೇವರ್ಷಿ ಪದ' ಎಂದು 'ಸ್ಮೃತೇರಾಚಾರಾಚ್ಚ ನಾನಾತ್ವ' ಎಂಬ ಶುಭ ಆಚಾರ ವಿಧಾಯಕವಾದ ಶಬ್ದದಿಂದಲೂ ಈ ಅರ್ಥ.

**೪೪) ಓಂ ಓಂ ಸ್ವಾಮಿನಃ ಫಲಶೃತೇರಿತ್ಯಾತ್ರೇಯಃ ಓಂ (ಫಲಶೃತ್ಯಧಿಕರಣಂ)**

ಸಮುದಾಯ ದ್ಯೋತಕವಾಗಿ 'ಸ್ವಾಮಿನಃ' ಎಂದು ಏಕವಚನವು. ಆದರೂ ಮುಖ್ಯದೇವತೆಗಳಿಗೆ ಮಾತ್ರ ಫಲವು ಜ್ಞಾನದ ಫಲ ಆಗುತ್ತದೆ. ಆದರೆ

ಪ್ರಜರಿಲ್ಲ. ಹೀಗೆಯಾಕೆಂದರೆ ಆ ದೇವತೆಗಳೆಲ್ಲರೂ ಜ್ಞಾನಕ್ಕೆ (ಪ್ರೇರಕ) ಸ್ವಾಮಿಯಾಗಿರುವುದರಿಂದ 'ಯದು ಹಿ ಚ' ಎಂದು ಅವರಿಗೆ 'ಫಲಶೃತಿಃ' ಇತ್ಯಾದಿ ಆತ್ರೇಯಾಚಾರ್ಯರು ಒಪ್ಪುತ್ತಾರೆ ಎಂಬ ಅರ್ಥ.

**೪೫) ಓಂ ಓಂ ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈಹಿ ಪರಿಕ್ರೀಯತೇ ಓಂ**

'ಹಿ' ಯಾಕೆಂದರೆ 'ತಸ್ಮೈ' ಆ ದೇವತೆಗಳಿಂದ 'ಪರಿಕ್ರೀಯತೆ' ಪ್ರಜರ ದ್ವಾರಾ ಜ್ಞಾನವನ್ನು ಸಂಪಾದಿಸುತ್ತಾರೆ. ಅದಕ್ಕೆ 'ಆರ್ತ್ವಿಜ್ಯ ಯಜ್ಞ' ಮುಗಿಯುವವರಗೆ ಋತ್ವಿಜರಿಗೆ ಯಜ್ಞದಲ್ಲಿ ಅಲ್ಪಫಲ ಬಂದಂತೆ ಪ್ರಜರಿಗೆ ಫಲವೆಂದು ಔಡುಲೋಮಿ ಆಚಾರ್ಯರು ಹೇಳುತ್ತಾರೆ ಎಂಬ ಅರ್ಥ.

**೪೬) ಓಂ ಓಂ ಸಹಕಾರ್ಯಂತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್ ಓಂ**

'ತದ್ವತೋ' ಪ್ರಜಾನುರಾಗಿ ರಾಜ ಶಿಷ್ಯನ ಮೇಲೆ ಕೃಪೆ ಇರುವ ಗುರುವಿನಂತೆ. 'ವಿಧ್ಯಾದಿವತ್' ಆಜ್ಞೆಮಾಡುವಂತೆ ಹೇಗೆ ರಾಜಾ ಪ್ರಜರಿಗೆ. ಗುರುಶಿಷ್ಯನಿಗೆ ವಿದ್ಯೆ ಕಾರ್ಯದ ಸಲುವಾಗಿ (ವಿಧಾನ) ಕಟ್ಟಳೆ ಮಾಡಿದಾಗ್ಗೆ ಅದರ ಫಲಕ್ಕೆ ಅವರಿಬ್ಬರು ಹೇಗೆ ಜ್ಞಾನ-ಐಶ್ವರ್ಯ ರೂಪಫಲ ಪಡೆಯುವಂತೆ. 'ಸಹಕಾರ್ಯಂತರ ವಿಧಿಃ' ದೇವತೆಗಳಿಗೆ ಅನುಗ್ರಹಿಸುವ ವಿಶೇಷ ಸಹಕಾರದಿಂದ ಕಾರಣವು ಎಂದು 'ಪಕ್ಷೇಣ ತೃತೀಯಂ' ಆತ್ರೇಯ, ಔಡುಲೋಮಿಯರಕಿಂತ ಭಿನ್ನ (ಮೂರನೇಯದಾದ್ದು) ಇದೇ ಬಾದರಾಯಣಾಚಾರ್ಯರ ಪಕ್ಷ ಈ ರೀತಿ ಅರ್ಥ.

**೪೭) ಓಂ ಓಂ ಕೃತ್ಸ್ನಭಾವಾತ್ತುಗೃಹೀಣೋಪಸಂಹಾರಃ ಓಂ (ಕೃತ್ಸ್ನಭಾವಾಧಿಕರಣಂ)**

ಯಾಕೆಂದರೆ ಕುಟುಂಬೆ ಎಂಬ ಶೃತಿಯಲ್ಲಿ 'ಗೃಹಿಣಃ' ಗೃಹಸ್ಥರಿಗೆ ಮಾತ್ರ ಮೋಕ್ಷವೆಂದು ಪರ್ಯವಸಾನ ಮಾಡಿದೆ. 'ಕೃತ್ಸ್ನಭಾವಾತ್' ಪೂರ್ಣಗೃಹಸ್ಥರಾ

ದ ದೇವತೆಗಳನ್ನುದ್ದೇಶಿಸಿಯೇ. ಅದಕ್ಕೆ ಶೃತಿಗೆ ವಿರೋಧವಾಗದಂತೆ ಯತಿಗಳಿಗೆ ಮಾತ್ರ ಸರ್ವಶ್ರೇಷ್ಠಯತ್ಯಾಶ್ರಮವೆಂಬ ಅರ್ಥದಿಂದ ಹೇಳಿದೆ.

**೪೮) ಓಂ ಓಂ ಮೌನವದಿತರೇಷಾಮಪ್ಯುಪದೇಶಾತ್ ಓಂ**

'ಮೌನವತ್' ಯತಿತ್ವಕ್ಕೇ 'ಇತರೇಷಾಂ' ಬೇರೆ ಆಶ್ರಮ ಧರ್ಮಗಳ ಕ್ಕಿಂತಲೂ ಶ್ರೇಷ್ಠವೆಂದು 'ಉಪದೇಶಾತ್', 'ದೇವಾ ಏವ ಬ್ರಹ್ಮಚಾರಣಃ' ಈ ರೀತಿ ಶೃತಿಯಲ್ಲಿ ಹೇಳಿದ ಕಾರಣ. ಎಲ್ಲ ಆಶ್ರಮಿಗಳಲ್ಲಿಯೂ ದೇವತೆಗಳಿಗೇ ಉತ್ತ ಮತ್ವವಿದೆ ಎಂದು ತಿಳಿಯಬೇಕೆಂದರ್ಥ.

**೪೯) ಓಂ ಓಂ ಅನಾವಿಕುರ್ವನ್ನನ್ವಯಾತ್ ಓಂ (ನ್ವಯಾಧಿಕರಣಂ)**

ಗುರುಗಳು ಸಭೆ-ಸಮಾರಂಭಗಳಲ್ಲಿ ಅನಾವಿಷ್ಕುರ್ವನ್ ಎದುರುಬಾರದೇ ಶಿಷ್ಯರಿಗೆ ವಿದ್ಯೋಪದೇಶ ಮಾಡುತ್ತಾರೆ. ಯಾಕೆಂದರೆ 'ಅನ್ವಯಾತ್' ಅಯೋ ಗ್ಯರಿಗೂ ಕೂಡ ಜ್ಞಾನಪ್ರಾಪ್ತಿಯಾದರೆ ಅತಿಪ್ರಸಂಗರೂಪಯುಕ್ತಿಯಿಂದ ಎಂಬರ್ಥ.

**೫೦) ಓಂ ಓಂ ಐಹಿಕಮಪ್ರಸ್ತುತ ಪ್ರತಿಬಂದೇ 'ತದ್ದರ್ಶನಾತ್ ಶೃತ್ವಾ'**

ಈ ಶೃತಿಯಲ್ಲಿ ಆ ರೀತಿ ಪ್ರತಿಪಾದನೆ ಮಾಡಿದ್ದಾರೆ ಈ ರೀತಿ ಅರ್ಥ.

**೫೧) ಓಂ ಓಂ ಏವಮು ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದ ವಸ್ಥಾದೃತೇಃ ಓಂ (ಮುಕ್ತಿಫಲಾಧಿಕರಣಂ)**

ಹಾಗೆಯೇ ಯಾವರೀತಿ ಜ್ಞಾನೋಪದೇಶ ಪಡೆಯುವುದರಲ್ಲಿ ನಿಯಮ ವಿಲ್ಲವೋ ಹಾಗೆಯೇ ಮುಕ್ತಿಯಲ್ಲಿಯೂ ನಿಯಮವಿಲ್ಲ. 'ಮುಕ್ತಿಫಲಾನಿ ಯಮಾಃ' ಆದರೆ ಪ್ರಾರಬ್ಧ ಕರ್ಮವಿಲ್ಲದೇ ಇದ್ದ ಪಕ್ಷದಲ್ಲಿ ಅದೇ ಜನ್ಮದಲ್ಲಿಯೇ ಶರೀರ ನಾಶವಾದ ಕೂಡಲೇ ಆಗಬಹುದು. ಇನ್ನೂ ಪ್ರಾರಬ್ಧ ಕರ್ಮವಿದ್ದರೆ

ಮಾತ್ರ ಆ ಪ್ರಾರಬ್ಧ ಕರ್ಮ ನಾಶವಾದ ಮೇಲೆಯೇ ಮೋಕ್ಷಪ್ರಾಪ್ತಿಯಾಗುತ್ತದೆ. ಹೀಗೆ ಯಾಕೆ ಕಲ್ಪನೆ ಮಾಡುವಿರೆಂದರೆ ಅದರಕಿಂತಲೂ ಜ್ಞಾನಿಯಾದ ಮೇಲೆ ಜನ್ಮಾಂತರ ಅದರ ನಂತರ ಜ್ಞಾನ ಹೀಗೆ ಹೇಳುತ್ತ ಯಾವಾಗಲೂ ಮುಕ್ತಿಯೇ ಆಗುವುದಿಲ್ಲವೆಂದು (ಹೇಳಿರಿ) ಕಲ್ಪನೆ ಮಾಡಿರಿ ಎಂದರೆ ಹೇಳುತ್ತಾರೆ. 'ತದಿತಿ' 'ಸತ್ಯಾಂ ಬ್ರಹ್ಮಸಂಸ್ಥೋ' ಈ ಶೃತಿಯಲ್ಲಿ ಆ ಬ್ರಹ್ಮನಲ್ಲಿ ಆಸಕ್ತನಾದವನಿಗೆ (ಅವಸ್ಥಿತ) ಆ ಬ್ರಹ್ಮಜ್ಞಾನಿಗೇ ಮೋಕ್ಷವೆಂದು 'ಅವಧೃತೇಃ' 'ಅಮೃತತ್ವಮೇತಿ' ಎಂದು ಮೋಕ್ಷಫಲವನ್ನು (ಅವಧಾರಣ) ಹೇಳಿರುವುದರಿಂದೆಂದರ್ಥ. ಅದಕ್ಕೆ ಪ್ರತಿಬಂಧಕ ಕಲ್ಪನೆ ಎಂಬ ಅಭಿಪ್ರಾಯ. ಹೇಳಿರುವ ಈ ಅಧ್ಯಾಯದ ಅರ್ಥಕ್ಕೆ ಪ್ರಸಿದ್ಧತೆ (ದಾರ್ಢ್ಯತೆ)ಯನ್ನು ಸೂಚಿಸುವುದಕ್ಕೆ ದ್ವಿರುಕ್ತಿ ಎಂದು ತಿಳಿಯಬೇಕು.

**ಇತಿ ಶ್ರೀಜಗನ್ನಾಥಯತಿಕೃತಾಯಾಂ ಸೂತ್ರದೀಪಿಕಾಯಾಂ ತೃತೀಯಾಧ್ಯಾಯಸ್ಯ ಚತುರ್ಥಃ ಪಾದಃ ತೃತೀಯಾಧ್ಯಾಯಃ ಸಮಾಪ್ತಿಃ**

**ಶ್ರೀಸೂತ್ರದೀಪಿಕಾಯಾಂ ಚತುರ್ಥಾಧ್ಯಾಯಸ್ಯ ಪ್ರಥಮಪಾದಃ ಪ್ರಾರಂಭಃ**

**ಉಮರ್ಜಿ ಪ್ರಲ್ಹಾದನಿಂದ ಕೃತಕನ್ನಡ ವ್ಯಾಖ್ಯಾನದಲ್ಲಿ ಮೂರನೇ ಅಧ್ಯಾಯವು ಮುಗಿಯಿತು.**

**೧) ಓಂ ಆವೃತ್ತಿರಸಕೃದುಪದೇಶಾತ್ ಓಂ (ಆವೃತ್ಯಧಿಕರಣಂ)**

ಜ್ಞಾನಪ್ರಾಪ್ತಿಯಾಗುವುದಕ್ಕೋಸ್ಕರವಾಗಿ 'ಆವೃತ್ತಿಃ' ಪುನಃ ಪುನರಾವೃತ್ತಿಯನ್ನು ಮಾಡಬೇಕು. ಯಾಕೆಂದರೆ 'ಅಸಕೃದುಪದೇಶಾತ್' ಶ್ವೇತಕೇತು ಎನ್ನುವರಿಗೆ ಉದ್ದಾಲಕ ಮಹರ್ಷಿಗಳು ಪರತತ್ತ್ವದ ಉಪದೇಶವನ್ನು ಮೇಲಿಂದ ಮೇಲೆ ಮಾಡುವುದರಿಂದ ದಾರ್ಢ್ಯತೆ ಹುಟ್ಟುತ್ತದೆ. ಅದಕ್ಕೆ ಎಂದರ್ಥ.

**೨) ಓಂ ಓಂ ಲಿಂಗಾಚ್ಚ ಓಂ**

ಭೃಗು ಋಷಿಗಳು ಕೇಳಿರುವುದನ್ನು ಪುನರಾವರ್ತಿ ಮಾಡುವುದರಿಂದ (ಅಪರೋಕ್ಷತಃ) ಪ್ರತ್ಯಕ್ಷ ಪಡೆದದ್ದರಿಂದ 'ಲಿಂಗದರ್ಶನ' ಆವೃತ್ತಿ ಮಾಡಬೇಕೆಂದರ್ಥ.

**೩) ಓಂ ಓಂ ಆತ್ಮೇತಿತೂಪಗಚ್ಛಂತಿಗ್ರಾಹಯಂತಿ ಚ ಓಂ (ಆತ್ಮಾಧಿಕರಣಂ)**

ಮತ್ತು 'ಆತ್ಮಾ' ವಿಷ್ಣುವೇ ನನ್ನ ಸರ್ವರ ಸ್ವಾಮಿ ಎಂದು ಉಪಾಸನೆ ಮಾಡುವುದೇ ಮುಖ್ಯ ಯಾಕೆಂದರೆ ಯಾವ ಜ್ಞಾನಿಯು ಆ ರೀತಿ 'ಉಪಗಚ್ಛಂತಿ' ತಿಳಿದು ಉಪಾಸನೆಯನ್ನು ತಾವು ಮಾಡಿ ಬೇರೆ ಶಿಷ್ಯರಿಗೂ 'ಗ್ರಾಹಯಂತಿ' ಉಪದೇಶ ಮಾಡುತ್ತಾರೋ ಅದಕ್ಕೋಸ್ಕರವಾಗಿ ಎಂಬ ಅರ್ಥ.

**೪) ಓಂ ಓಂ ನ ಪ್ರತೀಕೇನ ಹಿ ಸಃ ಓಂ (ನಪ್ರತೀಕಾಧಿಕರಣಂ)**

ನಾಮಾದಿದೇವತೆಗಳಲ್ಲಿ ( ಆತ್ಮ) ಪರಮಾತ್ಮನೆಂದು ಉಪಾಸನೆ ಮಾಡಬಾರದು. ಆದರೆ ಅದರಲ್ಲಿ ದೇವರ ಅಧಿಷ್ಠಾನವಿದೆ ಎಂದು ಮಾಡಬೇಕು. ಯಾಕೆಂದರೆ 'ಸಃ' ಆ ವಿಷ್ಣು ಯಾವುದರಿಂದ 'ಹಿ' ನಾಮಾದಿ ದೇವತೆಗಳ ಪ್ರತೀಕಗಿರುವನೋ ಅದಕ್ಕೆ ಎಂಬರ್ಥ.

**೫) ಓಂ ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ (ಬ್ರಹ್ಮಾಧಿಕರಣಂ)**

'ಬ್ರಹ್ಮಣಿ ದೃಷ್ಟಿಃ' ಪರಮೇಶ್ವರನಲ್ಲಿ ಪೂರ್ಣತ್ವೇನ ಉಪಾಸನೆಯನ್ನು ಮಾಡಬೇಕು. ಯಾಕೆಂದರೆ 'ಉತ್ಕರ್ಷಾತ್' ಪೂರ್ಣನಾದ್ದರಿಂದ ಉತ್ತಮತ್ವೇನ ಉಪಾಸನೆ ಮಾಡುವನಾಗಬೇಕು. ಅವನು 'ಉತ್ಕೃಷ್ಟ'ನಾಗಿಯೇ ಇರುವುದರಿಂದ ಎಂಬ ಅರ್ಥ.

**೬) ಓಂ ಓಂ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ ಓಂ (ಆದಿತ್ಯಾಧಿಕರಣಂ)**

'ಅಂಗೇ' ಭಗವಂತನ ಶರೀರದಲ್ಲಿ ಆದಿತ್ಯಾದಿ ದೇವತೆಗಳು. ಅವರಿಗೆ ಆಶ್ರಯಭೂತನಾಗಿ ಪ್ರಧಾನನಾಗಿರುವದಾಗಿ ಉಪಾಸನೆ ಮಾಡಬೇಕು. 'ಆದಿತ್ಯಾದಿ ಮತಯಃ' ಯಾಕೆಂದರೆ 'ಉಪಪತ್ತೇಃ' ಅವರಿಗೆ ಪರಮಾತ್ಮನ ಪ್ರಭೇದ ವಿಷಯದಲ್ಲಿ ಉಪೇಕ್ಷಾ ಬುದ್ಧಿ ಇರುವುದರಿಂದ ಹಾಗೆ ಉಪಾಸನೆ ಮಾಡಬೇಕೆಂದರ್ಥ.

**೭) ಓಂ ಓಂ ಆಸೀನಃ ಸಂಭವಾತ್ ಓಂ (ಆಸೀನಾಧಿಕರಣಂ)**

ಜ್ಞಾನಾಪೇಕ್ಷಿಯು 'ಆಸೀನಃ' ಕುಳಿತುಕೊಂಡೇ ಉಪಾಸನೆಯನ್ನು ಮಾಡಬೇಕು. ಯಾಕೆಂದರೆ 'ಸಂಭವಾತ್' ಅವನು ಆಸನಸ್ಥನಾಗುವುದೇ ಯೋಗ್ಯವೆಂದರ್ಥ.

**೮) ಓಂ ಓಂ ಧ್ಯಾನಾಚ್ಚ ಓಂ**

ಮಧ್ಯೆ ತಡೆಯಿಲ್ಲದೇ (ಅವಿಚ್ಛಿನ್ನ) ಸ್ಮರಣ ಮಾಡುತ್ತ (ರೂಪ) ಉಪಾಸನಕ್ಕೆ 'ಧ್ಯಾನಾಚ್ಚ' ಆ ನಿಯಮವಿದ್ದರೇ ಆಸನ ನಿಯಮಾದಿಗಳು ಎಂದು ಒಪ್ಪಿರುವುದರಿಂದ. ಸ್ಮರಣ ಹಾಗೂ ಉಪಾಸನೆಯನ್ನು ಬಿಟ್ಟರೆ (ವ್ಯಭಾಚಾರ ಅದಕ್ಕೆ ಅದನ್ನೇ ಮಾಡಬೇಕೆಂದರ್ಥ.

## ೯) ಓಂ ಓಂ ಅಚಲತ್ವಂಚಾಪೇಕ್ಷ್ಯ ಓಂ

ಕೇವಲ ಪ್ರತ್ಯಾಹಾರದಿಂದ ಮನೋವಿಕ್ಷೇಪ ಬರುವುದಿಲ್ಲ. ಆದರೆ 'ಅಚಲತ್ವಂಚ' ಶರೀರ ಚಲಿಸುವುದರಿಂದ ಅದಕ್ಕೆ ಕುಳಿತೇ ಧ್ಯಾನ ಮಾಡಬೇಕೆಂದರ್ಥ.

## ೧೦) ಓಂ ಓಂ ಸ್ಮರಂತಿ ಚ ಓಂ

ಸ್ಮೃತಿಕಾರರಾದ ಶ್ರೀಕೃಷ್ಣನು ಆಸನ ನಿಯಮವು ಅತ್ಯಾವಶ್ಯಕವೆಂಬುದನ್ನೇ ಗೀತೆಯಲ್ಲಿ 'ಸಮಂಕಾಯ ಶಿರೋಗ್ರೀವಂ' ಎಂದು ಸ್ಮೃತಿದ್ವಾರಾ ಆದೇಶಿಸುತ್ತಾರೆ ಎಂಬ ಅರ್ಥ.

## ೧೧) ಓಂ ಓಂ ಯತ್ರೈಕಾಗ್ರತಾತತ್ರಾವಿಶೇಷಾತ್ ಓಂ

'ಯತ್ರ' ಯಾವ ದೇಶ-ಕಾಲಗಳಲ್ಲಿ ಮತ್ತು ಆಸನದಲ್ಲಿಯೂ 'ಏಕಾಗ್ರತಾ' ಧ್ಯಾನದ ಸಲುವಾಗಿಯೇ ಕನಿಷ್ಠತೆ ಬರುವದೋ ಅಂತಹ ದೇಶ-ಕಾಲ-ಆಸನ ಯುಕ್ತರಾಗಿಯೇ ಧ್ಯಾನವನ್ನು ಮಾಡಬೇಕು. ಯಾಕೆಂದರೆ 'ಅವಿಶೇಷಾತ್' ದೇಶ-ಕಾಲಾದಿಗಳಿಂದ ಜ್ಞಾನ-ಧ್ಯಾನಗಳಲ್ಲಿ ವಿಶೇಷತೆ ಇಲ್ಲದಿರುವುದರಿಂದ ಎಂಬ ಅರ್ಥ.

## ೧೨) ಓಂ ಓಂ ಆಪ್ರಾಯಣಾತ್ತತ್ರಾಪಿ ಹಿ ದೃಷ್ಟಂ ಓಂ (ಆಪ್ರಾಣಾಧಿಕರಣಂ)

ಮೋಕ್ಷಾಪೇಕ್ಷಿಯಾದವನು 'ಆ ಪ್ರಾಣಾತ್' ಮೋಕ್ಷಪ್ರಾಪ್ತಿಯಾಗುವವರೆಗೂ ಧ್ಯಾನವನ್ನು ಮಾಡುತ್ತಲೇ ಇರಬೇಕು. ಯಾಕೆಂದರೆ 'ಹಿ' ಅದಕ್ಕೆ 'ತತ್ರಾಪಿ' ಆ ಮೋಕ್ಷದಲ್ಲಿಯೂ 'ದೃಷ್ಟಂ' ಧ್ಯಾನವು ಶೃತಿ-ಸ್ಮೃತ್ಯುಕ್ತವೇ. ಅದಕ್ಕೆ ಧ್ಯಾನ ಮಾಡಬೇಕೆಂಬ ಅರ್ಥ.

**೧೩) ಓಂ ಓಂ ತದಧಿಗಮ ಉತ್ತರ ಪೂರ್ವಾಘಯೋರಶ್ಲೇಷವಿನಾ ಶೋತದ್ವ್ಯಪದೇಶಾತ್ ಓಂ (ತದಧಿಗಮಾಧಿಕರಣಂ)**

'ತದಧಿಗಮೆ' ಆ ಬ್ರಹ್ಮಜ್ಞಾನಾನಂತರ (ಅಪರೋಕ್ಷಜ್ಞಾನವಾದ ಮೇಲೆ) 'ಉತ್ತರ ಪೂರ್ವಾಘಯೋಃ' ಅಪರೋಕ್ಷಾನಂತರ ಅಪರೋಕ್ಷದ ಪೂರ್ವದ ಮೊದಲಿನ ಪಾಪಗಳ ಆಶ್ಲೇಷ ವಿನಾಶೌಃ' ಉತ್ತರದಲಿಯ ಪಾಪಲೇಪವಾಗು ವುದಿಲ್ಲ. ಪೂರ್ವ ಪಾಪನಾಶವಾಗುತ್ತದೆ ಎಂದು ತಿಳಿಯುತ್ತದೆ. ಯಾಕೆಂದರೆ 'ತದ್ವ್ಯಪದೇಶಾತ್' ಆ ಲೇಪವಾಗದ ನಾಶಹೊಂದುವುದು ಹೇಗೆಂದರೆ 'ತದ್ಯಥಾ' ಈ ವೇದದಲ್ಲಿ ಹಿಳಿದ್ದ ಪ್ರಯುಕ್ತವೆಂದರ್ಥ.

**೧೪) ಓಂ ಓಂ ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇತು ಓಂ**

'ತು' ಶಬ್ದವು ಅನುದ್ಧಾನವಾಚಿ 'ಇತರಸ್ಯ' ಭಗವತ್‌ಜ್ಞಾನದಿಂದ ಇತರ ಭಿನ್ನರಾದ ದ್ವೇಷಿಗಳ 'ಪಾತೇತು' ಮೇಲೆ ಬಾರದಿರುವ ತಮಸ್ಸಿಗೆ ಬೀಳುವುದು ಹತ್ತಿರವಿದ್ದರೆ. ಅದಕ್ಕೋಸ್ಕರ 'ಇತರಸ್ಯ' ಪಾಪಭಿನ್ನ ಪುಣ್ಯವೂ ಕೂಡ ನಾಶವಾ ಗುತ್ತದೆ. ಜ್ಞಾನಿಗಳ ಪಾಪ ನಾಶವಾಗುವಂತೆ ಪಾಪಿಗಳ ಪುಣ್ಯನಷ್ಟವಾಗುತ್ತದೆ. 'ಅಸಂಶ್ಲೇಷಃ' ಉತ್ತರದ ಸ್ಪರ್ಶವಾಗದೂ ಪೂರ್ವದ ಪುಣ್ಯವಿನಾಶವಾಗುವುದು ಎಂಬರ್ಥ.

**೧೫) ಓಂ ಓಂ ಅನಾರಬ್ಧಕಾರ್ಯೇ ಏವ ತು ಪೂರ್ವೇತದವಧೇಃ ಓಂ**

'ತು' ಮತ್ತು 'ಪೂರ್ವೇ' ವಿಷ್ಣುವಿನಲ್ಲಿ ದ್ವೇಷ ಮಾಡುವುದಕ್ಕೂ ಪೂರ್ವಕಾಲದಲ್ಲಿ 'ಅನಾರಬ್ಧಕಾರ್ಯೇ ಏವ' ಪ್ರಾರಂಭ ಮಾಡುವ (ದ್ವೇಷ) ದರ ಕಿಂತಲೂ ಮೊದಲು 'ಪುಣ್ಯಪಾಪೇ ವಿನಶ್ಯತಃ' ನಾಶವಾಗುತ್ತದೆ. ಯಾಕೆಂದರೆ 'ತದವಧೇಃ' ಆ ಮೋಕ್ಷ ಸಿಗಬೇಕೆಂದರೆ ಪ್ರಾರಬ್ಧ ಕರ್ಮದ ನಿವೃತ್ತಿಯಾದ ಮೇಲೆಯೇ ಎಂದು ಶೃತಿ ಇರುವುದರಿಂದ ಎಂಬ ಅರ್ಥ.

## ೧೬) ಓಂ ಓಂ ಅಗ್ನಿಹೋತ್ರಾದಿ ತು ತತ್ಕಾರ್ಯಯ್ಯೈವ ತದ್ದರ್ಶನಾತ್ ಓಂ

'ತು' ವಿಶೇಷವಾಗಿ 'ಅಗ್ನಿಹೋತ್ರಾದಿ' ಜಿಜ್ಞಾಸುವಾದ ಬ್ರಹ್ಮಜ್ಞಾನಿಯಿಂದ ಮಾಡುವ ಆಗ್ನಿಹೋತ್ರಾದಿ ಅಕಾಮ್ಯವಾದ ಕರ್ಮಗಳು. 'ತತ್ಕಾರ್ಯಯ್ಯೈವ' ಜ್ಞಾನ ಮತ್ತು ಮೋಕ್ಷ ಈ ಎರಡೂ ಕಾರ್ಯ ನಿಮಿತ್ತವಾಗಿಯೇ ಆಗುತ್ತದೆ. ಯಾಕೆಂದ ರೆತದರ್ಶನಾತ್ ಮತ್ತು ನ ಹಾಸ್ಯಕರ್ಮ' ಎಂದು ಶೃತಿಯಲ್ಲಿ ಹೇಳಿದ ಕಾರಣ ಎಂಬ ಅರ್ಥ. (ಅಪರೋಕ್ಷ ಜ್ಞಾನಿ ಮಾಡಿದ ಕಾಮ್ಯ ಕರ್ಮವೂ ನಿಷ್ಕಾಮವಾ ಗಿಯೇ ಆಗುತ್ತದೆ.)

## ೧೭) ಓಂ ಓಂ ಅತೋಽನ್ಯದಪೀತ್ಯೇಕೇಷಾಮುಭಯೋಃ ಓಂ

'ಅತಃ' ಪ್ರಾರಬ್ಧದಿಂದ ಮಾಡಿದ ಕಾಮ್ಯಕರ್ಮಗಳಿಗೆ 'ಅನ್ಯಂ' ಬೇರೆ ಯಾದ ಜ್ಞಾನದ ದೆಸೆಯಿಂದ ಹಿಂದೆ ಮುಂದಿನ ಕಾಮ್ಯಕರ್ಮವು ಪುಣ್ಯ ಅನಿಷ್ಟ ಪುಣ್ಯವನ್ನು ಪ್ರಾರಬ್ಧವಿಲ್ಲದಿರುವುದರ ಸಂಪರ್ಕವಾಗದೇ ನಾಶವಾಗುತ್ತದೆ. ಯಾಕೆಂದರೆ ಈ ಪ್ರಕಾರವಾಗಿಯೇ 'ಏಕೇಷಾಂ' ಕೆಲವು ಶಾಖೆಯಲ್ಲಿ 'ಉಭಯೋಃ' ಜ್ಞಾನದ ಉತ್ತರ ಮೊದಲಿನವುಗಳಾದ ಅಪ್ರಾರಬ್ಧ ಅನಭೀಷ್ಟ ವಾಗಿರುವ ಕಾಮ್ಯದ ಪುಣ್ಯವನ್ನು ಬಿಡುವುದರಿಂದಲೇ ಎಂಬ ಪರಿಪಾಠ (ರೂಢಿ) ಇದೆ ಅದಕ್ಕೆ ಎಂಬ ಅರ್ಥ.

## ೧೮) ಓಂ ಓಂ ಯದೇವವಿದ್ಯಯೇತಿಹಿ ಓಂ

ಜ್ಞಾನಿಗಳಿಂದ ಮಾಡಿದ ಪೂಣ್ಯವು ಸ್ವಲ್ಪವಾಗಿದ್ದರೂ ಫಲಮಾತ್ರ ಅಕ್ಷಯ ವಾದ ಅನಂತಫಲಪ್ರಾಪ್ತಿಯಾಗುತ್ತದೆ. ಯಾಕೆಂದರೆ 'ಹಿ' ನಿಶ್ಚಿತವಾಗಿಯೂ 'ಯದೇವ ವಿದ್ಯಯಾ' ಎಂಬ ಶೃತಿಯೂ ಇದೆ. ಅದಕ್ಕೋಸ್ಕರವಾಗಿ ಎಂದರ್ಥ.

೧೯) ಓಂ ಓಂ ಭೋಗೇನತ್ವಿತರೇಕ್ಷಪಯಿತ್ವಾಥಸಂಪತ್ಸ್ಯತೇ ಓಂ

'ತು' ಜ್ಞಾನಿಗಳ ಪ್ರಾರಬ್ಧಕರ್ಮದ ಭೋಗದ ಉಪಮರ್ದ (ಶಮನ) ನ್ಯೂನತೆ ಆಗುವುದೆಂಬ ವಿಶೇಷದ್ಯೋತಕವೇ. ಜ್ಞಾನಿಯು 'ಭೋಗೇನ' ಭೋಗ ಮಾಡುವುದರಿಂದ 'ಇತರೆ' ಪ್ರಾರಬ್ಧಕರ್ಮ ಪ್ರಕಾರ ಬಂದ ಪುಣ್ಯಪಾಪಗಳನ್ನು 'ಕ್ಷಪಯಿತ್ವಾ' ನಾಶಮಾಡಿಕೊಂಡು 'ಅಥ' ಅನಂತರದಲ್ಲಿಯೇ ಕ್ರಮಪ್ರಕಾರವಾಗಿ 'ಸಂಪತ್ಸ್ಯತೆ' ಪರಬ್ರಹ್ಮನ ಹತ್ತಿರ ಹೋಗುತ್ತಾನೆ (ಮುಕ್ತನಾಗುತ್ತಾನೆ) ಅದೇ ರೀತಿಯಾಗಿ ವಿಷ್ಣು ದ್ವೇಷಿಯು ತಮಸ್ಸನ್ನು ಹೊಂದುತ್ತಾನೆ ಎಂಬ ಅರ್ಥ.

ಇತಿ ಶ್ರೀಜಗನ್ನಾಥಯತಿ ಕೃತಾಯಾಂ ಸೂತ್ರದೀಪಿಕಾಯಾಂ
ಚತುರ್ಥಾಧ್ಯಾಯಸ್ಯ ಪ್ರಥಮ ಪಾದಃ

ಉಮರ್ಜಿ ಪ್ರಲ್ಹಾದಾಚಾರ್ಯರಿಂದ ರಚಿತವಾದ ಕನ್ನಡ ವ್ಯಾಖ್ಯಾನದ
ನಾಲ್ಕನೇ ಅಧ್ಯಾಯದ ಮೊದಲನೇ ಪಾದ ಮುಗಿಯಿತು.

## ಅಥ ಸೂತ್ರದೀಪಿಕಾಯಾಂ ಚತುರ್ಥಾಧ್ಯಾಯಸ್ಯ ದ್ವಿತೀಯಃ ಪಾದಃ

### ೧) ಓಂ ಓಂ ವಾಙ್ಮನಸಿದರ್ಶನಾಚ್ಛಬ್ದಾಚ್ಚ ಓಂ (ವಾಙ್ಮನಸಾಧಿಕರಣಂ)

ವಾಗಭಿಮಾನಿ ಉಮಾ ಪದದಿಂದ ಸೌಪರ್ಣಿ ವಾರುಣೀಯರೂ ಬರುತ್ತಾರೆ. ಅದರಂತೆ ಮನೋಅಭಿಮಾನಿಗಳೆಂದು ರುದ್ರ ಶಬ್ದದಿಂದ ವಾಚ್ಯ ಶೇಷ-ಗರುಡರಲ್ಲಿ ವಿಲೀನರಾಗುತ್ತಾರೆ. ಯಾಕೆಂದರೆ ವಾಕ್ ಇದು ಮನಸ್ಸಿನ ಅಧೀನವೆಂಬ ಅಭಿಪ್ರಾಯ. ಅದು ಹೇಗೆಂದರೆ 'ದರ್ಶನಾತ್' ಅದು ಪ್ರತ್ಯಕ್ಷ ಸಿದ್ಧವಾಗಿದೆ. ಮತ್ತು 'ಶಬ್ದಾಚ್ಚ' ಹಾಗೂ ಶೃತಿ ಪ್ರತಿಪಾದ್ಯವೂ ಎಂಬರ್ಥ

### ೨) ಓಂ ಓಂ ಅತ ಏವ ಚ ಸರ್ವಾಣ್ಯನು ಓಂ

'ಚ' ಮತ್ತು ಎಲ್ಲ ದೇವತೆಗಳಲ್ಲಿ ಪ್ರವೇಶ ಮಾಡುತ್ತಾರೆ. ಯಾಕೆಂದರೆ 'ಅತ ಏವ', 'ಅಗ್ನೌ' ಎಂಬ ಶೃತಿಯಿಂದಲೂ ಎಂಬ ಅರ್ಥ.

### ೩) ಓಂ ಓಂ ತನ್ಮನಃ ಪ್ರಾಣ ಉತ್ತರಾತ್ ಓಂ (ಮನಃಪ್ರಣಾಧಿಕರಣಂ)

'ತನ್ಮನಃ' ಮೊದಲು ಹೇಳಿದ ಮನೋಭಿಮಾನಿ ಗರುಡಶೇಷರು 'ಪ್ರಾಣೇ' ಪ್ರಾಣ ಶಬ್ದದಿಂದ ವರ್ಣಿತ ಬ್ರಹ್ಮದೇವರಲ್ಲಿ ಪ್ರವೇಶಿಸುತ್ತಾರೆ. ಯಾಕೆಂದರೆ 'ಉತ್ತರಾತ್ ಮನಃ ಪ್ರಾಣೇ' ಎಂದು ಮುಂದೆ ಹೇಳುವ ವಾಕ್ಯದಿಂದ ಈ ಅರ್ಥವು.

### ೪) ಓಂ ಓಂ ಸೋಽಧ್ಯಕ್ಷೇ ತದುಪಗಮಾದಿಭ್ಯಃ ಓಂ (ಅಧ್ಯಕ್ಷಾಧಿಕರಣಂ)

'ಸಃ' ಆ ಚತುರ್ಮುಖರು 'ಅಧ್ಯಕ್ಷೇ' ಮುಖ್ಯಾಧಿಪತಿಯಾದ ಪರಮಾತ್ಮನಲ್ಲಿ ಪ್ರವೇಶ ಮಾಡುತ್ತಾರೆ. ಯಾಕೆಂದರೆ 'ತದುಪಗಮಾದಿಭ್ಯಃ' ಪರಮಾತ್ಮನ ಪ್ರಾಪ್ತಿಯಾಗುವುದೆಂದು ಪ್ರತಿಪಾದಿಸುವ ಶೃತಿಗಳಿಂದ ಎಂಬರ್ಥ.

**೫) ಓಂ ಓಂ ಭೂತೇಷು ತಚ್ಛ್ರುತೇಃ ಓಂ (ಭೂತಾಧಿಕರಣಂ)**

ವಿಶೇಷವಾಗಿ ಹೇಳಿದ ಬೇರೆಯವರಲ್ಲಿ ದೇವತೆಗಳು 'ಭೂತೇಷು' ಪಂಚ ಮಹಾಭೂತಗಳಲ್ಲಿ ಪ್ರವೇಶಿಸುತ್ತಾರೆ. ಯಾಕೆಂದರೆ ತಚ್ಛ್ರುತೇಃ ಭೂತೇಷು ದೇವಾಃ ಈ ಶ್ರುತಿ ಇರುವುದರಿಂದಲೂ ಎಂಬ ಅರ್ಥ.

**೬) ಓಂ ಓಂ ನೈಕಸ್ಮಿನ್ ದರ್ಶಯತೋ ಹಿ ಓಂ (ನೈಕಸ್ಮಿನ್ನಧಿಕರಣಂ)**

ಮೊದಲಿನ ಓಂ ಅದರ ಅಧ್ಯಾಹಾರ ಮಾಡುವದು 'ದ್ವಾವಾವ' ಈ ಶ್ರುತಿ ಸಮುಚ್ಚಯವು ಎರಡನೆದು. ಮತ್ತೂ ಕೂಡ ಲಕ್ಷ್ಮೀದೇವಿ ಪ್ರವೇಶ ಮಾಡುವುದಿಲ್ಲ. ಯಾಕೆಂದರೆ ಅದಕ್ಕೆ ಆ ಲಕ್ಷ್ಮೀದೇವಿಯರಿಗೆ 'ಅನುಪ್ರೋಷ್ಯ' ಪರಮಾತ್ಮನನ್ನು ಅನುಸರಿಸಿಯೇ ಇರುವಳು. 'ಅಮೃತತ್ವಂ' ನಿತ್ಯಮುಕ್ತಳಾಗಿಯೇ ಇರುತ್ತಾಳೆ. ಅದು ಯಾಕೆಂದರೆ 'ಅಸ್ಪೃತ್ಯುಪಕ್ರಮಾತ್' ಯಾವಾಗಲೂ ಅವಳಿಗೆ ಸಂಸಾರ ಸಂಬಂಧವಿಲ್ಲದಿರುವುದರಿಂದ. ಅದಾದರೂ ಯಾಕೆಂದರೆ 'ಸಮನಾ' ದೇಶ-ಕಾಲಗಳಿಂದ ಯಾವಾಗಲೂ ಸಮ ಆಗದಿರುವ ಪರಮಪುರುಷನು ಯಾವಳಿಗೆ ಅಂತಹ ಅವಳು 'ಸಮನಾ'. ಆದಕ್ಕೆ ಸಮನಾ ಎಂದು ಪ್ರಸಿದ್ಧಳಾದ್ದಾಳೆ ಎಂಬ ಅರ್ಥ.

**೭) ಓಂ ಓ ತದಪೀತೇಃ ಸಂಸಾರವ್ಯಪದೇಶಾತ್ ಓಂ**

ಆ ಪ್ರಕೃತಿಯಲ್ಲಿ 'ಅಪೀತೇಃ' ಪ್ರವೇಶಕ್ಕೆ ಸಂಸಾರವ್ಯಪದೇಶಾತ್ ವಿಲೀನೋ ಎಂಬ ಸಂಸಾರ ಕಾರಣಭೂತ ಶ್ರುತಿಯಿಂದ ಮೋಚಕನಾದ ಈಶ್ವರನಿಗೆ ಪ್ರಕೃತಿಯಿಂದ ಸಾಮ್ಯವಿಲ್ಲವೇ ಇಲ್ಲ ಎಂಬ ಅರ್ಥ.

**೮) ಓಂ ಓಂ ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ ಓಂ**

ಪ್ರಕೃತಿಯಕಿಂತಲೂ 'ಸೂಕ್ಷ್ಮಂ' ಬ್ರಹ್ಮನು 'ಪ್ರಮಾಣತಃ' ಜ್ಞಾನಾನಂದಾದಿ

ಗುಣ ಪರಿಮಾಣ (ಅಳತೆ) ಗಳಿಂದಲೂ ಅಧಿಕನಾಗಿದ್ದಾನೆ. ಯಾಕೆಂದರೆ 'ತಥೋಪಲಬ್ಧೇಃ ಸರ್ವತಃ' ಈ ರೀತಿ ಶೃತಿ ಇದ್ದದ್ದರಿಂದ ಅದರಿಂದಲೂ ಪ್ರಕೃತಿಗೆ ಪರಬ್ರಹ್ಮನಿಂದ ಸಾಮ್ಯವಿಲ್ಲವೆಂದರ್ಥ.

## ೧೦) ಓಂ ಓಂ ನೋಪಮರ್ದೇನಾತಃ ಓಂ

'ಅತಃ' ಸಾಮ್ಯತೆಯು ಇಲ್ಲವೆಂದು ಸಾಧಿಸುವುದರಿಂದ 'ನೋಪಮರ್ದೇನ' ಸ್ವಾತಂತ್ರ್ಯಾದಿ ಗುಣಗಳ ಬಾಧೆಬಾರದ್ದರಿಂದ ಪ್ರಕೃತಿಗೆ ಪರಮಾತ್ಮನ ಜತೆ ನಿತ್ಯಮುಕ್ತ ಈ ಮಟ್ಟಿಗೆ ಮಾತ್ರ ಸಾಮ್ಯವಿದೆ ಎಂಬ ಅರ್ಥ.

## ೧೧) ಓಂ ಓಂ ಅಸ್ಯೈವಚೋಪಪತ್ತೇರೂಷ್ಮಾ ಓಂ

ಊಷ್ಮಾ (ವಾಫ) ಅನೂಷ್ಮಾ ಎಂದು ಪ್ರತಿಪಾದನೆ ಮಾಡುವುದಾಗಿ ಎರಡು ಇದು. 'ದ್ವೇಧಾಹೀದಂ' ಈ ಶೃತಿಯೂ ಕೂಡ ಪರಮಾತ್ಮನಿಗೇ ಸ್ವಲ್ಪಸಮಾನತೆ ಇದೆ ಎಂದು ಈ ಘಟನೆಯನ್ನೇ ಉಪಪಾದನೆ ಮಾಡುತ್ತದೆ ಎಂಬ ಅರ್ಥ.

## ೧೨) ಓಂ ಓಂ ಪ್ರತಿಷೇಧಾದಿತಿಚೇನ್ನಶಾರೀರಾತ್ ಓಂ

'ಪ್ರತಿಷೇಧಾತ್' ಈಶ್ವರನಿಗೆ ಬೇರೆಯದರಿಂದ ಸಾಮ್ಯವೆಂಬುದನ್ನು ನಿಷೇಧ ಮಾಡಿದೆ. ಪ್ರಕೃತಿಗೆ ದೇಶಕಾಲವ್ಯಾಪ್ತಿಯಿಂದಲೂ ಸಾಮ್ಯ ಹೇಳಲಾಗುವುದಿಲ್ಲ. 'ನೇತಿಚೇನ್ನ' ಯಾಕೆಂದರೆ 'ಶಾರೀರಾತ್' ಜೀವನಿಂದ ಈಶ್ವರನಿಗೆ ಸಾಮ್ಯವನ್ನು ನಿಷೇಧ ಮಾಡಿದೆ. ಆದರೆ ಪ್ರಕೃತಿಯಿಂದ ಅಲ್ಲ ಅದಕ್ಕೆ ಎಂಬಾರ್ಥ.

## ೧೩) ಓಂ ಓಂ ಸ್ಪಷ್ಟೋಹ್ಯೇಕೇಷಾಂ ಓಂ

'ಹಿ' ಯಾಕೆಂದರೆ ಏಕೇಷಾಂ ಒಂದು ಶಾಖೆಯಲ್ಲಿ ಪ್ರಕೃತಿಗೆ 'ಅಥ' ಎಂದು ಸಮ-ಅಸಮತ್ವವಾದವು ಸ್ಪಷ್ಟವಾಗಿ ಇದೆ ಅದಕ್ಕೆ ಎಂದರ್ಥ.

**೧೪) ಓಂ ಓಂ ಸ್ಮರ್ಯತೇ ಚ ಓಂ**

ಶ್ರೀ ಕೃಷ್ಣಾದಿಗಳಿಂದ ಹೇಳಿರುವ ಅರ್ಥವನ್ನೇ 'ಮತ್ಸ್ಯಕೂರ್ಮ' ಈ ರೀತಿಯಾಗಿ ಜ್ಞಾಪಿಸಲ್ಪಡುತ್ತದೆ ಎಂಬ ಅರ್ಥ.

**೧೫) ಓಂ ಓಂ ತಾನಿಪರೇ ತಥಾಹ್ಯಾಹ ಓಂ (ಪರಾಧಿಕರಣಂ)**

'ತಾನಿ' ಆ ಎಲ್ಲ ದೇವತೆಗಳು ಚತುರ್ಮುಖ ಬ್ರಹ್ಮದೇವರ ದ್ವಾರಾ 'ಪರೇ' ಪರಮಾತ್ಮನಲ್ಲಿ ಪ್ರವೇಶಿಸುತ್ತಾರೆ. ಯಾಕೆಂದರೆ ಅದನ್ನೇ ಹೇಳಲಾಗುತ್ತದೆ. 'ಸರ್ವಂ' ಈ ರೀತಿ ಶೃತಿ ಆ ರೀತಿ ಹೇಳಿದೆ ಅದಕ್ಕೆ ಎಂಬಾರ್ಥ.

**೧೬) ಓಂ ಓಂ ವಿಭಾಗೋವಚನಾತ್ ಓಂ (ಅವಿಭಾಗಾಧಿಕರಣಂ)**

ಭಗವಂತನ ಇಚ್ಛೆ ಅವನ ಭಕ್ತರ ಇಚ್ಛೆಯೆಂಬ ವಿಷಯ ಐಕ್ಯವು. 'ಅವಿಭಾಗಃ' ಅದಕ್ಕೆ ವಿರೋಧವಿಲ್ಲ. ಯಾಕೆಂದರೆ 'ವಚನಾತ್' 'ಏತೇ ದೇವಾಃ' ಈ ಶೃತಿ ಇರುವುದರಿಂದವೆಂಬ ಅರ್ಥ.

**೧೭) ಓಂ ಓಂ ತದೋಕೋಗ್ರಜ್ವಲನಂ ತತ್ಪ್ರಕಾಶತದ್ವಾರೋವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗ್ರಹೀತಃ ಶತಾಧಿಕಯಾ ಓಂ (ತದೋಕೋಧಿಕರಣಂ)**

ಆ ಉತ್ಕ್ರಾಂತಿಯ ಕಾಲದಲ್ಲಿ 'ತದೋಕೋಗ್ರಜ್ವಲನಂ' ಆ ಪರಮಾತ್ಮನ ಆಶ್ರಯಭೂತವಾದ ಹೃದಯದ ಕೊನೆಯಲ್ಲಿ ಪ್ರಕಾಶ (ಉರಿ) ಆಗುತ್ತದೆ. ಅನಂತರ, 'ತತ್ಪ್ರಕಾಶಿತದ್ವಾರಃ' ಆ ಪ್ರಕಾಶದಿಂದ (ವಿದ್ಯೋತಿತ) ಪ್ರಕಾಶಮಾನವಾದ ಮಾರ್ಗದಿಂದ ದೇಹದಿಂದ ಜೀವಿಯು (ಉತ್ಕ್ರಮಣ) ಹಾರುತ್ತಾನೆ. ಅದು ಹೇಗೆ ತಾನೆ ಕೂಡುತ್ತದೆ ಎಂದರೆ, 'ವಿದ್ಯಾಸಾಮರ್ಥ್ಯಾತ್' ಜ್ಞಾನದ ಶಕ್ತಿಯಿಂದ 'ತಚ್ಛೇಷಗತ್ಯನುಸ್ಮೃತಿಯೋಗಾತ್' ವಿದ್ಯಾಂಗ ಪ್ರಾಪ್ತಿಯಾದ ಸ್ಮರಣದ ಯೋಗ್ಯ

ತೆಯಿಂದ ಮತ್ತು 'ಹಾರ್ದಾನುಗ್ರಹೀತಃ' ಹೃದಯದಲ್ಲಿರುವ ದೇವರಿಂದ ಅನುಗ್ರಹೀತನಾಗಿಯೂ ಹೋಗುತ್ತಾನೆ. ಯಾವ ಮಾರ್ಗದಿಂದಲೆಂದರೆ 'ಶತಾಧಿಕಯಾ' ಸುಷುಮ್ನಾನಾಡಿಯ ಮಾರ್ಗದಿಂದ ಎಂಬರ್ಥ

## ೧೮) ಓಂ ಓಂ ರಶ್ಮ್ಯನುಸಾರಿ ಓಂ

ಒಳಗಿರುವ ಸೂರ್ಯಪ್ರಕಾಶಾನುಸಾರಿಯಾಗಿ ಜೀವಿಯು ಮೋಕ್ಷಕ್ಕೆ ನೆಗೆಯುತ್ತಾನೆ ಎಂದರ್ಥ.

## ೧೯) ಓಂ ಓಂ ನಿಶಿನೇತಿಚ್ಚೇನ್ನಸಂಬಂಧಾತ್ ಓಂ

'ನಿಶಿ' ಆದರೆ ರಾತ್ರಿ ಸೂರ್ಯರಶ್ಮಿಗಳು ಇಲ್ಲದಿರುವುದರಿಂದ ಜ್ಞಾನಿಗಳಿಗೆ ಉತ್ಕ್ರಮಣವು (ಪ್ರಯಾಣ) ಆಗುವುದಿಲ್ಲವೆಂದಲ್ಲ (ಆಗೇ ಆಗುತ್ತದೆ) 'ನೇತಿ ಚೇನ್ನ' ಯಾಕೆಂದರೆ ಆದಿತ್ಯ ರಶ್ಮಿಗಳ ಸಂಬಂಧ ಯಾವಾಗಲೂ ಇದ್ದೇ ಇರುವುದರಿಂದ ಎಂಬ ಅರ್ಥ.

## ೨೦) ಓಂ ಓಂ ಯಾವದ್ದೇಹಭಾವಿತ್ವಾದ್ದರ್ಶಯತಿ ಚ ಓಂ

'ಯಾವದ್ದೇಹಭಾವಿತ್ವಾತ್' ಕಿರಣಗಳು ಎಲ್ಲಿಯವರೆಗೆ ಶರೀರವಿರುತ್ತದೋ ಅಲ್ಲಿಯವರೆಗೆ ಇದ್ದ ಕಾರಣ ರಾತ್ರಿಯಲ್ಲಿಯೂ ಜ್ಞಾನಿಗಳಿಗೆ ಉತ್ಕ್ರಮಣವು ಯೋಗ್ಯವೇ. ಯಾಕೆಂದರೆ 'ದರ್ಶಯತಿ ಚ ಯತಃ' ತೋರಿಸುತ್ತವೆ. 'ಸಂಸೃಷ್ಟಾ' ಇತ್ಯಾದಿ ಶೃತಿಗಳು ಹಾಗೆ ಉತ್ಕ್ರಮಣ ವಿಷಯವನ್ನು ಪ್ರತಿಪಾದನೆ ಮಾಡುತ್ತವೆ ಎಂಬ ಅರ್ಥ.

## ೨೧) ಓಂ ಓಂ ಅತಶ್ಚಾಯನೇಪಿ ಹಿ ದಕ್ಷಿಣೇ ಓಂ

'ಚ' ಪ್ರತಿಜ್ಞೆ(ಎರಡು)ಗಳನ್ನು ಸೂಚಿಸುತ್ತದೆ. 'ಅಪಿ' ದಕ್ಷಿಣೇ ಮರಣಾತ್' ಎಂಬ ಸ್ಮೃತಿ ಇದ್ದರೂ ಕೂಡ 'ದಕ್ಷಿಣೇ ಅಯನೇ' ದಕ್ಷಿಣಾಯನ

ಕಾಲದಲ್ಲಿಯೂ ಜ್ಞಾನಿಗಳು ಉತ್ಕ್ರಾಂತಿಯುಕ್ತರಾಗಿರುತ್ತಾರೆ. ಯಾಕೆಂದರೆ 'ಅತಃ' ಸೂರ್ಯಕಿರಣಸಂಬಂಧ ಸಹಸ್ರನಾಡಿಗಳಿಗೆ ಇದ್ದದ್ದರಿಂದ (ಯಾವಾಗಲೂ). ಯಾಕೆಂದರೆ ಈ ರೀತಿ ದಕ್ಷಿಣಾಯನ ಉದಾಹರಣೆಯಿಂದ ರಾತ್ರಿಯಲ್ಲಿ ಉತ್ಕ್ರಾಂತಿ ಆಗುವುದಿಲ್ಲವೆಂದು ಹೇಳಬಾರದು ಎಂಬ ಅರ್ಥ.

## ೨೨) ಓಂ ಓಂ ಯೋಗಿನಃ ಪ್ರತಿಸ್ಮರ್ಯತೇ ಸ್ಮಾರ್ತೇಚೈತೇ ಓಂ (ಯೋಗ್ಯಧಿಕರಣಂ)

ಯಾಕೆಂದರೆ 'ಚ ಏತೇ' ಬ್ರಹ್ಮ ಹಾಗೂ ಚಂದ್ರಗತಿಗಳು 'ಯೋಗಿನಃ ಪ್ರತಿ' ಜ್ಞಾನಕರ್ಮಯೋಗಿಗಳ ಸಲುವಾಗಿಯೇ 'ಸ್ಮರ್ಯತೇ' ಸ್ಮೃತಿಗಳಲ್ಲಿ ಹೇಳಲ್ಪಡುತ್ತದೆ. 'ಸ್ಮಾರ್ತೇ ಚ' ತಮ್ಮ ಅನುಭವಕ್ಕೆ ಬಂದ ಸ್ಮೃತಿಗಳಿಂದಲೂ ಸಾಧ್ಯವಾದ 'ಗತಿ' ಇತ್ಯಾದಿಗಳಿಂದ ಸ್ಮರಣೆಗೆ ಬರುವುದು. ಅದಕ್ಕೆ ಅವುಗಳಿಗೆ ಕೇವಲ ಕಾಲಾದಿ ಕೃತತ್ವವೇ ಇರುವುದಿಲ್ಲವೆಂದರ್ಥ.

**ಇತಿ ಶ್ರೀಜಗನ್ನಾಥಯತಿಕೃತಾಯಾಂ ಸೂತ್ರದೀಪಿಕಾಯಾಂ ಚತುರ್ಥಾಧ್ಯಾಯಸ್ಯ ದ್ವಿತೀಯಃ ಪಾದಃ**

**ಉಮರ್ಜಿ ಪ್ರಲ್ಹಾದನಿಂದ ಕೃತ ಕನ್ನಡ ವ್ಯಾಖ್ಯಾನದ ನಾಲ್ಕನೇಯ ಅಧ್ಯಾಯದ ಎರಡನೆಯ ಪಾದ ಮುಗಿಯಿತು.**

## ಅಥ ಶ್ರೀಸೂತ್ರದೀಪಿಕಾಯಾಂ ಚತುರ್ಥಾಧ್ಯಾಯಸ್ಯ ತೃತೀಯಃ ಪಾದಃ ಪ್ರಾರಂಭಃ

### ೧) ಓಂ ಅರ್ಚಿರಾದಿನಾ ತತ್ಪ್ರಥಿತೇಃ ಓಂ (ಅರ್ಚಿರಾದ್ಯಧಿಕರಣಂ)

ಉತ್ಕ್ರಮಣ ಮಾಡಿದ ಜ್ಞಾನಿಯು 'ಅರ್ಚಿರಾದಿನಾ' ಅರ್ಚಿಮಾರ್ಗದಿಂದ ಹೋಗುತ್ತಾನೆ. ಯಾಕೆಂದರೆ 'ತತ್ಪ್ರಥಿತೇಃ' ಅರ್ಚಿರಾದಿ ಮಾರ್ಗವು ಅತ್ಯಂತ ಪ್ರಸಿದ್ಧವಾಗಿದೆ. 'ತೇರ್ಚಿಷಮಭಿಸಂಭವಂತಿ' ಈ ಶೃತಿಯಲ್ಲಿ ಆ ಅರ್ಥವು ಪ್ರಸಿದ್ಧವಾಗಿದೆ ಎಂಬ ಅರ್ಥ.

### ೨) ಓಂ ಓಂ ವಾಯುಶಬ್ದಾದವಿಶೇಷವಿಶೇಷಾಭ್ಯಾಂ ಓಂ (ವಾಯುಶಬ್ದಾಧಿಕರಣಂ)

'ಅವಿಶೇಷವಿಶೇಷಿತಾಭ್ಯಾಂ' ವಾಯುವಿಗೆ ಪ್ರಾಪ್ಯತ್ವ ಶೃತಿ ಇದ್ದು ಎರಡು ರೀತಿ ವಿಚಾರವಿದ್ದು ವಾಯುವಿಗೆ ಎರಡನೆಯ ಪ್ರಾಪ್ಯತ್ವವೇ ಎಂಬ ಅರ್ಥ.

### ೩) ಓಂ ಓಂ ತಟಿತೋಧಿವರುಣಃ ಸಂಬಂಧಾತ್ ಓಂ (ತಟಿದಧಿಕರಣಂ)

'ತಟಿತೋಧಿ' (ವರುಣನು) ತಟಿತತ್ವವನ್ನು ಹೊಂದಿದ ಮೇಲೆ ವರುಣ ಲೋಕ ಸಿಗುತ್ತದೆ. ಯಾಕೆಂದರೆ 'ಸಂಬಂಧಾತ್' ವರುಣನಿಗೆ ತಟಿತ (ದಂಡೆ) ದಿಂದ ಸಂಬಂಧವಿದ್ದ ಕಾರಣವೆಂದರ್ಥ.

### ೪) ಓಂ ಓಂ ಆತಿವಾಹಿಕಸ್ತಲ್ಲಿಂಗಾತ್ ಓಂ ( ಅತಿವಾಹಿಕಾಧಿಕರಣಂ)

ಮೊದಲಿಗೆ ಎರಡನೇಯ ಪ್ರಾಪ್ಯವಾಗಿ ಹೇಳಿದ ವಾಯು ಮುಖ್ಯನೆಲ್ಲಿ 'ಅತಿವಾಹಿಕಃ' (ಅಲ್ಲ) ಯಾಕೆಂದರೆ 'ತಲ್ಲಿಂಗಾತ್' ಮೊದಲಿಗೆ ಪ್ರಾಪ್ಯ ವಾಯು ಎಂದು ಶೃತಿಯಲ್ಲಿ ಹೇಳಿದ್ದರಿಂದ 'ಅರ್ಚಿಷಃ ಸ' ಎಂದು ರೂಪ 'ರೂಪಧರ್ವತ್ವೇನ' ಹೇಳಿದೆ ಎಂಬರ್ಥ.

**೫) ಓಂ ಓಂ ಉಭಯವ್ಯಾಮೋಹಾತ್ತತ್ಸಿದ್ಧೇಃ ಓಂ**

ಸಪ್ತಮಿಗೆ ಪಂಚಮ್ಯರ್ಥವು 'ಉಭಯವ್ಯಾಮೋಹಾತ್' ಮೊದಲು ಹೇಳಿದ ವಾಯು ಅತಿವಾಹಿಕರು ಮುಖ್ಯರೇ ಅಥವಾ ಅನಂತರದಲ್ಲಿ ಹೇಳಿದ ವಾಯು ಅತಿವಾಹಕ ಮುಖ್ಯನೇ ಎಂಬ ಸಂದೇಹ ಬಂದರೆ 'ತತ್ಸಿದ್ಧೇಃ' ಅವರಿಂದ ದಿವಸ್ಪತಿ ಎಂಬ ವಿಶೇಷಣದಿಂದ ಆ ಅನಂತರ ಹೇಳಿದ ವಾಯುವಿಗೆ ಮುಖ್ಯತ್ವ ಸಿದ್ಧಿಸುವುದರಿಂದ ಸಂಶಯವಿಲ್ಲವೆಂಬರ್ಥ.

**೬) ಓಂ ಓಂ ವೈದ್ಯುತೇನೈವತತಸ್ತಶ್ಛ್ರುತೇ ಓಂ (ವೈದ್ಯುತಾಧಿಕರಣಂ)**

ಜ್ಞಾನಿಯಾದವನು 'ವೈದುತೇನೈವ' ವಿದ್ಯುತ್ಪತಿಗಳಾದ ವಾಯುದೇವರ ಜತೆಗೆ (ಬ್ರಹ್ಮ) ಮೋಕ್ಷಕ್ಕೆ ಹೋಗುತ್ತಾನೆ. ಈ ಮಧ್ಯೆ ವಾಯುವಿನಿಂದ ಬೇರೆ ಒಬ್ಬನಿಂದ ಪ್ರಾಪ್ಯನಾಗುವುದಿಲ್ಲ. ಯಾಕೆಂದರೆ 'ತತ್ಶೃತೇಃ' ಆ ವಾಯುವೇ ಬ್ರಹ್ಮಗಮಕರೆಂದು 'ಸ ಏನಾನ್ ಬ್ರಹ್ಮ ಗಮಯತಿ' ಎಂದು ಬ್ರಹ್ಮಗಮಯಂತ್ಯ ರೂಪ ಶೃತಿ ಇದ್ದ ಕಾರಣವೆಂಬ ಅರ್ಥ.

**೭) ಓಂ ಓಂ ಕಾರ್ಯಂಬಾದರಿರಸ್ಯಗತ್ಯುಪಪತ್ತೇಃ ಓಂ (ಕಾರ್ಯಾಧಿಕರಣಂ)**

ಕಾರ್ಯ ಉತ್ಪತ್ತಿ ಕಾರಣೀಭೂತನಾದ ಬ್ರಹ್ಮದೇವರು ವಾಯುದೇವರ ಕಡೆಗೇ (ಗಮಯತಿ) ಕಳುಹಿಸುತ್ತಾರೆ ಎಂದು ಶೃತಿಯ ಅರ್ಥವಿದೆ ಎಂದು ಬಾದರೀ ಆಚಾರ್ಯರ ಅಭಿಪ್ರಾಯ. ಯಾಕೆಂದರೆ 'ಅಸ್ಯ' ಈ ಚತುರ್ಮುಖ ಬ್ರಹ್ಮರಿಗೇ 'ಗತ್ಯುಪಪತ್ತೇಃ' ಜ್ಞಾನಿಯನ್ನು ಕರೆದುಕೊಂಡು ಹೋಗುವುದಾದ್ದರಿಂದ ಎಂಬ ಅರ್ಥ.

**೮) ಓಂ ಓಂ ವಿಶೇಷಿತತ್ವಾಚ್ಚ ಓಂ**

'ಯದಿಹವಾವ' ಎಂಬ ಶೃತಿಯಲ್ಲಿ ಪ್ರಾಪ್ತವ್ಯನಾದ ಬ್ರಹ್ಮನಿಗೇ

ಚತುರ್ಮುಖ ಈ ಶಬ್ದದಿಂದಲೇ 'ವಿಶೇಷಿತತ್ವಾತ್' ಯೋಗ್ಯವೇ ಎಂದು ಅರ್ಥ.

**೯) ಓಂ ಓಂ ಸಾಮೀಪ್ಯಾತ್ತು ತದ್ವ್ಯಪದೇಶಃ ಓಂ**

ಯಾವುದರಿಂದ 'ಬ್ರಹ್ಮವಿದಾಪ್ನೋತಿ' ಎಂಬ ಬ್ರಹ್ಮಜ್ಞಾನಿಯು ಎಂದು ಪರಬ್ರಹ್ಮನ ಪ್ರಾಪ್ತಿಯ ನಿಮಿತ್ತ ಶೃತಿಯು. 'ಸಾಮೀಪ್ಯಾತ್' ಚತುರ್ಮುಖ ಬ್ರಹ್ಮನ ಹತ್ತಿರ ಹೋಗಿ ಅತ್ಯಂತ ಬೇಗ 'ಪರಂ' ಪರಮೇಶ್ವರನನ್ನು ಹೊಂದುತ್ತಾನೆಂದು ಕಾಲಸಾಮೀಪ್ಯತೋರುತ್ತದೆ. ಅದನ್ನನುಸರಿಸಿಯೇ ಪ್ರವೃತ್ತನಾಗುತ್ತಾನೆ. ಅದಕ್ಕೆ ಆ ವಾಕ್ಯಕ್ಕೆ ವಿರೋಧವಿಲ್ಲವೆಂದರ್ಥ.

**೧೦) ಓಂ ಓಂ ಕಾರ್ಯಾತ್ಯಯೇತದಧ್ಯಕ್ಷೇಣಸಹಾತಃ ಪರಮಭಿಧಾನಾತ್ ಓಂ**

'ಕಾರ್ಯತ್ಯಯೇ' ಮಹಾಪ್ರಲಯಕಾಲದಲ್ಲಿ 'ತದಧ್ಯಕ್ಷೇಣ ಸಹ' ಆ ಚತುರ್ಮುಖಬ್ರಹ್ಮದೇವರ ಜತೆಗೆ. ಅದಕ್ಕೆ ಅತಃ ಬ್ರಹ್ಮದಿಂದ 'ಪರಂ' ಉತ್ತಮ ನಾದ ವಿಷ್ಣ್ವಾಖ್ಯ ಬ್ರಹ್ಮನ ಹತ್ತಿರ ಜ್ಞಾನಿಯಾದವನು ಹೋಗುತ್ತಾನೆ ಎಂದು ಶೃತಿಯು ಇದೆ ಎಂದರ್ಥ.

**೧೧) ಓಂ ಓಂ ಸ್ಮೃತೇಶ್ಚ ಓಂ**

'ಬ್ರಹ್ಮಣಾ' ಮೊದಲಾದ ಸ್ಮೃತಿಗಳಿದ್ದ ಕಾರಣ ಜ್ಞಾನಿಯಾದವನು ಚತುರ್ಮುಖರಿಂದಲೇ ವಿಷ್ಣುವನ್ನು ಹೊಂದುತ್ತಾನೆ ಎಂದು ಸಿದ್ಧವಾಗುತ್ತದೆ ಎಂಬ ಅರ್ಥ.

**೧೨) ಓಂ ಪರಂ ಜೈಮಿನಿರ್ಮುಖ್ಯತ್ವಾತ್ ಓಂ**

ಜ್ಞಾನಿಯಾದವ ವಿಷ್ಣುವಿನ ಹತ್ತಿರವೇ ಹೋಗುತ್ತಾನೆ. ವಿನಃ ಕಾರ್ಯ ಬ್ರಹ್ಮನ ಹತ್ತಿರವಿಲ್ಲ. ಯಾಕೆಂದರೆ 'ಮುಖ್ಯತ್ವಾತ್' ಬ್ರಹ್ಮಶಬ್ದದಿಂದ ಪರಬ್ರಹ್ಮನಲ್ಲಿಯೇ

ಮುಖ್ಯ ವೃತ್ತಿ ಇರುವುದರಿಂದ ಎಂದು ಜೈಮಿನ್ಯಾಚಾರ್ಯರ ಮತವೆಂದರ್ಥ.

## ೧೩) ಓಂ ಓಂ ದರ್ಶನಾಚ್ಚ ಓಂ

ಜ್ಞಾನಿಯಾದವನು ಪರಬ್ರಹ್ಮನ ಸಮೀಪಕ್ಕೆ ಹೋಗುತ್ತಾನೆ. ಯಾಕೆಂದರೆ ಅವನಿಂದ ಶ್ರವಣಾದಿಗಳನ್ನು ಮಾಡಿ ದೇವರ ದರ್ಶನವನ್ನೇ ಮಾಡಿಕೊಂಡದ್ದರಿಂದ ಎಂದರ್ಥ.

## ೧೪) ಓಂ ಓಂ ನ ಚ ಕಾರ್ಯೇಪ್ರತಿಪತ್ಯಭಿಸಂಧಿಃ ಓಂ

ಹೀಗೆ ವಿಚಾರ ಮಾಡಿದರೂ ಜ್ಞಾನಿಗೆ ಕಾರ್ಯಬ್ರಹ್ಮನ ಹತ್ತಿರ ಹೋಗುವುದು ಕೂಡುವುದಿಲ್ಲ. ಯಾಕೆಂದರೆ 'ಚ ಕಾರ್ಯೇ' ಬ್ರಹ್ಮನಲ್ಲಿ ಜ್ಞಾನಿಯಾದವನಿಗೆ 'ಪ್ರತಿಪತ್ಯಭಿಸಂಧಿಃ' ಉಪಾಸನೆ ಮಾಡುವುದು ಆಗಲಿ ಆ ಬ್ರಹ್ಮನ ಸಮೀಪದಲ್ಲಿ ಹೋಗಬೇಕೆಂಬ ಇಚ್ಛೆ ಇರುವುದಿಲ್ಲ ಅದಕ್ಕೆ ಎಂಬ ಅರ್ಥ.

## ೧೫) ಓಂ ಓಂ ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ ಉಭಯಥಾ ಚ ದೋಷಾತ್ತತ್ಕ್ರತುಶ್ಚ ಓಂ

'ಅಪ್ರತೀಕಾಲಂಬನಾನಂ' ವಾಯುದೇವರು ವ್ಯಾಪ್ತೋಪಾಸಕರಾದ ಅಧಿಕಾರಿಗಳನ್ನು ಮಾತ್ರ 'ನಯತಿ' ಪರಬ್ರಹ್ಮನ ಹತ್ತಿರ ಕರೆದುಕೊಂಡು ಹೋಗುತ್ತಾರೆ. ಬೇರೆ ಪ್ರತೀಕಾಲಂಬನರಾದ ಜ್ಞಾನಿಗಳನ್ನು ( ದೇಹವಿರುವವರೆಗೆ ಮಾತ್ರ ಉಪಾಸನೆ ಮಾಡುವರು) ಚತುರ್ಮುಖ ಬ್ರಹ್ಮದೇವರು ಕಳುಹಿಸುತ್ತಾರೆ. 'ಸ ಏನಾನ್' ಎಂಬ ಶೃತ್ಯರ್ಥವನ್ನು ಬಾದರಾಯಣಾಚಾರ್ಯರು ಒಪ್ಪುತ್ತಾರೆ. ಯಾಕೆಂದರೆ 'ಉಭಯಥಾ ಚ ದೋಷಾತ್' ಈ ವ್ಯವಸ್ಥೆಯನ್ನು ಒಪ್ಪದೇ ಎಲ್ಲರಿಗೂ ಒಂದೊಂದು ರೀತಿಯಿಂದ ಪ್ರಾಪ್ತವಾಗುತ್ತದೆಂದರೆ ಅಥವಾ ಕಾರ್ಯಬ್ರಹ್ಮನಿಂದ ಪರಬ್ರಹ್ಮನ ಹತ್ತಿರ ಹೋಗುವುದೆಂದು ಒಪ್ಪಿದರೆ ಈ ಎರಡೂ ಪಕ್ಷಗಳಿಂದಲೂ ದೋಷ ಬರುತ್ತದೆ ಮತ್ತು 'ಯತ್ರಾಪ್ತುರಭಿವಾಂಛಿತ ತತ್ರಾಪ್ನೋತಿ' ಎಂಬ ವಚನವಿದ್ದದ್ದರಿಂದ.

ಆಯಾ ಜ್ಞಾನಿಗಳ ಇಚ್ಛೆಯಂತೆ ಆಯಾ (ಲೋಕ) ಮೋಕ್ಷಪ್ರಾಪ್ತಿಯಾಗುವುದ ರಿಂದ ಹಿಂದೆ ಹೇಳಿದ ವ್ಯವಸ್ಥೆಯನ್ನು ಒಪ್ಪಬಾರದೆಂದರೆ ಅದಕ್ಕೆ ಹೇಳುತ್ತಾರೆ. 'ತತ್ಕ್ರತುಶ್ಚ' ಇದರಿಂದ 'ಸ ಯಥಾಕಾಮೋಭವತಿ ತತ್ಕ್ರತು (ಶ್ಚ) ರ್ಭವತಿ' ಇತ್ಯಾದಿ ಶೃತಿಯನ್ನು ಸ್ವೀಕರಿಸಲಾಗುವುದು ಮತ್ತು 'ಚ' ಎಂಬ ಅರ್ಥ. ಅದಕ್ಕೆ ಅವನು ಹೇಗೆ 'ಯಥೇತಿ' ಶೃತಿ ಅದನ್ನೆಲ್ಲವನ್ನೂ ಇಚ್ಛಾ ಮಾತ್ರದಿಂದಲೇ ಪಡೆ ಯುತ್ತಾನೆ. ಎಂದೂ ಯಾವನಿಗೆ ಪ್ರತಿಷೇಧವು ತೋರಿಸುತ್ತಾರೆ. ಹೇಗೆಂದರೆ ಜ್ಞಾನಿಯಲ್ಲಿಯ ಜ್ಞಾನ ಮತ್ತು ಅವನ ಉಪಾಸನೆಯಿಂದ ವ್ಯಕ್ತವಾದ ಅಪರೋಕ್ಷಜ್ಞಾನಿವರೇಣ್ಯರಿಗೆ ಮಾತ್ರ ಆದರ ಪ್ರಾಪ್ತಿಯಾಗುವುದೆಂದು ಹೇಳುತ್ತಾರೆ. ಅದಕ್ಕೆ ಅವರವರ ಇಚ್ಛಾಮಾತ್ರದಿಂದಲೇ ಅವರಿಗೆ ಅದು ಲಭಿಸುವುದೆಂದು ಹೇಳುವುದು ಯೋಗ್ಯವಲ್ಲವೆಂಬ ಅರ್ಥ.

೧೬) ಓಂ ಓಂ ವಿಶೇಷ ಚ ದರ್ಶಯತಿ ಓಂ

ಯಾಕೆಂದರೆ 'ಅಂತಪ್ರಕಾಶಾಃ' ಈ ಶೃತಿಯು ಕೆಲವರು ಅಪ್ರತೀಕಾಲಂಬನರು ಕೆಲವರು ಪ್ರತೀಕಾಲಂಬನರು ಎಂದು ವಿಶೇಷ ವಿಶೇಷತೆಯನ್ನು ಭೇದವನ್ನು 'ದರ್ಶಯತಿ' ಪ್ರತಿಪಾದಿಸುತ್ತದೆ. ಆದರಿಂದ ಹೇಳಿರುವುದೆಲ್ಲವೂ ಯೋಗ್ಯ ವಾದದ್ದೇವೆಂಬ ಅರ್ಥ.

**ಇತಿ ಶ್ರೀಜಗನ್ನಾಥಯತಿಕೃತಾಯಾಂ ಸೂತ್ರದೀಪಿಕಾಯಾಂ**
**ಚತುರ್ಥಾಧ್ಯಾಯಸ್ಯ ತೃತೀಯಃ ಪಾದಃ**

**ಉಮರ್ಜಿ ಪ್ರಲ್ಹಾದಾಚಾರ್ಯ ಕೃತ ಸೂತ್ರದೀಪಿಕಾ ಕನ್ನಡ ಅನುವಾದದ ನಾಲ್ಕನೇ ಅಧ್ಯಾಯದ ಮೂರನೇಪಾದ ಮುಗಿಯಿತು.**

**॥ ಸೂತ್ರದೀಪಿಕಾ ॥**

## ಅಥ ಚತುರ್ಥಾಧ್ಯಾಯಸ್ಯ ತಚುರ್ಥಪಾದಃ ಪ್ರಾರಂಭಃ

### ೧) ಓಂ ಓಂ ಸಂಪದ್ಯಾವಿಹಾಯ ಸ್ವೇನಶಬ್ದಾತ್ ಓಂ (ಸಂಪದ್ಯಾಧಿಕರಣಂ)

ಜ್ಞಾನಿಯಾದವನು 'ಸಂಪದ್ಯ' ಬ್ರಹ್ಮನನ್ನು ಪಡೆದು 'ಅವಿಹಾಯ' ಬ್ರಹ್ಮನನ್ನು (ದಾಟದೇ) ಅತಿಕ್ರಮಿಸದೇ 'ಸ್ವೇನ' ಸ್ವಸ್ವರೂಪಾವಿರ್ಭಾವದಿಂದ ಯುಕ್ತನಾಗಿ ಭೋಗಗಳನ್ನು ಉಪಭೋಗಿಸುತ್ತಾನೆ. ಯಾಕೆಂದರೆ 'ಶಬ್ದಾತ್ ಸ ಏವಂವಿತ್' ಈ ಶೃತಿಯಿಂದವೆಂಬರ್ಥ.

### ೨) ಓಂ ಓಂ ಮುಕ್ತಃ ಪ್ರತಿಜ್ಞಾನಾತ್ ಓಂ (ಮುಕ್ತಧಿಕರಣಂ)

'ಸತತ್ರಪರ್ಯೇತಿ' ಎಂಬ ಶೃತಿಯಲ್ಲಿ ಪ್ರತಿಪಾದ್ಯನು 'ಮುಕ್ತಃ' ನಾದವನೇ ವರ್ಣಿತನಾಗುತ್ತಾನೆ. ಯಾಕೆಂದರೆ 'ಪ್ರತಿಜ್ಞಾನಾತ್' ಮುಕ್ತರಿಂದ ಬೇರೆಯಾದವರಿಗೆ ಮೋಕ್ಷದ ಭೋಗವು ನಿಷೇಧಿಸಿದೆ. 'ಅಹರಹಃ' ಈ ಶೃತಿಯಲ್ಲಿ ಮುಕ್ತನಿಗೇ ಮುಕ್ತಿಯ ದಿವ್ಯಭೋಗವೆಂದು ಹೇಳಲಾಗಿದೆ ಎಂಬ ಅರ್ಥ.

### ೩) ಓಂ ಓಂ ಆತ್ಮಾಪ್ರಕರಣಾತ್ ಓಂ (ಆತ್ಮಾಧಿಕರಣಂ)

ಪರಂಜ್ಯೋತಿ ಶಬ್ದದಿಂದ ವಿಷ್ಣುವೇ 'ಆತ್ಮಾ' ಎನಿಸಿಕೊಳ್ಳುತ್ತಾನೆ ವಿನಃ ಸೂರ್ಯನಲ್ಲ. ಯಾಕೆಂದರೆ 'ಪ್ರಕರಣಾತ್' ಈ ವಾಕ್ಯವು ಪರಮಾತ್ಮ ಪ್ರಕರಣದಲ್ಲಿ ಹೇಳಿದ್ದರಿಂದ ಎಂಬ ಅರ್ಥ.

### ೪) ಓಂ ಓಂ ಅವಿಭಾಗೇನ ದೃಷ್ಟತ್ವಾತ್ ಓಂ (ಅವಿಭಾಗಾಧಿಕರಣಂ)

'ಅವಿಭಾಗೇನ' ಪರಮಾತ್ಮನಿಂದ ಭುಕ್ತಭೋಗವನ್ನೇ ಕ್ರಮವಾಗಿ ಮುಕ್ತಿಯಲ್ಲಿಯ ಎಲ್ಲರೂ ಭೋಗ ಮಾಡುತ್ತಾರೆ. ಯಾಕೆಂದರೆ 'ದೃಷ್ಟತ್ವಾತ್ ಯಾನೇವಾಹಂ' ಎಂಬ ಶೃತಿಯಿಂದ ಎಂರ್ಥ.

**೫) ಓಂ ಓಂ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ (ಬ್ರಾಹ್ಮಾಧಿಕರಣಂ)**

'ಬ್ರಾಹ್ಮೇನ' ಬ್ರಹ್ಮಸಂಬಂಧಿದೇಹದಿಂದ ಮುಕ್ತನಾದವನು ಭೋಗವನ್ನು ಮಾಡುತ್ತಾನೆ. ಯಾಕೆಂದರೆ 'ಉಪನ್ಯಾಸಾಧಿಭ್ಯಃ ಬ್ರಹ್ಮಣಾ' ಎಂಬ ಶೃತಿಯಿಂದ ಮತ್ತು ಆದಿಪದದಿಂದ 'ಅತಃ' ಮೊದಲಾದ ಸ್ಮೃತಿಗಳು ಯುಕ್ತಿಗಳೂ ಇವೆ ಎಂದು ಜೈಮಿನ್ಯಾಚಾರ್ಯರ ಅಭಿಪ್ರಾಯವೆಂದರ್ಥ.

**೬) ಓಂ ಓಂ ಚಿತಿಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ ಓಂ**

'ಚಿತಿಮಾತ್ರೇಣ' ಜ್ಞಾನೈಕ ಸ್ವರೂಪದೇಹದಿಂದ ಮುಕ್ತನಾದವನು ಭೋಗ ಮಾಡುತ್ತಾನೆ. ಯಾಕೆಂದರೆ 'ತದಾತ್ಮಕತ್ವಾತ್' ಜ್ಞಾನಮಾತ್ರ ಶರೀರವೇ ಮುಕ್ತ ಸ್ವರೂಪವೆಂದು ಇದ್ದ ಪ್ರಯುಕ್ತ ಆ ಶರೀರಕ್ಕೆ ಸೃಷ್ಟಿ ಮೊದಲಾದ ದೋಷರಹಿತ ವಾದದ್ದೆಂದು ಔಡುಲೋಮಿ ಆಚಾರ್ಯರ ಮತವೆಂಬರ್ಥ.

**೭) ಓಂ ಓಂ ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ ಓಂ**

'ಏವಂ' ಔಡುಲೋಮ್ಯಾಚಾರ್ಯರ ಅಭಿಪ್ರಾಯಕ್ಕೆ 'ಉಪನ್ಯಾಸಾತ್ ಸ ವಾ ಏಷಃ' ಎಂದು ಶೃತಿಯಲ್ಲಿ ಹೇಳಿದ ಪ್ರಯುಕ್ತವಾಗಿ 'ಪೂರ್ವಭಾವಾತ್' ಮೊದಲಿನ ಜೈಮಿನ್ಯಾಚಾರ್ಯರ ಮತದಲ್ಲಿಯೂ ಪ್ರಮಾಣಗಳಿರುವುದರಿಂದ 'ಅವಿರೋಧಂ' ಎರಡೂ ಪಕ್ಷಗಳಲ್ಲಿ ವಿರೋಧವಿಲ್ಲವೆಂಬುದಾಗಿ ಬಾದರಾಯಣಾಚಾರ್ಯರ ಅಭಿಪ್ರಾಯವೆಂಬ ಅರ್ಥ.

**೮) ಓಂ ಓಂ ಸಂಕಲ್ಪಾದೇವಚತತಶ್ಶೃತೇಃ ಓಂ (ಸಂಕಲ್ಪಾಧಿಕರಣಂ)**

'ಚ' ಪಕ್ಷಗಳಲ್ಲಿಯ ವಿರೋಧ ಪರಿಹಾರಕ್ಕೆ 'ಚ' ಶಬ್ದ. 'ಸಂಕಲ್ಪಾದೇವ'

ಸ್ವೇಚ್ಛಾಪ್ರಕಾರವಾಗಿಯೇ ಮುಕ್ತರು ಉಪಭೋಗ ಮಾಡುತ್ತಾರೆ. ಭೋಗಗಳನ್ನು ಯಾಕೆಂದರೆ 'ತಚ್ಛ್ರುತೇಃ', 'ತಸ್ಮಿನ್ನರ್ಥೇ', 'ಸ ಯದಿ' ಇವೇ ಮೊದಲಾದ ಶೃತಿಗಳೆಂದರ್ಥ.

**೯) ಓಂ ಓಂ ಅತ ಏವ ಚಾನ್ಯಾಧಿಪತಿಃ ಓಂ (ಅನನ್ಯಾಧಿಪತ್ಯಧಿಕರಣಂ)**

'ಚ' ವಿರುದ್ಧ ಸಂಶಯ ಪರಿಹಾರವಾಗಿ 'ಅನನ್ಯಾಧಿಪತಿಃ' ಮುಕ್ತನಾದವನು ತನ್ನಕಿಂತಲೂ ಶ್ರೇಷ್ಠರಾದ ತಮ್ಮವರ ಅಧಿಪತ್ಯದಿಂದ ಯುಕ್ತನಾಗಿರುತ್ತಾನೆ ಎಂದಿಲ್ಲ. ಯಾಕೆಂದರೆ 'ಅತ ಏವ' ಸತ್ಯಸಂಕಲ್ಪದಿಂದಲೇ ಎಂಬ ಅರ್ಥ.

**೧೦) ಓಂ ಓಂ ಅಭಾವಂ ಬಾದರಿರಾಹಹ್ಯೇವಂ ಓಂ (ಅಭಾವಾಧಿಕರಣಂ)**

ಪ್ರಾಕೃತ ದೇಹವಿಲ್ಲದಿದ್ದರೂ ಮುಕ್ತನಿಗೆ ಚಿನ್ಮಾತ್ರ ಶರೀರದಿಂದಲೇ ಭೋಗವಿದೆ ಎಂದು ಬಾದರಿಯೆಂಬ ಆಚಾರ್ಯರ ಅಭಿಪ್ರಾಯ. ಯಾಕೆಂದರೆ ಪ್ರಾಕೃತ ಶರೀರವಿಲ್ಲದಿದ್ದವರಿಂದ 'ಅಶರೀರೋವಾ' ಈ ಶೃತಿ ಇದ್ದದ್ದರಿಂದ ಹಾಗೆಂದರ್ಥ.

**೧೧) ಓಂ ಓಂ ಭಾವಂ ಜೈಮಿನಿರ್ವಿಕಲ್ಪಾಮ್ನಾನಾತ್ ಓಂ**

ಜೈಮಿನಿ ಆಚಾರ್ಯರು ಮುಕ್ತರಿಗೆ ಭಾವ ಚಿನ್ಮಾತ್ರವ್ಯತಿರಿಕ್ತವಾದ ದೇಹವಿದೆ ಎಂದು ಹೇಳುತ್ತಾರೆ. ಯಾಕೆಂದರೆ 'ವಿಕಲ್ಪಾಮ್ನಾನಾತ್' ವಿಭಾಗದಿಂದ ಎರಡೂ ವಿಧವಾದದ್ದು ದೇಹವಿದೆಯೆಂದು ಹೇಳಿದ ಪ್ರಯುಕ್ತ 'ಚಿತಾ ವಾ ಅಚಿತಾ ವಾ' ಎಂಬ ಶೃತಿಯಿಂದ ಪ್ರತಿಪಾದನೆ ಮಾಡುತ್ತಾರೆ ಎಂಬ ಅರ್ಥ.

**೧೨) ಓಂ ಓಂ ದ್ವಾದಶಾವಹದುಭಯವಿಧಂ ಬಾದರಾಯಣೋತಃ ಓಂ**

'ಬಾದರಾಯಣಃ ವ್ಯಾಸರು ಉಭಯ ವಿಧಂ' ಪ್ರಾಕೃತದೇಹ ಇದೆ-ಇಲ್ಲವೆಂಬ ಎರಡೂ ವಿಧವಾದ ನಮ್ಮ ಮತವೆಂದು ಹೇಳುತ್ತಾರೆ. ಯಾಕೆಂದರೆ 'ಅತಃ'

ಪ್ರಮಾಣವಿರುವುದರಿಂದ ಅದು ಹೇಗೆ ಕೂಡುತ್ತದೆ (ಯೋಗ್ಯ)ವೆಂದರೆ 'ದ್ವಾದಶಾವಹವತ್' ಯಾವ ರೀತಿ ಹನ್ನೆರಡು ದಿವಸದ ಯಾಗ ಕ್ರತು ಮತ್ತು ಸತ್ರವೆನಿಸಿಕೊಳ್ಳುತ್ತದೆಯೋ ಹಾಗೆಯೇ ಇಲ್ಲಿಯೂ ಎಂಬ ಅರ್ಥ.

೧೩) ಓಂ ಓಂ ತನ್ವಭಾವೇ ಸಂಧ್ಯವದುಪಪತ್ತೇಃ ಓಂ

'ಸಂಧ್ಯವತ್' ಯಾವ ರೀತಿ ಸ್ವಪ್ನಾವಸ್ಥೆಯಲ್ಲಿ ಹೊರಗಿನ ದೇಹದ ಪರಿಜ್ಞಾನವಿಲ್ಲದಿದ್ದರೂ ಕೂಡ ಭೋಗಸಂಬಂಧವಿರುವುದೋ ಹಾಗೆಯೇ 'ತನ್ವಭಾವೇ' ಪ್ರಾಕೃತದೇಹವಿಲ್ಲದಿದ್ದರೂ ಕೂಡ 'ಉಪಪತ್ತೇಃ' ಭೋಗವು ಮಾಡುವುದು ಯುಕ್ತವಾಗಿರುವುದರಿಂದ ದೇಹವಿಲ್ಲದ ಪಕ್ಷವೂ ಯೋಗ್ಯವೇ ಎಂಬ ಅರ್ಥ.

೧೪) ಓಂ ಓಂ ಭಾವೇ ಜಾಗ್ರದ್ವತ್ ಓಂ

ಜಾಗ್ರದ್ವತ್ ಎಚ್ಚರವಾಗಿದ್ದ ಕಾಲದಲ್ಲಿ ದೇಹವಿದ್ದದ್ದರಿಂದ ಭೋಗ ಕೂಡುತ್ತದೆಯೋ ಹಾಗೆಯೇ ಮುಕ್ತಿಯಲ್ಲಿಯೂ ಕೂಡ ಭೋಗ ಮಾಡುವುದು ಕೂಡುತ್ತದೆ ಎಂಬ ಅರ್ಥ.

೧೫) ಓಂ ಓಂ ಪ್ರದೀಪವದಾವೇಶಸ್ತಥಾಹಿ ದರ್ಶಯತಿ ಓಂ

'ಪ್ರದೀಪವತ್' ಯಾವ ರೀತಿ ಪ್ರದೀಪಕ್ಕೆ ದೀಪದಿಂದ ಬೆಳಕೋ ಅದರಲ್ಲಿ ತೈಲ ಮೊದಲಾದ ಭೋಗವು ಅದಕ್ಕೆ ಬಂದ ಕಪ್ಪು, ಕೃಷಿತ ಇವು ಅಭೋಗಗಳು. ಅದರಂತೆ ಮುಕ್ತರಿಗೆ (ಆವೇಶಃ) ಜಡ ಶರೀರದಲ್ಲಿ ಪ್ರವೇಶವು. ಅಲ್ಲಿ ಯೋಗ್ಯ ಭೋಗದ ಅನುಭವವೂ ಹಾಗೂದುಃಖಾದಿಗಳ ಅನನುಭವವೂ ಇದೆ. ಯಾಕೆಂದರೆ 'ಹಿ'. 'ತೀರ್ಣೋಹಿ' ಈ ಶೃತಿಯು 'ತಥಾದರ್ಶಯತಿ' ಆ ರೀತಿಯಾಗಿ ಪ್ರತಿಪಾದಿಸುತ್ತದೆ ಅದಕ್ಕೆ ಎಂಬ ಅರ್ಥ.

## ೧೬) ಓಂ ಓಂ ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ ಓಂ

'ಸ್ವರ್ಗಲೋಕೆ' ಈ ವಾಕ್ಯವು 'ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷ್ಯಂ' ಬೇರೆಯವರ ವಿಷಯಕವಾದದ್ದಿದು. ಯಾಕೆಂದರೆ ಇದಕ್ಕೆ ಕೂಡ 'ಅತ್ರ ಪಿತಾ ಅಪಿತಾ' ಈ ಶೃತಿಯಿಂದ ಸ್ವಾಪ-ಮುಕ್ತಿ ವಿಷಯಕವಾಗಿ 'ಆವಿಸ್ಕೃತಂ' ವ್ಯಕ್ತವಾದದ್ದಾಗಿದೆ. ಅದಕ್ಕೋಸ್ಕರವಾಗಿ ಎಂಬರ್ಥ.

## ೧೭) ಓಂ ಓಂ ಜಗದ್ವ್ಯಾಪಾರವರ್ಜಂ ಓಂ (ಜಗದ್ವ್ಯಾಪಾರಾಧಿಕರಣಂ)

ಮುಕ್ತನಲ್ಲಿ ಜಗತ್ತಿನ ವ್ಯಾಪಾರವು ವರ್ಜ್ಯವಾಗಿರುತ್ತದೆ. ಅವು ಹೇಗಿರಬೇಕೋ ಹಾಗೇ ಇರುತ್ತಿದ್ದೂ ಎಲ್ಲ ಕಾಮನೆಗಳನ್ನೂ ಪೂರ್ಣ ಪಡೆಯುತ್ತಾನೆ ಎಂಬ ಅರ್ಥ.

## ೧೮) ಓಂ ಓಂ ಪ್ರಕರಣಾದಸನ್ನಿಹಿತತ್ವಾಚ್ಚ ಓಂ

ಚ ಶಬ್ದವು ಆಗುವುದನ್ನು ತೋರಿಸುವ ಸೂಚಕ ಸರ್ವಾನ್ ಕಾಮಾನ್ ಇಲ್ಲಿ ಜೀವನು ಹೇಳಿಸಿಕೊಳ್ಳುತ್ತಾನೆ. ಯಾಕೆಂದರೆ 'ಪ್ರಕರಣಾತ್' ಈ ವಾಕ್ಯವು ಜೀವ ಪ್ರಕರಣಕ್ಕೆ ಸಂಬಂಧಿಯಾಗಿದೆ. ಮತ್ತು ಅಲ್ಲಿ ಸಂಕೋಚ ಮಾಡದೇ ಜೀವನಿಗೆ ಎಲ್ಲ ಕಾಮುಭೋಗವು ಉಪಯೋಜಿಸಲಾಗುತ್ತದೆ. ಆದರೆ ಸಂಕೋಚದಿಂದಲೇ. ಜೀವರಿಗೆ ಜಗದ್ವ್ಯಾಪಾರ ಸಾಮರ್ಥ್ಯವಿಲ್ಲದ್ದರಿಂದ ಎಂಬ ಅರ್ಥ.

## ೧೯) ಓಂ ಓಂ ಪ್ರತ್ಯಕ್ಷೋಪದೇಶಾದಿತಿಚೇನ್ನಾಧಿಕಾರಿಕಮಂಡಲಸ್ಥೋಕ್ತೇಃ ಓಂ

ಮುಕ್ತರಿಗೆ ಜಗದೈಶ್ವರ್ಯಾದಿಗಳಿದೆ ಎಂದು ಒಪ್ಪಬೇಕು. ಯಾಕೆಂದರೆ 'ಪ್ರತ್ಯಕ್ಷೋಪದೇಶಾತ್', 'ತಾಯೋ ವೇದ' ಇತ್ಯಾದಿ ಶೃತಿಯಿಂದ ಸ್ಪಷ್ಟವಾಗಿ ಮುಕ್ತ

ನಾದವನು ಎಲ್ಲ ದೇವತೆಗಳಿಂದಲೂ ಪೂಜ್ಯನೆಂದು ವರ್ಣಿಸಿದೆ ಎಂದರೆ ಅದು ಸರಿಯಲ್ಲ. ಯಾಕೆಂದರೆ ಅಧಿಕಾರ ಮಂಡಲಸ್ಥೋಕ್ತೇಃ ಇಲ್ಲಿ ಮುಕ್ತಬ್ರಹ್ಮನಿಗೇ ಮುಕ್ತರಾದ ತಮ್ಮ ತಮ್ಮ ಅಧಿಕಾರದಲ್ಲಿ ನಿಯುಕ್ತರಾದ ದೇವತೆಗಳ ಸಮೂಹದಿಂದ ಪೂಜ್ಯರೆಂದು ಹೇಳಿರುವುದರಿಂದ ಎಂಬ ಅರ್ಥ.

**೨೦) ಓಂ ಓಂ ವಿಕಾರಾವೃರ್ತ್ತಿ ಚ ತಥಾ ಹಿ ದರ್ಶಯತಿ ಓಂ**

'ಚ ನಿಷ್ಕರ್ಷಾರ್ಥ ಮುಕ್ತಾನಾಂ ವಿಕಾರಾವೃತ್ತಿಃ' ಮುಕ್ತರಿಗೆ ವಿಕಾರವಾಗಲೀ ಸಂಸಾರದಲ್ಲಿ ಆವೃತ್ತಿಯಾಗಲೀ ಸಂಸಾರ ವಿಷಯಕ ಯಾವುದೇ ವ್ಯಾಪಾರವಾಗಲೀ ಅವರಲ್ಲಿ ಇರುವುದಿಲ್ಲ. ಯಾಕೆಂದರೆ 'ಇಯಂ' ಎಂಬ ಶೃತಿಯು 'ತಥಾ ದರ್ಶಯತಿ' ಹಾಗೆ ಪ್ರತಿಪಾದನೆ ಮಾಡುತ್ತದೆ ಎಂಬ ಅರ್ಥ.

**೨೧) ಓಂ ಓಂ ಸ್ಥಿತಿಮಾಹದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ಓಂ (ಸ್ಥಿತ್ಯಧಿಕರಣಂ)**

ಮುಕ್ತನಾದವನಿಗೆ ಒಂದೇ ರೀತಿ ಇರುವಣಿಗೆಯೇ ವಿನಃ ಅವನಲ್ಲಿ ವೃದ್ಧಿಹ್ರಾಸಾದಿಗಳು ಇರುವುದಿಲ್ಲ. ಯಾಕೆಂದರೆ ಯಾವ 'ಸ ಏಷಃ' ಇತ್ಯಾದಿ ಶೃತಿಯು ಸ್ಥಿತಿ ಒಂದೇ ರೀತಿಯಾಗಿ ಇರುವುದಾಗಿ ಹೇಳಲಾಗಿದೆ. ಅದಕ್ಕೆ ಕೇವಲ ಶೃತಿಯಷ್ಟೇ ಅಲ್ಲ 'ಪ್ರತ್ಯಕ್ಷಾನುಮಾನೇ' ಜ್ಞಾನಿ, ಪ್ರತ್ಯಕ್ಷ ಮತ್ತು ಕಾರಣವಿಲ್ಲದಿರುವ ಹೇತು ಇದೂ ಇದೆ ಎಂದು ಶೃತಿಯಲ್ಲಿ ಹೇಳಿದ ಅರ್ಥವೆಂದು 'ದರ್ಶಯತಃ' ಜ್ಞಾಪನೆ ಮಾಡಿಕೊಡುತ್ತವೆ. ಅದಕ್ಕೆ ಎಂಬ ಅರ್ಥ.

**೨೨) ಓಂ ಓಂ ಭೋಗಮಾತ್ರ ಸಾಮ್ಯಲಿಂಗಾಚ್ಚ ಓಂ**

ಬೇರೆ ಕಡೆ ವಿಶೇಷ ತೋರದಿದ್ದರೂ 'ಭೋಗಮಾತ್ರಸ್ಯ' ವಿಶೇಷವಿದ್ದರೂ 'ಮುಕ್ತಸ್ಯ' ಮುಕ್ತನಾದವನಿಗೆ 'ಸಾಮ್ಯಲಿಂಗಾತ್' ಒಂದೇ ಪ್ರಕಾರ (ಸಮಾನ)

ವಾಗಿಯೇ ಇರುವ ಭೋಗರೂಪ ಲಿಂಗ ಕಾರಣದಿಂದ ಆ ಭೋಗದಲ್ಲಿ ವೈಶಿಷ್ಟ್ಯವಿಲ್ಲ. ಅದರಲ್ಲಿ ವೃದ್ಧಿ ಇಲ್ಲ ಹ್ರಾಸವಂತೂ ಇಲ್ಲವೇ ಇಲ್ಲ. ಸಮಾನವಾದ ಭೋಗ ಯಾವಾಗಲೂ ಇದ್ದೇ ಇರುತ್ತದೆ ಎಂಬ ಅರ್ಥ.

**೨೩) ಓಂ ಓಂ ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ಓಂ (ಅನಾವೃತ್ತ್ಯಧಿಕರಣಂ)**

ಮುಕ್ತನಾದವನಿಗೆ ಪುನಃ ಜನನಾದಿಗಳು ಯಾವಾಗಲೂ ಇಲ್ಲವೇ ಇಲ್ಲ. ಯಾಕೆಂದರೆ 'ಶಬ್ದಾತ್ ನ ಚ ಪುನರಾವರ್ತತೇ ನ ಚ ಪುನರಾವರ್ತತೇ' ಈ ಶೃತಿ ಇದ್ದ ಕಾರಣವಾಗಿ ಮುಕ್ತನಾದವನಿಗೂ ಪುನಃ ಸಂಸಾರವಲ್ಲಿ ಪ್ರವೇಶವೇ ಇಲ್ಲವೆಂಬ ಅರ್ಥ. ಇಲ್ಲಿಯ ಅಧ್ಯಾಯದ ಕೊನೆಯಲ್ಲಿ ಹೇಳಿರುವ ಎಲ್ಲ ವಿಷಯಗಳಿಗೂ ದಾರ್ಢ್ಯತೆಯನ್ನು ತೋರಿಸುವುದಕ್ಕೋಸ್ಕರವಾಗಿಯೇ ಅಧ್ಯಾಯದ ಕೊನೆಯಲ್ಲಿ ದ್ವಿರುಕ್ತಿ ಇರುವುದೆಂದು ತಿಳಿಯಬೇಕು.

ಇತಿ ಶ್ರೀಮನ್ಮಾನಸಾಂಬುಜಸ್ಥೇನ ಹರಿಣಾಚೇಕ್ಷಯಾಂಜಸಾಭೂತಿದಾ
ಯಕಯಾ ಕೃಷ್ಣಃ ಪ್ರೀಯತಾಂ ಕಮಲಾಲಯಃ

**ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯಾಣಾಂ ಶ್ರೀಮದ್ರಘು
ನಾಥತೀರ್ಥ ಪೂಜ್ಯಪಾದಾನಾಂ ಶಿಷ್ಯೇಣ ಶ್ರೀಜಗನ್ನಾಥಯತಿನಾ
ಕೃತಾಯಾಂ ಬ್ರಹ್ಮಸೂತ್ರದೀಪಿಕಾಯಾಂ ಚತುರ್ಥಾಧ್ಯಾಯಸ್ಯ
ಚತುರ್ಥಃ ಪಾದಃ**

**|| ಶ್ರೀಕೃಷ್ಣಾರ್ಪಣಮಸ್ತು ||**

**ಉಮರ್ಜೀವಂಶಸಂಭೂತೊಪ್ರಲ್ಹಾದೂವೋದಶಿಷ್ಯ (ಕಃ) ಚ
ಪ್ರಾಕೃತೇ ಸೂತ್ರ ವ್ಯಾಖ್ಯಾನಂ ಕೃತಾಸಜ್ಜನತುಷ್ಟಯೆ**

|| ಸೂತ್ರದೀಪಿಕಾ ||

**ಶ್ರೀಪರಮ ಪೂಜ್ಯ ಜಗನ್ನಾಥಯತಿಗಳಿಂದ ವಿರಚಿತವಾದ ಸೂತ್ರ
ದೀಪಿಕಾ ಉಮರ್ಜಿ ಪ್ರಲ್ಹಾದಾಚಾರ್ಯರಾದ ಕೃತ ಕನ್ನಡ
ವಾಖ್ಯಾನದಲ್ಲಿಯ ನಾಲ್ಕನೇಯ ಅಧ್ಯಾಯದಲ್ಲಿಯ ನಾಲ್ಕನೇ ಪಾದ
ಮುಗಿಯಿತು.  ನಾಲ್ಕನೇ ಅಧ್ಯಾಯ ಸಮಾಪ್ತಿ ಗ್ರಂಥವೂ
ಸಂಪೂರ್ಣ ವಾಯಿತು.**

## ನಮ್ಮ ಪ್ರಕಾಶನದಿಂದ ಪ್ರಕಟವಾದ ಗ್ರಂಥಗಳು

| | | | |
|---|---|---|---|
| 1. | ಖಂಡನತ್ರಯ - | ಕನ್ನಡ ಅನುವಾದ ದಿ. ಪ್ರೊ. ಕೃಷ್ಣಸ್ವಾಮಿ ರಾವ್ | 35.00 |
| 2. | ಮಣಿಮಂಜರಿ - | ಕನ್ನಡ ಅನುವಾದ, ವಿದ್ವಾನ್ ಕೆ. ಸತ್ಯನಾರಾಯಣಆಚಾರ್ಯರಿಂದ | 70.00 |
| 3. | ಹನುಮದ್ವಿಲಾಸ - | ತಿಪ್ಪಣ್ಣಾರ್ಯ ವಿರಚಿತ. | 50.00 |
| 4. | ಪ್ರಮಾಣ ಚಂದ್ರಿಕಾ - | ಕನ್ನಡ ಅನುವಾದ-ವಿದ್ವಾನ್ ಅಶ್ವತನಾರಾಯಣಾಚಾರ್ಯ ಪೂರ್ಣಯ್ಯ (ಚಲಾರಿ ಶೇಷಾಚಾರ್ಯಕೃತ) | 85.00 |
| 5. | ಶ್ರೀ ಪುರುಷ ಸೂಕ್ತ - | ಋಗ್ವೇದಿಯ-ಶ್ರೀ ರಾಘವೇಂದ್ರ ತೀರ್ಥರ, ಶ್ರೀ ಸತ್ಯಾಭಿನವತೀರ್ಥರ, ಶ್ರೀ ಸತ್ಯಸಂದತೀರ್ಥರ, ಟಿಪ್ಪಣಿಯೊಂದಿಗೆ | 50.00 |
| 6. | ಶ್ರೀ ತತ್ವಸುವ್ವಾಲಿ - | ಶ್ರೀ ಜಗನ್ನಾಥದಾಸ ವಿರಚಿತ | 40.00 |
| 7. | ಶ್ರೀ ವಿಷ್ಣುಸ್ತುತಿ - | ಶ್ರೀ ಸತ್ಯಸಂದತೀರ್ಥ ವಿರಚಿತ ಅರ್ಥಾನುವಾದ-ಧಾಸವಾಣಿ ವಿದ್ವಾನ್ ಶ್ರೀ ಎಂ.ಟಿ. ಪ್ರಹ್ಲಾದರವರಿಂದ | 50.00 |
| 8. | ವಾಯುದೇವ ಕೃತ - | ವಿಶ್ವರೂಪಸ್ತುತಿ (ವಾಯು ಪುರಾಣಣಾ) | 40.00 |
| 9. | ಪವಮಾನ ಸೂಕ್ತಾರ್ಥ ಪ್ರಕಾಶ - | ಸಂಸ್ಕೃತ ಮೂಲ ವಿದ್ವಾನ್ ಧ್ವಾರಕಾನಾಭಚಾರ್ಯ ಕನ್ನಡ ಅನುವಾದ ವಿದ್ವಾನ್ ಹೊಳವನಹಳ್ಳಿ ಶ್ರೀನಿವಾಸಚಾರ್ಯ | 105.00 |
| 10. | ಸೂತ್ರಧೀಪಿಕಾ - | ಮೂಲ ಶ್ರೀ 108 ಜಗನ್ನಾಥಯತೀಯರ - ಕನ್ನಡ ಅನುವಾದ ಡಾ|| ವಿದ್ವಾನ್ ಬ್ರಹ್ಮರ್ಷಿ ಪ್ರಹಲ್ಲಾದಾಚಾರ್ಯ ಉಮರ್ಜಿ | 100.00 |

### ಸಂಸ್ಕೃತ ಗ್ರಂಥಗಳು :

| | | |
|---|---|---|
| 1. | ಶ್ರೀ ವೆಂಕಟೇಶಮಹಾತ್ಮೆ - ಭವಿಷ್ಯೊತ್ತರ ಪುರಾಣ-ಹುಲಿಮುನಿ ಆಚಾರ್ಯ ವಿರಚಿತ | 210.00 |
| 2. | ಪ್ರಪಂಚ ಮಿತ್ಯಾತ್ವಾನುಮಾನಖಂಡನ - ಟೀಕಾ ಶ್ರೀನಿವಾಸತೀರ್ಥ ಟಿಪ್ಪಣಿ, ಶ್ರೀ ಸತ್ಯನಾಥತೀರ್ಥ ಟಿಪ್ಪಣಿ | 70.00 |
| 3. | ಉಪಾದಿಖಂಡನ - ಟೀಕಾ - ಶ್ರೀನಿವಾಸ ತೀರ್ಥರ ಟಿಪ್ಪಣಿ, ಶ್ರೀ ಸತ್ಯನಾಥ ತೀರ್ಥ ಟಿಪ್ಪಣಿ - ವಿದ್ವಾನ್ ರೊಟ್ಟಿಸೀತು ಮಾಧವಾಚಾರ್ಯ | 60.00 |
| 4. | ಮಾಯವಾದ ಖಂಡನ ಮೂಲ ಟೀಕಾ ಶ್ರೀನಿವಾಸತಾರ್ಥರ ಟಿಪ್ಪಣಿ- ಕನ್ನಡ ಅನುವಾದ ಶ್ರೀ ಸತ್ಯನಾಥ ತೀರ್ಥರ ಟಿಪ್ಪಣಿ, ಕನ್ನಡ ಅನುವಾದ ಸಮೇತ | 65.00 |

### ನಮ್ಮ ಮುಂದಿನ ಪ್ರಕಟಣೆಗಳು :

1. ತತ್ತೋದ್ಯೋತ ಟೀಕಾ ನಾರೋಪಂತೀಯ ಟಿಪ್ಪಣಿ (ನಾರಾಯಣೀಯಂ) ಕನ್ನಡ ಅನುವಾದ - ವಿದ್ವಾನ್ ದ್ವಾರಕನಾಥಾಚಾರ್ಯರಿಂದ
2. ವೆಂಕಟೇಶ ಮಹಾತ್ಮಾ-ಆದಿತ್ಯಪುರಾಣ ವ್ಯಾಖ್ಯಾನದೊಂದಿಗೆ ಕನ್ನಡ ಅನುವಾದ - ವಿದ್ವಾನ್ ದ್ವಾರಕಾನಾಥಾಚಾರ್ಯ
3. ವಾಲ್ಮಿಕಿರಾಮಾಯಣ - (ಭಾಲಕಾಂಡ) - ಶ್ರೀಸತ್ಯಪರಾಯಣ ತೀರ್ಥ ವ್ಯಾಖ್ಯಾನ

# ಪುಸ್ತಕಗಳು ದೊರೆಯುವ ಸ್ಥಳ

1. ವೇದಾಂತ ಬುಕ್ ಹೌಸ್
ಅಪ್ಪೂರಾವ್ ಸ್ಟ್ರೀಟ್, 6ನೇ ಮುಖ್ಯ ರಸ್ತೆ,
ಚಾಮರಾಜಪೇಟೆ, ಬೆಂಗಳೂರು-18
ದೂರವಾಣಿ : 26507590

2) ಪೂಜಾ ಬುಕ್ ಹೌಸ್
64, ಪಾರ್ವತಿಭವನ, 6ನೇ ಮುಖ್ಯ ರಸ್ತೆ,
ಚಾಮರಾಜಪೇಟೆ, ಬೆಂಗಳೂರು-18
ದೂರವಾಣಿ : 9900384329

3) ವಂದನಾ ಬುಕ್ ಹೌಸ್
24/1, ನರಸಿಂಹರಾಜ ಕಾಲೋನಿ, 4ನೇ ಮುಖ್ಯ ರಸ್ತೆ,
9ನೇ ಅಡ್ಡ ರಸ್ತೆ, ಬೆಂಗಳೂರು - 19
ದೂರವಾಣಿ : 26770826, 9448988106

4) ಶ್ರೀಮನ್ ಸಿದ್ಧಾಂತ ಗ್ರಂಥಾಲಯ
ಪುಸ್ತಕ ವ್ಯಾಪಾರಿಗಳು
ರಥ ಬೀದಿ, ಉಡುಪಿ,
ದೂರವಾಣಿ : 0820-2526755

5) ಸಮಾಜ ಬುಕ್ ಡಿಪೋ
ಪುಸ್ತಕ ವ್ಯಾಪಾರಿಗಳು
ಶಿವಾಜಿ ರೋಡ್, ಧಾರವಾಡ, ದೂ. : 0836-2791616

6) ಆರ್.ಜಿ. ಪಬ್ಲಿಕೇಷನ್ಸ್
ಪುಸ್ತಕ ವ್ಯಾಪಾರಿಗಳು
ಜೋಡಿ ಆಂಜನೇಯಸ್ವಾಮಿ ರಸ್ತೆ,
ಸಾವಿತ್ರಿ ಕಾಲೋನಿ, ರಾಯಚೂರು
ದೂರವಾಣಿ : 9141689017, 241861 - 08532

7) ಗೀತಾ ಪಬ್ಲಿಕೇಷನ್ಸ್
ಪುಸ್ತಕ ವ್ಯಾಪಾರಿಗಳು
ಬಳೇಪೇಟೆ ವೃತ್ತ, ಬೆಂಗಳೂರು - 560 058
ದೂರವಾಣಿ : 22874226 - 65990390, 9844001278